- ವಿಜ್ಞಾನ ಮತ್ತು ಜ್ಯೋತಿಷ
- ಸಾಮಾಜಿಕ ವಿಪ್ಲವದಲ್ಲಿ ಕಾವ್ಯದ ಪಾತ್ರ
- ಮಹಾತ್ಮ ಗಾಂಧಿ ಎಂಬ ಮಹಾನ್ ಚೇತನ
- ಮಳೆಯನ್ನು ಕುರಿತು ಜನಪದರ ನಂಬಿಕೆಗಳು
- ಅಕ್ಟೋಬರ್ ಕ್ರಾಂತಿಯ ಹಂಬಲ, ನೆನಪುಗಳು
- ಕರ್ನಾಟಕವು ಕೈಗಾರಿಕಾ ರಾಜ್ಯವಾಗಿ ಹೊರಹೊಮ್ಮಬಹುದೇ ?
- ಪರಿಸರ – ಅಭಿವೃದ್ಧಿ ಅಂತರ್ ಸಂಘರ್ಷದಲ್ಲಿ ಕುದುರೆಮುಖ



# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಅಕ್ಟೋಬರ್ ೨೦೦೧ ಬೆಲೆ : ರೂ. ೧೦



# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ, ಹರಿಣಿ, ವಿಶ್ವ,*
*ಜಿ. ಎಂ. ಬೊಮ್ನಳ್ಳಿ, ಎನ್. ಆರ್. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ*
*ಮುಖಚಿತ್ರ : ಕುದುರೆಮುಖ ಅದಿರು ಪುಡಿ ಮಾಡುವ ಘಟಕ*
*ಗಾಂಧಿ : ಶಿಲ್ಪಿ ರ್‍ಯಬಿಚೆವ್ ದ್ಮಿತ್ರಿಯವರ ಕೃತಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಬಾ**ಳ ಠಾಕ್ರೆ ಎಂಬ ಸ್ವಯಂ ಘೋಷಿತ ಮೇಧಾವಿಯ ನೆರಳಲ್ಲಿ ಬೆಳೆದ ಶಿವಸೇನೆಯ ಕಾರ್ಯಕರ್ತನೆಂದರೆ ಅಮೃತತ್ವ ಪಡೆದಿರುವವನೆಂಬ ಭ್ರಾಂತಿ ಮುಂಬೈ - ಠಾಣಾ ನಗರಗಳಲ್ಲಿ ಬೇರೂರಿರುವುದರಿಂದಲೋ ಏನೋ ಇತ್ತೀಚೆಗೆ ಅಲ್ಲಿನ ಶಿವಸೇನಾ ಕುಸ್ತಿಪಟುವೊಬ್ಬನು ಆಸ್ಪತ್ರೆ ಸೇರುವ ವೇಳೆಗೆ ಸತ್ತಿದ್ದರಿಂದ ಆ ವ್ಯಕ್ತಿಯ ವಾನರಸೇನೆಯು ಇಡೀ ಆಸ್ಪತ್ರೆಯನ್ನು ನುಚ್ಚುನೂರು ಮಾಡಿತು. ಆ ಗೂಂಡಾ ಪಡೆಯನ್ನು ಹಿಡಿದು ಶಿಕ್ಷಿಸಲು ಮಹಾರಾಷ್ಟ್ರ ಸರ್ಕಾರಕ್ಕೆ ಅಳುಕು. ಆಮೇಲೆ ಆ ಪಡೆ ಭಯೋತ್ಪಾದಕತೆಯ ಲಕ್ಷಣ ಮೈಗೂಡಿಸಿಕೊಂಡಾಗ ಜನ ಎಷ್ಟು ಅನೈತಿಕ ಮಟ್ಟಕ್ಕಿಳಿದಿದ್ದಾರೆಂದು ಕೊರಗುವುದು !

ಇದೇ ಸಂದರ್ಭದಲ್ಲಿ 'ಲಜ್ಜಾ' ಎಂಬ ಚಲನಚಿತ್ರವನ್ನು ಕಡ್ಡಾಯವಾಗಿ ಹಿಂತೆಗೆದುಕೊಳ್ಳಬೇಕೆಂದು ಠಾಕ್ರೆ ಆಗ್ರಹಪಡಿಸಿದ್ದು ವರದಿಯಾಗಿದೆ. ಆತನ ಆಗ್ರಹವೆಂದರೆ ಆಜ್ಞೆಗೆ ಸಮವೆಂದು ಮುಂಬೈ ವಲಯಗಳಲ್ಲಿ ಭಾವಿಸಲಾಗುತ್ತದೆ. ಆಂಗ್ಲ ಭಾಷೆಯಲ್ಲಿ ಮಾತನಾಡುವ ಇಬ್ಬರು ಹಿಂದಿ ಬೆಡಗುಗಾರ್ತಿಯರಿರುವ ಈ ಚಿತ್ರವನ್ನು ಠಾಕ್ರೆ ಅದೇಕೆ ಅಷ್ಟು ದ್ವೇಷಿಸುತ್ತಾರೆಂಬ ಪ್ರಶ್ನೆ ಬೇಡ. ಆತ ಹೇಳಿದ ಒಂದು ಮಾತಿದು, ''ನೀವು ಆ ಚಿತ್ರವನ್ನು ರದ್ದು ಮಾಡದಿದ್ದರೆ **ನಮ್ಮದೇ ಆದ ರೀತಿಯಲ್ಲಿ** ನಾವು ಅದನ್ನು ರದ್ದು ಮಾಡುತ್ತೇವೆ.'' ಅಂದರೆ, ದೊಣ್ಣೆ, ಚಾಕು, ಚೂರಿ ಇತ್ಯಾದಿಗಳ ಮುಖಾಂತರ ಎಂದರ್ಥ. ಕಾಶ್ಮೀರದ ಮುಸಲ್ಮಾನ ಮಹಿಳೆಯರು ಬುರ್ಖಾ ಧರಿಸಬೇಕೆಂದು ವಿಧಿಸಿರುವ ಅನಾಮಧೇಯ ದುಷ್ಟ ತಂಡದ ಮಾತೂ ಇದೇ ಆಗಿದೆ : ''ನೀವು ಬುರ್ಖಾ ಧರಿಸದಿದ್ದಲ್ಲಿ **ನಮ್ಮದೇ ಆದ** ವಿಧಾನಗಳಿಂದ ಅದನ್ನು ಮಾಡಿಸುತ್ತೇವೆ.'' ಅವರು ಚಾಕು-ಚೂರಿಗಳಿಗೆ ಪರ್ಯಾಯವಾಗಿ ಆ್ಯಸಿಡ್ ಮತ್ತು ಗುಂಡು ಬಳಸುವುದಾಗಿ ಹೇಳಿದ್ದಾರೆ. ಹುರಿಯತ್‌ನ ಮುಂದಾಳೊಬ್ಬ ಇದನ್ನು ಟೀಕಿಸಿ ''ಮುಸಲ್ಮಾನ ಮಹಿಳೆಯರು ಬುರ್ಖಾ ಧರಿಸಬೇಕೆಂಬ ಬಯಕೆ ನನಗೂ ಇದೆ, ಆದರೆ ಅದನ್ನು ಬಲವಂತವಾಗಿ ಅವರ ಮೇಲೆ ಹೇರಬಯಸುವುದಿಲ್ಲ'' ಎಂಬ ಬುದ್ಧಿವಂತಿಕೆಯ ಮಾತಾಡಿದ್ದಾನೆ. ಬಲವಂತಪಡಿಸುತ್ತಿರುವವರನ್ನು ಪ್ರತಿಬಂಧಿಸದೆ ಒಂದು ಒಳ್ಳೆಯ ಹೇಳಿಕೆ ನೀಡುವುದಷ್ಟೇ ಈ ''ಸ್ವಾತಂತ್ರ್ಯ ಹೋರಾಟಗಾರರ ಪರಿಷತ್ತು'' (ಹುರಿಯತ್) ಮಾಡಬೇಕಾದ ಕೆಲಸವೇ ? ಹಿಂಸೆಯನ್ನು ಹತ್ತಿಕ್ಕದೆ ಕೇವಲ ಲೋಕಾಭಿರಾಮವಾಗಿ ಒಂದು ನುಡಿಮುತ್ತು ಸುರಿಸುವುದು ಹಿಂಸೆಗೆ ಪ್ರಚೋದನೆ ನೀಡುವ ಕ್ರಮವೇ ಆಗುತ್ತದೆ. ಠಾಕ್ರೆಯನ್ನು ಮಹಾರಾಷ್ಟ್ರ ಸರ್ಕಾರ ನಿಗ್ರಹಿಸುವುದಿಲ್ಲ. ಮಹಿಳೆಯರ ಮೇಲೆ ಹಲ್ಲೆ ಮಾಡುವವರನ್ನು ಕಾಶ್ಮೀರದ ಸರ್ಕಾರ ನಿಗ್ರಹಿಸುವುದಿಲ್ಲ. ಇದು ಅವರ ''ಪ್ರಜಾಪ್ರಭುತ್ವಾತ್ಮಕ ಆಡಳಿತದ ವೈಖರಿ.''

ಠಾಕ್ರೆ ಮತ್ತು ಹುರಿಯತ್‌ಗಳಿಗಿಂತ ವಿಶ್ವ ಹಿಂದು ಪರಿಷತ್ತಿನ ಅಶೋಕ್ ಸಿಂಘಾಲ್ ಹೇಗೆ ತಾನೆ ಕುಬ್ಜರಾಗಲು ಸಾಧ್ಯ ! ಆದ್ದರಿಂದ ಆ ಮಹನೀಯ ಹೇಳಿದ್ದಾರೆ : ''ಶಿವರಾತ್ರಿಯ ನಂತರ **ನಮ್ಮದೇ ಆದ ರೀತಿಯಲ್ಲಿ** ಅಯೋಧ್ಯೆಯ ರಾಮಮಂದಿರವನ್ನು ಕಟ್ಟಲು ಆರಂಭಿಸುತ್ತೇವೆ.'' ಹಾಗೆ ನೋಡಿದರೆ, ಅಯೋಧ್ಯೆಯಲ್ಲಿ ರಾಮನನ್ನು ಕಾಯುತ್ತಿರುವ ಐನೂರಕ್ಕೂ ಹೆಚ್ಚು ಗಂಡು ಮತ್ತು ಹೆಣ್ಣು ಪೊಲೀಸರು ಸಿಂಘಾಲ್‌ಗೆ ಜಾಗ ಬಿಟ್ಟುಕೊಟ್ಟು ಮನೆಗಳಿಗೆ ಹೋಗಲು ಸಿದ್ಧರಿರಬಹುದು. ಕಾಯುವ ಕೆಲಸ ಅವರಿಗೆ ನೀರಸವಾಗಿದೆ.

ಮುಖ್ಯವಾಗಿ ನಮ್ಮೆದುರಿಗಿರುವ ಪ್ರಶ್ನೆಗಳು ಇವು : ದೇಶದಲ್ಲಿ ''ತಮ್ಮದೇ ಆದ ರೀತಿಯಲ್ಲಿ'' ಕಾರ್ಯಾಚರಣೆ ಮಾಡುತ್ತಿರುವವರ ಬಗ್ಗೆ ಗೃಹಸಚಿವ ಅದ್ವಾನಿ ಕಾರ್ಯಕ್ರಮವೇನು ? ಅಥವಾ ಅವರೂ **ತಮ್ಮದೇ ರೀತಿಯಲ್ಲಿ** ಹಿಂದೆಲ್ಲಾ ಯಾತ್ರೆಗಳನ್ನು ನಡೆಸಿರುವುದರಿಂದ ಅಂತಹ ಪ್ರವೃತ್ತಿಯನ್ನು ಮಾನ್ಯ ಮಾಡುತ್ತಾರೋ ? ಆಳುವ ವರ್ಗದ ಪರವಾಗಿರುವ ಕಾನೂನು ಈಗ ಸ್ವಯಂ ಘೋಷಿತ ಸಮಾಜ ಸುಧಾರಕ ಗೂಂಡಾ ಗುಂಪುಗಳ ಪರವಾಗಿಯೂ ಮಾರ್ಪಟ್ಟಿದೆಯೇ ?

ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಇನ್ನೊಂದು ಸನ್ನಿವೇಶವನ್ನು ಕಲ್ಪಿಸಿಕೊಳ್ಳೋಣ : ನೀರಾ ಚಳುವಳಿ ನಡೆಸುತ್ತಿರುವ ರೈತರು ನಾಳೆ ಮಾನ್ಸಾಂಟೋ ಇತ್ಯಾದಿ ರಾಕ್ಷಸ ಶಕ್ತಿಗಳ ವಿರುದ್ಧ ''ತಮ್ಮದೇ ಆದ ರೀತಿಯಲ್ಲಿ'' ಪ್ರತಿಭಟನೆ ಪ್ರಾರಂಭಿಸುತ್ತಾರೆನ್ನಿ. ಬೇರೆ ಸಂದರ್ಭಗಳಲ್ಲಿನ ನಿಷ್ಕ್ರಿಯತೆಯನ್ನು ಅದ್ವಾನಿ ಗುಂಪು ಆಗಲೂ ಪ್ರದರ್ಶಿಸುತ್ತದೆಯೋ ಅಥವಾ ದೊಡ್ಡಣ್ಣ ಅಮೆರಿಕಾಕ್ಕೆ ಬರೆ ಹಾಕುವುದು ಸಾಧುವಲ್ಲವೆಂದು ರೈತರನ್ನು ಜೈಲಿಗೆ ಕಳಿಸುತ್ತದೆಯೋ ?

ಇದರರ್ಥ ಸ್ಪಷ್ಟವಿದೆ : ನಮ್ಮ ಪ್ರಜಾಪ್ರಭುತ್ವದಲ್ಲಿ ಆಳುವ ವರ್ಗಕ್ಕೆ ಒಂದು ಕಾನೂನು, ದುಡಿಯುವ ಜನರಿಗೇ ಒಂದು ಕಾನೂನು. ಠಾಕ್ರೆ ಬಣವು ಆಳುವ ವರ್ಗದ ಭಂಟರ ಸ್ಥಾನದಲ್ಲಿದ್ದರೆ ಕಾಶ್ಮೀರದ ಹುರಿಯತ್ ಬೆಂಬಲದಿಂದ ಬುರ್ಖಾ ಪರ ಚಳುವಳಿ ಹೂಡುವ ಗೊಡ್ಡು ಸಂಪ್ರದಾಯವಾದಿಗಳು ಯಾವ ಕಾನೂನಿಗೂ ಹೊರತಾದವರು. ಪರಿಸ್ಥಿತಿ ಹೀಗೇ ಮುಂದುವರಿದರೆ ಪ್ರಜಾಪ್ರಭುತ್ವವಾದಿ ಹೋರಾಟಗಳು ನಡೆಯಬೇಕಾದೆಡೆ ಆಂತರಿಕ ನಾಗರಿಕ ಸಂಘರ್ಷಗಳು ಬೆಳೆಯುತ್ತವೆ. ಆದ್ದರಿಂದ ಠಾಕ್ರೆ ಮಾದರಿಯ ಪಡೆಗಳಿಗೆ ಲಗಾಮು ಹಾಕಲು ಅಂಜಬಾರದು. ''ತಮ್ಮದೇ ಆದ ರೀತಿಯಲ್ಲಿ'' ಎಂಬ ಸೂತ್ರಕ್ಕೆ ಚಾಲನೆ ಕೊಟ್ಟ ಅದ್ವಾನಿ ತಂಡ ಇದನ್ನು ಮಾಡುತ್ತದೆಂದು ಹೇಗೆ ನಿರೀಕ್ಷಿಸುವುದು ?

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೩ ಅಕ್ಟೋಬರ್ ೨೦೦೧



*ಮುದ್ರಕ-ಪ್ರಕಾಶಕ*
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

# ಸಂಪಾದಕೀಯ

## ಸೊಕ್ಕಿನ ಪ್ರತಿಕ್ರಿಯೆ ಸಲ್ಲದು

ಅಮೆರಿಕಾದ ಬಂಡವಾಳ ಮತ್ತು ಅಧಿಕಾರಗಳಿಗೆ ಪ್ರತೀಕದಂತೆ ನಿಂತು ಹತ್ತಿರದ ಸ್ವಾತಂತ್ರ್ಯಮೂರ್ತಿಗೆ ಸವಾಲೆಸೆಯುತ್ತಿದ್ದ ನ್ಯೂಯಾರ್ಕಿನ ವಿಶ್ವ ವ್ಯಾಪಾರ ಕೇಂದ್ರದ ಗಗನಚುಂಬಿಯು ನೆಲಸಮವಾಗಿದೆ. ಅದರೊಟ್ಟಿಗೆ ನೂರಾರು ಜನ ಸುಟ್ಟು ಬೂದಿಯಾದರು. ವಿಶ್ವದೆಲ್ಲೆಡೆ ಇದಕ್ಕೆ ಸಹಾನುಭೂತಿ ಪ್ರಕಟವಾಗುತ್ತಿರುವಾಗ ವಾಷಿಂಗ್‌ಟನ್ನಿನಲ್ಲಿ ಪ್ರಭುತ್ವದ ಚುಕ್ಕಾಣಿ ಹಿಡಿದಿರುವವರು ತಮ್ಮೆಲ್ಲ ಕೃತ್ಯಗಳಿಗೂ ಪ್ರಪಂಚದ ಎಲ್ಲ ಜನ ಬೆಂಬಲ ನೀಡುತ್ತಿದ್ದಾರೆಂದು ಭ್ರಮಿಸಿದಂತಿದೆ. ಪ್ರತೀಕಾರದ ಧ್ವನಿಯನ್ನು ಮೊಳಗಿಸುತ್ತಿರುವ ಶ್ವೇತಭವನವು ಕಳೆದ ಐದು ದಶಕಗಳಲ್ಲಿ ತಾನು ನಿರ್ವಹಿಸಿರುವ ರಾಜಕೀಯ ಹಾಗೂ ಆರ್ಥಿಕ ದುಷ್ಕೃತ್ಯಗಳ ಮನನ ಮಾಡಿಕೊಳ್ಳುವುದು ಆರೋಗ್ಯಕರ. ಸೆಪ್ಟೆಂಬರ್ ೧೧ರ ಘಟನೆಗಿಂತಲೂ ಘೋರವಾದ ಕುಕೃತ್ಯಗಳನ್ನು ಮಾನವ ಜನಾಂಗ ಈಚಿನ ದಶಕಗಳಲ್ಲಿ ಕಂಡಿದೆ. ಆದರೆ ಬೇರೆ ದುರಂತಗಳನ್ನು ಮಾಧ್ಯಮಗಳು ಇಷ್ಟು ವ್ಯಾಪಕವಾಗಿ ಪ್ರಚುರಪಡಿಸಲಿಲ್ಲ. ಯಾರ ಕೈಲಿ ಮಾಧ್ಯಮಗಳ ಕೀಲಿಗಳಿವೆಯೋ ಅವರು ಅಮೆರಿಕಾದ ಕಷ್ಟ-ನಷ್ಟಗಳನ್ನು ಅನನ್ಯವೆಂಬ ರೀತಿಯಲ್ಲಿ ಜಗತ್ತಿಗೆ ಪರಿಚಯಿಸಿದ್ದಾರೆ. ಸಾವಿನಲ್ಲೂ ಎರಡು ವರ್ಗಗಳಿವೆ : ಅಮೆರಿಕಾದವರು ಸತ್ತರೆ ಅದು ವಿಪತ್ತು, ಅದೇ ಸೆರ್ಬಿಯಾ - ಇರಾಕ್ - ಪ್ಯಾಲಿಸ್ಟೈನ್ - ಪೂರ್ವ ಟಿಮೋರ್ - ಗ್ರೆನಡಾ ಮುಂತಾದೆಡೆಗಳಲ್ಲಿ ಅಮೆರಿಕಾದ ಹೊಡೆತಕ್ಕೆ ಸಿಕ್ಕಿ ಜನ ಸತ್ತರೆ ಅದು ನಾಗರಿಕತೆ ಮತ್ತು ಪ್ರಜಾಪ್ರಭುತ್ವಗಳಿಗೆ ತೆರಬೇಕಾದ ಬೆಲೆ ಅಥವಾ ದಂಡ ! ತಾಯಂದಿರು ಆ ದೇಶಗಳಲ್ಲೂ ಕರುಳು ಕಿತ್ತುಬರುವಂತೆ ದುಃಖಿಸುತ್ತಾರೆಂಬುದು ಬಿ.ಬಿ.ಸಿ., ಸಿ.ಎನ್.ಎನ್. ಮುಂತಾದ ಮಾಧ್ಯಮಗಳಿಗೆ ಅಪ್ರಸ್ತುತ. ಬುಷ್‌ಗೆ ರೋಷ ಬಂದರೆ ಅದು ಮಾನವೀಯವಾದ್ದು, ಸದ್ದಾಂಗೆ ರೋಷ ಬಂದರೆ ಅದು ಬರ್ಬರವಾದ್ದು ಎಂಬ ಚಿತ್ರಣವನ್ನು ವಿಶ್ವದ ಸಾಮಾನ್ಯ ಜನತೆ ಮಾನ್ಯ ಮಾಡುವುದಿಲ್ಲ. ಅವರಿಗೆ ಎಲ್ಲ ಸಾವೂ ಅರೋಚಕವೇ. ಅದು ಇಲ್ಲದಂತೆ ಮಾಡುವುದೇ ಜನತೆಯ ಆಕಾಂಕ್ಷೆ.

ನ್ಯೂಯಾರ್ಕಿನ ಘಟನೆಗೆ ಯಾರು ಕಾರಣವೆಂದು ಅಮೆರಿಕದ ಅಧ್ಯಕ್ಷರ ತೀರ್ಮಾನಕ್ಕೆ ಪುರಾವೆ ಒದಗಿಸಬೇಕೆಂದು ಯಾರಾದರೂ ಕೇಳಿದರೆ ಅವರನ್ನು ಭಯೋತ್ಪಾದಕರ ಬೆಂಬಲಿಗರೆಂದು ಅಮೆರಿಕಾದ ಮಾಧ್ಯಮಗಳು ಘೋಷಿಸಿಬಿಡುತ್ತವೆ. ಕೇವಲ ಹದಿನೈದು ವರ್ಷಗಳ ಹಿಂದೆ ಅಫ್ಘಾನಿಸ್ತಾನದಲ್ಲಿ ತಾಲಿಬಾನ್ ಜಡ್ಡು ಸಂಪ್ರದಾಯವಾದಿಗಳನ್ನು ಬೆಳೆಸಿ ಮೆರೆಸಿದ ಅಮೆರಿಕಾ ಇಂದು ಅವರು ಮಾನವ ಶತ್ರುಗಳೆಂಬ ತೀರ್ಮಾನಕ್ಕೆ ಬರಲು ಏನೆಲ್ಲಾ ಸಂಶೋಧನೆಗಳು ಬೇಕಾಗಿದ್ದುವೇ ಎಂಬ ಆಶ್ಚರ್ಯ ಮೂಡುತ್ತದೆ. ಇದೇ ತಾಲಿಬಾನ್‌ಗಳು ಕಾಬೂಲಿನಲ್ಲಿ ವಿಶ್ವಸಂಸ್ಥೆಯ ಪ್ರತಿನಿಧಿಗಳ ಕಟ್ಟಡಕ್ಕೆ ಲಗ್ಗೆಯಿಟ್ಟು ಅದರೊಳಗೆ ಆಶ್ರಯ ಪಡೆದಿದ್ದ ಅಫ್ಘಾನಿಸ್ತಾನದ ಪ್ರಧಾನಿ ನಜೀಬುಲ್ಲಾರನ್ನು ಗುಂಡಿಟ್ಟು ಕೊಂದಾಗ ಅಮೆರಿಕಾ ಚಕಾರವೆತ್ತಲಿಲ್ಲ. ಈಗ ಜಾರ್ಜ್ ಬುಷ್ ಹೇಳುತ್ತಾರೆ, ತಮ್ಮ ಮತ್ತು ಭಯೋತ್ಪಾದಕರ ನಡುವಣ ಸಂಘರ್ಷವು ಒಳಿತು ಮತ್ತು ಕೆಡಕುಗಳ ನಡುವಣ ಸಂಘರ್ಷ ಎಂದು. ಮಹಾಭಾರತದಲ್ಲಿ ಪ್ರತಿಪಾದಿಸಲಾದ ಒಳಿತು-ಕೆಡಕುಗಳ ಸೆಣೆಸಾಟ ಈಗ ಮತ್ತೊಮ್ಮೆ ಮರುಕಳಿಸಿದೆಯೆಂದೂ, ಭಗವಂತನ ಅಪರಾವತಾರವು ವಾಷಿಂಗ್‌ಟನ್ನಿನ ಶ್ವೇತಭವನದಲ್ಲಿ ಆಗಿದೆಯೆಂದೂ ನಾವು ಭಾವಿಸಬೇಕೆಂದು ನಿರೀಕ್ಷಿಸಿದ್ದರೆ ಅದು ಅಮೆರಿಕಾ ಸರ್ಕಾರದ ಮೂರ್ಖತನವಾಗುತ್ತದೆ. ಚರಿತ್ರೆಯನ್ನು ಜನ ಬೇಗನೆ ಮರೆತುಬಿಡುತ್ತಾರೆಂದು ಹೇಳುತ್ತಾರೆ; ಆದರೆ ಅದೆಷ್ಟೇ ಮರೆತರೂ ಅಮೆರಿಕಾ ಸರ್ಕಾರದ ಪೈಶಾಚಿಕ ಕೃತ್ಯಗಳನ್ನು ನೆನೆಸದೆ ಇರಲಾಗದು. ಒಂದೆರಡಾಗಿದ್ದರೆ ಮರೆಯುತ್ತಿದ್ದೆವೇನೋ, ಆದರೆ ಪಟ್ಟಿ ಅತಿ ದೀರ್ಘವಾದ್ದು : ಹಿರೋಷಿಮಾ-ನಾಗಸಾಕಿ, ಕೊರಿಯಾ, ವಿಯೆಟ್ನಾಂ, ಕ್ಯೂಬಾ, ಪ್ಯಾಲಿಸ್ಟೈನ್, ಕಂಬೋಡಿಯಾ, ಇಂಡೋನೇಷ್ಯಾ, ಗ್ವಾಟೆಮಾಲಾ, ನಿಕರಾಗ್ವ, ಗ್ರೆನಡಾ, ಗಯಾನಾ, ಚಿಲಿ, ಎಲ್ ಸಾಲ್ವೆಡಾರ್, ಪನಾಮಾ..... ಇನ್ನೂ ಎಷ್ಟು ನಿದರ್ಶನಗಳು ಬೇಕು ! ಆದ್ದರಿಂದ ಈ ಘರ್ಷಣೆಯು ಎರಡು ಘನೀಭೂತ ಕೆಡಕುಗಳ ನಡುವೆಯೇ ಹೊರತು ಒಳಿತು-ಕೆಡಕುಗಳ ನಡುವೆಯಲ್ಲ. ಭಾರತಕ್ಕೆ ಇದು ಅತ್ಯಂತ ಸ್ಪಷ್ಟವಾದ ವಿಷಯ.

ಒಂದು ರಾಜ್ಯಪ್ರಭುತ್ವವು ಭಯೋತ್ಪಾದಕತೆಯನ್ನು ಮೈಗೂಡಿಸಿಕೊಂಡಾಗ ಎಷ್ಟು ಭೀಕರ ಹತ್ಯೆಗಳು, ಅನಾಹುತಗಳು ಆಗಬಹುದೆಂಬುದಕ್ಕೆ ಅಮೆರಿಕಾಕ್ಕಿಂತ ದೊಡ್ಡ ನಿದರ್ಶನವಿಲ್ಲ. ವಿಶ್ವಸಂಸ್ಥೆಯನ್ನು ಮೀರಿ ನಿಂತಿರುವ ಆ ದೇಶವನ್ನು ಸೈನಿಕ ಬಲದಿಂದ ಅಥವಾ ಶಸ್ತ್ರಾಸ್ತ್ರಗಳ ಬಲದಿಂದ ನಿಗ್ರಹಿಸುವುದು ಆಗದ ಮಾತು. ಸೋವಿಯೆತ್ ಒಕ್ಕೂಟವು ಪ್ರಬಲವಾಗಿದ್ದ ಹಿನ್ನೆಲೆಯಲ್ಲಿ ವಿಯೆಟ್ನಾಂ ಅದನ್ನು ಸಾಧಿಸಿತ್ತು. ಈಗಂತೂ ಅಮೆರಿಕಾದ ಭಂಟರಂತೆ ವರ್ತಿಸುವ ವಿಶ್ವದ ಹಲವು ಸರ್ಕಾರಗಳು ಜನವಿರೋಧಿ ನೀತಿಗಳನ್ನು ಅನುಸರಿಸುತ್ತಿವೆ. ವೈಯಕ್ತಿಕ ಅಥವಾ ಗುಂಪುಗಳ ಭಯೋತ್ಪಾದಕತೆ ಮೊಳಕೆ ಹೊಡೆಯುವುದು ಈ ಹಿನ್ನೆಲೆಯಲ್ಲಿ. ಅಮೆರಿಕಾ ಸರ್ಕಾರವು ಇರಾಕ್, ಕ್ಯೂಬಾ, ಲಿಬ್ಯಾ, ಉತ್ತರ ಕೊರಿಯಾ ಮುಂತಾದ ರಾಷ್ಟ್ರಗಳಲ್ಲಿ ಪುಂಡು ಸರ್ಕಾರಗಳಿವೆಯೆಂದು ಹೇಳುತ್ತದೆ. ಅದನ್ನನುಸರಿಸಿ ಬಾಲಂಗೋಚಿ ಮಾಧ್ಯಮಗಳು ಅದನ್ನೇ ಪ್ರತಿಧ್ವನಿಸುತ್ತವೆ. ಆದರೆ ಅಮೆರಿಕಾ ಸರ್ಕಾರಕ್ಕಿಂತಲೂ ಮಿಗಿಲಾದ ಪುಂಡು ಸರ್ಕಾರ ಎಲ್ಲಿದೆ ? ಬೇರೆಲ್ಲ ಸರ್ಕಾರಗಳೂ ವಿಶ್ವಸಂಸ್ಥೆಯನ್ನು ಗಣನೆಗೆ ತೆಗೆದುಕೊಂಡರೆ ಎಡವಟ್ಟು ಅಮೆರಿಕಾಕ್ಕೆ ಮಾತ್ರ ತನ್ನದೇ ಹಾದಿ. ಸೆರ್ಬಿಯಾದಲ್ಲಿ ಸೆಪ್ಟೆಂಬರ್ ೧೧ರ ಘಟನೆಗಿಂತ ನೂರುಪಟ್ಟು ಹೆಚ್ಚಾದ ವಿಧ್ವಂಸಕ ಕೃತ್ಯವನ್ನೆಸಗಿದ ಅಮೆರಿಕಾವು ವಿಶ್ವಸಂಸ್ಥೆಗಿಂತ ತಾನು ದೊಡ್ಡವ ಎಂದು ಭಾವಿಸಿ ಅಂತೆಯೇ ನಡೆದುಕೊಳ್ಳುತ್ತದೆ. ವಿಶ್ವಸಂಸ್ಥೆಯ ಕಾರ್ಯದರ್ಶಿ ಕೋಫಿ ಅಣ್ಣನ್ ಆ ಬಗ್ಗೆ ಉಸಿರೆತ್ತುವುದಿಲ್ಲ. ಈಗಲೂ ಅಫ್ಘಾನಿಸ್ತಾನದ ವಿರುದ್ಧ ಕ್ರಮ ಕೈಗೊಳ್ಳುವಾಗ ಅಮೆರಿಕಾ ವಿಶ್ವಸಂಸ್ಥೆಯ ನೇತೃತ್ವವನ್ನು ಬಯಸುವುದಿಲ್ಲ. ಇದು ನಾಗರಿಕ ಪ್ರಜಾಪ್ರಭುತ್ವದ ಮಾದರಿ ಹೇಗಾದೀತು ? ಇದನ್ನು ಭಾರತವು ಇಡೀ ವಿಶ್ವಕ್ಕೆ ತಿಳಿಯಹೇಳಬೇಕು.

ತನ್ನ ರಕ್ಷಣಾ ಕೇಂದ್ರವಾದ ಪೆಂಟಗನ್ನಿಗೇ ಬೆಂಕಿ ಇಕ್ಕಿಸಿಕೊಂಡ ಅಮೆರಿಕಾ ಹೊರಗಡೆ ಹೋಗಿ ಬೇರೆ ರಾಷ್ಟ್ರಗಳನ್ನು

ಸದೆಬಡೆಯುವ ಸಾಮರ್ಥ್ಯವನ್ನು ಹೊಂದಿದೆ. ಒಂದೊಂದು ಕಾಲಕ್ಕೆ ಒಬ್ಬೊಬ್ಬರು ಅಮೆರಿಕಾಕ್ಕೆ ಶತ್ರುಗಳಂತೆ ಕಾಣುತ್ತಾರೆ. ಮಾಧ್ಯಮದ ಪ್ರಾಬಲ್ಯದಿಂದ ತನ್ನ ದೇಶದ ಜನ ಅದನ್ನು ನಂಬುವಂತೆ ಮಾಡಲು ಅಮೆರಿಕಾಕ್ಕೆ ಸಾಧ್ಯವಿದೆ. ಪಂಜಾಬಿನ ಸಿಖ್ಖರನ್ನು ಅರಬ್ಬರೆಂದು ತಿಳಿದು ಅವರ ಮೇಲೆ ಹಲ್ಲೆ ಮಾಡುವಷ್ಟು ಮೂಢರು ಅಮೆರಿಕಾದ ಜನರಲ್ಲ; ಆದರೆ ಪ್ರಪಂಚವು ಅದನ್ನು ನಂಬುವಂತೆ ಮಾಡುವ ಚಾಣಾಕ್ಷತನ ಆ ದೇಶದ ಮಾಧ್ಯಮಗಳಿಗೆ ಹಾಗೂ ರಾಜತಾಂತ್ರಿಕ ಸಿಬ್ಬಂದಿಗೆ ಇದೆ. ತಾನು ಅಭೇದ್ಯವೆಂದು ಜನರನ್ನು ಈವರೆಗೆ ಅಮೆರಿಕಾದ ಸರ್ಕಾರ ನಂಬಿಸಿತ್ತು. ಆ ನಂಬಿಕೆ ಹುಸಿಯಾದಾಗ ತಮ್ಮ ಸರ್ಕಾರವನ್ನು ದಂಡಿಸುವ ಬದಲು ಅಮೆರಿಕಾ ಮತ್ತು ಬ್ರಿಟನ್ನಿನ ಕೆಲವು 'ನಾಗರಿಕರು' ಭಾರತ-ಪಾಕಿಸ್ತಾನ ಸಂಜಾತರನ್ನು ಹಾಗೂ ಅರಬ್ಬರನ್ನು ಹಲ್ಲೆಗೆ ಗುರಿ ಮಾಡುತ್ತಿದ್ದಾರೆ. 'ಸ್ವತಂತ್ರ ವಿಶ್ವ'ದ ಪ್ರಜ್ಞಾವಲಯ ಇಷ್ಟು ಸಂಕುಚಿತವಾದ್ದೆಂದು ಪ್ರಪಂಚವು ಮೂಗಿನ ಮೇಲೆ ಬೆರಳಿಡಬೇಕಾಗಿ ಬಂದಿದೆ. ಇರಾಕಿನಲ್ಲಿ ನಡೆದ ನರಮೇಧವನ್ನು ಅಮೆರಿಕಾದ ಜನ ತಮ್ಮ ಮನೆಗಳಲ್ಲಿ ಕೂತು ದೂರದರ್ಶನದಲ್ಲಿ ನೋಡಿದರು, ಹೆಮ್ಮೆಯಿಂದ ಬೀಗಿದರು, ಬೆನ್ನು ತಟ್ಟಿಕೊಂಡರು, ಪ್ರಜಾಪ್ರಭುತ್ವಕ್ಕೆ ಜಯವಾಯಿತು ಎನ್ನುತ್ತಾ ಹಾಲು-ಮದ್ಯ ಕುಡಿದು ನಿದ್ದೆ ಹೋದರು. ಈಗ ತಮ್ಮ ಹೊಸ್ತಿಲಲ್ಲಿ ದುರಂತವನ್ನು ಕಂಡಿದ್ದಾರೆ, ಭಗ್ನಾವಶೇಷಗಳ ಮಧ್ಯೆ ಜೀವಿಸುತ್ತಿದ್ದಾರೆ, ಕಂದಮ್ಮಗಳ ಆಕ್ರಂದನವನ್ನು ಕೇಳುತ್ತಿದ್ದಾರೆ. ಇದರಿಂದ ಅವರ ಪ್ರಜ್ಞಾವಲಯ ವಿಸ್ತಾರವಾಗಬೇಕಾಗಿದೆ, ಜವಾಬ್ದಾರಿ ಹೆಚ್ಚಿದೆ. ತಮ್ಮ ಸರ್ಕಾರವು ಬೇರೆ ದೇಶಗಳ ಧ್ವಂಸ ಮಾಡಿದಾಗ ಆ ದೇಶಗಳಲ್ಲಿ ಇದೇ ಅನುಭವ ಹತ್ತು ಪಟ್ಟು, ನೂರು ಪಟ್ಟು ಆಗಿರುತ್ತದೆ. ತಮ್ಮ ಸರ್ಕಾರವು ಇಂತಹ ಅತಿರೇಕಕ್ಕೆ ಹೋಗದಂತೆ ತಡೆಯುವುದು ಮಾತ್ರವೇ ಅತ್ಯುತ್ತಮವಾದ ರಕ್ಷಣೆಯನ್ನು ಅಮೆರಿಕಾದ ಜನತೆಗೆ ಒದಗಿಸುತ್ತದೆ. ತಮ್ಮ ಸರ್ಕಾರದ ಭಯೋತ್ಪಾದಕತೆಯನ್ನು ಮೆಟ್ಟಿ ನಿಂತರೆ ಅಮೆರಿಕಾದ ಜನ ಇತರ ಬಣಗಳ ಭಯೋತ್ಪಾದಕತೆಗೆ ಬಲಿಯಾಗಬೇಕಾಗುವುದಿಲ್ಲ. ಆದ್ದರಿಂದಲೇ ಅವರ ಅಧ್ಯಕ್ಷರ ಅಟ್ಟಹಾಸವನ್ನು ತಡೆಯುವ ಕೆಲಸ ಅವರಿಂದ ಆಗಬೇಕಾಗಿದೆ. ಸೊಕ್ಕಿನ ಪ್ರತಿಕ್ರಿಯೆ ಸಲ್ಲದೆಂದು ಅವರಿಗೆ ಮನದಟ್ಟು ಮಾಡಿಕೊಡಬೇಕಾಗಿದೆ. ಇದು ಬೇರೆಲ್ಲ ಸರ್ಕಾರಗಳ ಕರ್ತವ್ಯ.

ಅಫ್ಘಾನಿಸ್ತಾನದ ಅನಧಿಕೃತ ಪೋಷಕನಾಗಿ ಪಾಕಿಸ್ತಾನ ದುಸ್ತರವಾದ ಸನ್ನಿವೇಶದಲ್ಲಿ ಸಿಲುಕಿರುವಾಗ ತನ್ನ ಭವಿಷ್ಯವನ್ನು ಸುಗಮಗೊಳಿಸಿಕೊಳ್ಳಬಹುದೆಂಬ ತಪ್ಪು ಲೆಕ್ಕಾಚಾರದಿಂದ ಭಾರತದ ಇಂದಿನ ಸರ್ಕಾರವು ಅಮೆರಿಕಾಕ್ಕೆ ಶರಣಾಗತಿಯನ್ನು ಘೋಷಿಸಿಕೊಂಡು ವಿನಮ್ರ ಸೇವಕನಂತೆ ನಿಂತಿರುವುದು ಸಿಟ್ಟು-ನಾಚಿಕೆಗಳನ್ನು ತರುವ ಸಂಗತಿ. ಕಳೆದ ಐದು ದಶಕಗಳಲ್ಲಿ ಅಮೆರಿಕಾ ತೋರಿರುವ ನೀತಿಯು ವಾಜಪೇಯಿ ಸರ್ಕಾರದ ಬಾಲಿಶ ಆಕಾಂಕ್ಷೆಗಳು ಫಲಿಸದಂತೆ ಮಾಡುವುದರಲ್ಲಿ ಸಂಶಯವಿಲ್ಲ. ನಮ್ಮ ಸಾರ್ವಭೌಮತ್ವವನ್ನು ಗಾಳಿಗೆ ತೂರಿರುವ ವಾಜಪೇಯಿ ಸರ್ಕಾರವು ದೇಶವನ್ನು ಇನ್ನೂ ಎಂತಹ ಪ್ರಪಾತಕ್ಕೆ ನೂಕಲಿಚ್ಛಿಸುತ್ತದೋ ತಿಳಿಯುವುದಿಲ್ಲ. ಪಾಕಿಸ್ತಾನದ ಭಯೋತ್ಪಾದಕತೆಯಿಂದ ಪಾರಾಗಲು ಅಮೆರಿಕಾದ ಭಯೋತ್ಪಾದಕತೆಯನ್ನು ತಬ್ಬಿಕೊಳ್ಳುವುದು ಯಾವ ಚಾಣಕ್ಯತಂತ್ರವೆಂಬುದನ್ನು ವಾಜಪೇಯಿ-ಜಸ್ವಂತ್ ಸಿಂಗ್ ವಿವರಿಸಿ ಹೇಳಬೇಕಾಗಿದೆ. ನಮ್ಮ ರಾಷ್ಟ್ರದಲ್ಲಿ ಸಾವಿರಗಟ್ಟಲೆ ಜನ ಹತರಾದಾಗ ದೇಶದಲ್ಲಿ ಎಂದೂ ಎರಡು ನಿಮಿಷ ಮೌನವನ್ನು ಆಚರಿಸದಿದ್ದ ನಾವು ನ್ಯೂಯಾರ್ಕಿನ ಸೆಪ್ಟೆಂಬರ್ ೧೧ರ ಘಟನೆಗೆ ಶ್ರದ್ಧೆಯಿಂದ ಮೌನ ಆಚರಿಸಿದ್ದೇವೆ. ಮೌನ ಆಚರಿಸಿದ್ದು ತಪ್ಪಲ್ಲ, ಅದರ ಹಿಂದಿನ ಲೆಕ್ಕಾಚಾರ ತಪ್ಪು. ಅಂದರೆ ನಾವು ರಾಷ್ಟ್ರೀಯತೆಯನ್ನು ಮೀರಿ ಬೆಳೆಯುತ್ತಿದ್ದೇವೆ ಎನ್ನಬಹುದೇ ? ಪಾತಕಿ ಅಮೆರಿಕಾದ ಸಖ್ಯದಿಂದ ಭಯೋತ್ಪಾದಕತೆಯನ್ನು ಎದುರಿಸುತ್ತೇವೆಂಬುದು ಸದಾ ಭಯದ ನೆರಳಿನಲ್ಲಿ ಬಾಳುವ ಪರಿಣಾಮವನ್ನುಂಟುಮಾಡೀತು ಎಂಬ ಎಚ್ಚರ ನಮಗೆ ಅತ್ಯಗತ್ಯ.

ಕಡೆಯದಾಗಿ ಒಂದು ನಿವೇದನೆ: ಕೊಳ್ಳೇಗಾಲದಿಂದ ಬಂದಿರುವ ಒಂದು ಸುದ್ದಿಯ ಪ್ರಕಾರ ಕಾಡಿನಲ್ಲಿ ಒಂದು ಮುಳ್ಳು ಚುಚ್ಚಿದ್ದರಿಂದ ವೀರಪ್ಪನ್‌ಗೆ ಕಿರು ಬೆರಳಿನಲ್ಲಿ ರಕ್ತ ಸುರಿದಿದೆಯಂತೆ. ಮುಳ್ಳಿನ ಪೊದೆ ತಾನೇ ಬೆಳೆಸಿದ್ದದ್ದು, ತನ್ನ ರಕ್ಷಣೆಗಾಗಿ. ಆದರೆ ಈಗ ಮುಳ್ಳಿನ ಪೊದೆಯನ್ನು ಧ್ವಂಸ ಮಾಡಲು ತೀರ್ಮಾನಿಸಿದ್ದಾನಂತೆ. ಅಮೆರಿಕಾದ ಸೆಪ್ಟೆಂಬರ್ ೧೧ರ ಘಟನೆ ಮತ್ತು ನಂತರದ ಬೆಳವಣಿಗೆಗಳು ಇದನ್ನೇ ಹೋಲುತ್ತವೆ.

*– ಜಿ. ರಾಮಕೃಷ್ಣ*

## ಕೊನೆಯಿಲ್ಲದ ಬೆತ್ತಲೆ ಮೆರವಣಿಗೆಗಳು

ಇತ್ತೀಚೆಗೆ ಬಳ್ಳಾರಿಯಲ್ಲಿ ನಡೆದಿರುವ ದಲಿತ ಮಹಿಳೆ ಎರ್ರಮ್ಮನ ಬೆತ್ತಲೆ ಮೆರವಣಿಗೆಯ ದೌರ್ಜನ್ಯದ ಘಟನೆ ಯಾವುದೇ ನಾಗರಿಕ ಸಮಾಜದ ಆತ್ಮಸಾಕ್ಷಿಯೂ ನಾಚಿಕೊಳ್ಳಬೇಕಾದ ಘಟನೆ. ಇಂತಹ ಅಮಾನುಷ ಕೃತ್ಯದ ಹೊಣೆಗಾರಿಕೆಯನ್ನು ಯಾರೋ ಕೆಲವರ ಮೇಲೆ ಹೊರಿಸಿ, ತಮ್ಮದೇನೂ ಪಾತ್ರವಿಲ್ಲವೆಂಬಂತೆ ಮಾತನಾಡುವುದು ಎಷ್ಟೇ ಸುಲಭವೆನಿಸಿದರೂ ಈ ಘಟನೆಯ ವಿವರಗಳು ನಮ್ಮ ಮುಂದೆ ಹಲವಾರು ಮೂಲಭೂತ ಪ್ರಶ್ನೆಗಳನ್ನು ಮುಂದಿಡುತ್ತವೆ.

ಎರ್ರಮ್ಮ ಬಳ್ಳಾರಿಯ ಬಡ ದಲಿತ ಹೆಣ್ಣು ಮಗಳು. ತನ್ನ ಮಗಳ ಬಾಣಂತನವನ್ನು ಮಾಡಲೆಂದು ಮಗಳ ಮನೆಗೆ ಬಂದವಳು. ಅವಳು ಮನೆಯಲ್ಲಿರುವಾಗ ಅವಳ ಮನೆಗೆ ಪಾನಮತ್ತರಾದ ಐವರು ಪುರುಷರು ಮತ್ತು ಮೂವರು ಮಹಿಳೆಯರು ನುಗ್ಗಿ ಅವಳನ್ನು ಚೆನ್ನಾಗಿ ಥಳಿಸಿ, ಅವಳನ್ನು ಸಂಪೂರ್ಣ ಬೆತ್ತಲೆಗೊಳಿಸಿ ಊರಲ್ಲಿ ಮೆರವಣಿಗೆ ಮಾಡಿದ್ದಾರೆ. ಅವಳಿಗೆ ದೊರೆತ ಈ ಶಿಕ್ಷೆಗೆ ಅವಳ ಮೇಲಿರುವ ಆರೋಪವೆಂದರೆ ಆ ಊರಿನ ಇಬ್ಬರು ಪ್ರೇಮಿಗಳು ಊರುಬಿಟ್ಟು ಓಡಿಹೋಗಿ ಮದುವೆಯಾಗಲು ಈಕೆ ನೆರವು ನೀಡಿದಳೆಂಬುದಾಗಿದೆ.

ದಲಿತ ಮಹಿಳೆಯ ಮೇಲೆ ದೌರ್ಜನ್ಯವೆಸಗಿದವರೂ ದಲಿತ ಸಮುದಾಯದವರಾಗಿದ್ದಾರೆ. ಹಾಗೆಯೇ ಅವಳನ್ನು ನಗ್ನಗೊಳಿಸಿ ಥಳಿಸುವುದರಲ್ಲಿ ನೆರವಾಗಲು ಮೂವರು ಮಹಿಳೆಯರೂ ಸೇರಿದ್ದಾರೆ ಎಂಬ ಅಂಶ ಈ ಘಟನೆಯ

೭ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೨೪೩೦೨

## ಪತ್ರಗಳು

**ಯುಟಿಐ ಹಗರಣ**

ಕೆ. ಎಸ್. ಪಾರ್ಥ ಸಾರಥಿಯವರ ಲೇಖನ ಆರ್ಥಿಕ ದಿವಾಳಿತನ, ಯು.ಟಿ.ಐ.ನ ಹಗರಣ ವನ್ನು ಚೆನ್ನಾಗಿ ವಿಶ್ಲೇಷಿಸುತ್ತ ಕೇಂದ್ರ ಸರ್ಕಾರದ ದುಷ್ಟ ನೀತಿಗಳನ್ನು ಪರಿಚಯ ಮಾಡಿಕೊಟ್ಟಿದೆ. ನವವಸಾಹತುಶಾಹಿಗಳೊಂದಿಗೆ ಕೈ ಜೋಡಿಸಿ, ನಮ್ಮವರೇ ನಮ್ಮ ಹೆಣದ ಮೇಲೆ ಹೆಂಡ ಕುಡಿಯುತ್ತಿರುವುದು ಹೇಸಿಗೆ ಹುಟ್ಟಿಸುತ್ತಿರುವ ವಿಚಾರ. ಇಂಥ ಅಧಮ ಅರ್ಥಮಂತ್ರಿಗಳನ್ನು ಅವರೊಡೆಯರ ಬಳಗವನ್ನು ಒಂದು ವರ್ಗದ ಮಾಧ್ಯಮ ಹೊಗಳುತ್ತಿರುವು ದನ್ನು ನೋಡಿದರೆ, Nicolas Boileau ಹೇಳಿದ "A fool always finds a greater fool to admire him" ಎಂಬ ಮಾತುಗಳು ಸರಿ ಎನಿಸುತ್ತದೆ.

*ಮಂಗಳೂರು* — ***ರಾಜೇಶ ನಾಯ್ಕ***

ಇತ್ತೀಚೆಗಷ್ಟೇ ನನ್ನ ಮಿತ್ರರಿಂದ 'ಹೊಸತು' ಪತ್ರಿಕೆಯ ಪರಿಚಯವಾಯಿತು. ಕೊಂಡು ಓದಿದೆ. ಪತ್ರಿಕೆ ಎಷ್ಟು ಇಷ್ಟವಾಯಿತೆಂದರೆ ಹಿಂದಿನ ಎಲ್ಲಾ ಸಂಚಿಕೆಗಳನ್ನು ಅಂಚೆ ಮೂಲಕ ತರಿಸಿಕೊಂಡೆ. ಇದೀಗ ನನ್ನ ಅಭಿರುಚಿಯ ಲೇಖನಗಳ ಸರಮಾಲೆಯೇ ನನ್ನ ಮುಂದಿದೆ. ಪತ್ರಿಕೆಗೆ ಅಭಿನಂದನೆಗಳು. ವೈಚಾರಿಕ, ವೈಜ್ಞಾನಿಕ ಲೇಖನಗಳ ಸಂಖ್ಯೆ ಇನ್ನಷ್ಟು ಹೆಚ್ಚಾಗಲಿ ಎಂದು ಆಶಿಸುತ್ತೇನೆ.

ಭಾರತೀ ಕಾಸರಗೋಡು ಅವರ ''ನಮ್ಮೊಳಗಿನ ನಾವು'' ಲೇಖನ ಚೆನ್ನಾಗಿತ್ತು. ಸುಖದ ನಿಜವಾದ ಮೂಲವಾದ ಶಾಂತಿ ನೆಮ್ಮದಿ ನಮ್ಮೊಳಗೆ ಇದೆಯೇ ಹೊರತು ಬೇರೆಲ್ಲೂ ಹೊರಗಿಲ್ಲ ಎಂಬ ಅವರ ಅಭಿಪ್ರಾಯ ಸರಿಯಾದುದು.

*ಹೆಬ್ರಿ* — ***ಗುಂಡೂರಾವ್. ಹೆಬ್ರಿ***

**ನಿಟ್ಟೂರರ ಸಂದರ್ಶನ**

. ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ನಿಟ್ಟೂರು ಶ್ರೀನಿವಾಸರಾಯರ ಸಂದರ್ಶನ ಉತ್ತಮವಾಗಿತ್ತು. ಒಂದು ನೂರನ್ನು ಸಮೀಪಿಸುತ್ತಿದ್ದರೂ ಅವರ ಪ್ರಗತಿಪರ ವಿಚಾರಗಳು, ಸ್ಪಷ್ಟತೆ ನಿಜಕ್ಕೂ ಅಚ್ಚರಿ ಹುಟ್ಟಿಸುವಂತಿದೆ. ಅಭಿನಂದನೆಗಳು.

*ಬೆಂಗಳೂರು* — ***ಬಿ.ವಿ. ಕೆದಿಲಾಯ***

> **ಓದುಗರ – ಲೇಖಕರ ಗಮನಕ್ಕೆ**
>
> 'ಹೊಸತು' ಕೇವಲ ಮಾರ್ಕ್ಸ್‌ವಾದಿ ವಿಚಾರಗಳ ಪ್ರತಿಪಾದನೆಗೆ ಮೀಸಲಾಗಿಲ್ಲ. ವಿಚಾರಪ್ರದವಾದ ಎಲ್ಲ ಚಿಂತನೆ ಹಾಗೂ ವಿಶ್ಲೇಷಣೆಗೆ ಇಲ್ಲಿ ಅವಕಾಶವಿದೆ. ಲೇಖಕರ ಅಭಿಪ್ರಾಯಗಳೆಲ್ಲಾ ಪತ್ರಿಕೆಯ ಧೋರಣೆಯೂ ಆಗಿರ ಬೇಕೆಂಬ ಕಡ್ಡಾಯವೇನೂ ಇಲ್ಲ. ಸಾಮುದಾಯಿಕ ಕ್ರಿಯೆಗೆ ಇಂಬುಕೊಡುವಂತಹ ಜನಪರ ಸಿದ್ಧಾಂತಗಳ ಅಭಿವ್ಯಕ್ತಿಗೆ 'ಹೊಸತು' ಒಂದು ವೇದಿಕೆಯಾಗಬೇಕೆಂಬ ಆಶಯ ನಮ್ಮದು. ನಿಮ್ಮ ಬರಹಗಳಿಗೆ ಸ್ವಾಗತವಿದೆ.
>
> *– ಸಂಪಾದಕ, 'ಹೊಸತು'*

'ಹೊಸತು' ಕನ್ನಡ ಓದುಗರಿಗೆ ಹೊಸಲೋಕವನ್ನು ತೆರೆದಿದೆ. ಮಾರ್ಕ್ಸ್‌ವಾದಿ ವಿಚಾರಧಾರೆಯ ಆಧಾರದ ಮೇಲೆ ಯೋಚಿಸುವವರಿಗೆ ಒಂದು ಪತ್ರಿಕೆಯ ಅವಶ್ಯಕತೆ ಇತ್ತು. ಇದು ಬೆಳೆಯಬೇಕು.

ತಮ್ಮ ಪತ್ರಿಕೆಯನ್ನು ಇನ್ನಷ್ಟು ರಂಜನೀಯ ಗೊಳಿಸಬೇಕು. ಆಕರ್ಷಕಗೊಳಿಸಬೇಕು. ಕಥೆ, ಕವನ, ವಿಚಾರವೇದಿಕೆ (ಚರ್ಚೆ) ಅಂತರಾಷ್ಟ್ರೀಯ ಮಾರ್ಕ್ಸ್‌ವಾದಿ ಮತ್ತು ಹೋರಾಟಗಾರರ ಬರಹಗಳು, ಪರಿಚಯಗಳು - ಬೇರೆ ರಾಜ್ಯ - ದೇಶಗಳಲ್ಲಿ ಈ ನಿಟ್ಟಿನಲ್ಲಿ ನಡೆದಿರುವ ಬೆಳವಣಿಗೆಗಳು ಮುಂತಾದುವನ್ನು ಪತ್ರಿಕೆ ಅಳವಡಿಸಿ ಕೊಳ್ಳಬೇಕು. ಇದು ನನ್ನ ಅನಿಸಿಕೆ. ಸಂಪಾದಕ ಮಂಡಳಿಯ ವರು ಈ ಬಗ್ಗೆ ಕ್ರಮ ಕೈಗೊಳ್ಳುವರೆಂದು ಆಶಿಸುತ್ತೇನೆ.

*ಸೊಂಡೂರು* — ***ಡಾ|| ಎ. ವೃಷಭೇಂದ್ರಾಚಾರ್***




ನಿಮ್ಮ 'ಹೊಸತು' ಪತ್ರಿಕೆಯನ್ನು ಮೊದಲ ಪ್ರತಿಯಿಂದಲೂ ಕೊಳ್ಳುತ್ತಿದ್ದು, ಎಲ್ಲಾ ಪ್ರತಿಗಳನ್ನು ಓದುತ್ತಿದ್ದು ತುಂಬಾ ತುಂಬಾ ವಿಚಾರಗಳು ಹಿಡಿಸಿದವು. ಮುಖ್ಯವಾಗಿ ಜಡ್ಡುಗಟ್ಟಿದ ಸಮಾಜದ ತಿದ್ದುವಿಕೆ, ಸಮಾಜದ ಸಮಾನತೆಯ ಬಗ್ಗೆ ಕಳಕಳಿ ಇರುವ ಪ್ರತಿಯೊಬ್ಬ ವಿಚಾರವಾದಿಯೂ ಓದಲೇಬೇಕಾದ ಪತ್ರಿಕೆ.

ಪರಸ್ಪರ ಅರಿವು ಮೂಡಿಸುವ ವೈಚಾರಿಕತೆಗೆ ಒತ್ತು ಕೊಡುವ ನಿಮ್ಮ ಪ್ರಯತ್ನಕ್ಕೆ ಧನ್ಯವಾದಗಳು ಮತ್ತು ನನ್ನ ಅನಿಸಿಕೆಯೆಂದರೆ, ಹೊಸತು ಪತ್ರಿಕೆಯ ಪ್ರತಿ ಹಾಳೆಯ ಕೊನೆಯ ಭಾಗದಲ್ಲಿ ವೈಚಾರಿಕ, ವೈಜ್ಞಾನಿಕ, ತತ್ವ, ಸಿದ್ಧಾಂತಗಳಿಗೆ ಸಂಬಂಧಿಸಿದ ಹಾಗೆ ಸೂಕ್ತಿಗಳನ್ನು ಪ್ರಕಟಿಸಿದರೆ ಚೆನ್ನ ಹಾಗೂ ಉಪಯುಕ್ತ ಎಂದು ನನ್ನ ಭಾವನೆ. ಸಾಧ್ಯವಾದರೆ ಪ್ರಕಟಿಸಿ. ಮತ್ತೊಂದು ಅನಿಸಿಕೆಯೆಂದರೆ, ಲಕ್ಷ್ಮೀಪತಿ ಕೋಲಾರ ಅವರನ್ನು ಸಂದರ್ಶನ ನಡೆಸಿ ಅವರ ವಿಚಾರಗಳನ್ನು ಪ್ರಕಟಿಸಬೇಕೆಂದು ಕೋರುತ್ತೇನೆ. ನಿಟ್ಟೂರು ಶ್ರೀನಿವಾಸರಾವ್‌ರವರ ಸಂದರ್ಶನ ತುಂಬಾ ಇಷ್ಟವಾಯಿತು ಮತ್ತು ಏಪ್ರಿಲ್ ೨೦೦೧ರ ಪತ್ರಿಕೆಯ ಮಾನವಧರ್ಮ ಪೀಠದ ವೀರಭದ್ರ ಚೆನ್ನಮಲ್ಲ ಸ್ವಾಮೀಜಿಗಳ ಸಂದರ್ಶನ ಸೊಗಸಾಗಿ ಮೂಡಿಬಂದಿದೆ.

> ಬರುವ ಜನವರಿಯ 'ಹೊಸತು' ವಾರ್ಷಿಕ ಸಂಚಿಕೆಯಾಗಿ ಹೊರಬರಲಿದೆ. ಜೀವನದಲ್ಲಿ ಮನ ಮುಟ್ಟುವ ಪ್ರಸಂಗಗಳು ಬಹುಶಃ ಎಲ್ಲರ ಅನುಭವ ದಲ್ಲೂ ಇರುತ್ತವೆ. ಅವುಗಳಲ್ಲಿ ಅತಿ ಹೆಚ್ಚಿನ ಮನಮುಟ್ಟುವ ಕ್ಷಣ ಯಾವುದಾಗಿತ್ತು? ಅಂತಹ ನಿಮ್ಮ ಅನುಭವವನ್ನು ಕುರಿತು ನೂರೈವತ್ತು ಪದಗಳಲ್ಲಿ ಬರೆದು ಕಳಿಸಿ. ಆಯ್ದ ಬರಹಗಳು ಪ್ರಕಟವಾಗುತ್ತವೆ ಮತ್ತು ಪ್ರಕಟವಾದುವಕ್ಕೆ ಬಹುಮಾನಗಳಿವೆ. ನಿಮ್ಮ ಬರಹ ಅಕ್ಟೋಬರ್ ೧೫ರೊಳಗೆ ನಮಗೆ ತಲುಪುವಂತೆ ಕಳಿಸಿ. ವಿಳಾಸ : ***ಹೊಸತು, ಅಂಚೆಪೆಟ್ಟಿಗೆ ೫೧೭೫, ಬೆಂಗಳೂರು-೫೬೦ ೦೦೧***

ಹಸಿರು ಕಣ್ಣಿನ ಪರಿಸರವಾದಿ ಚಂದ್ರಶೇಖರ ನಂಗಲಿಯವರ ವಿಚಾರಗಳನ್ನು ನಿಮ್ಮ ಹೊಸತುವಿನ ಮೂಲಕ ಪ್ರಕಟಿಸುತ್ತಿರುವುದಕ್ಕೆ ಹೆಮ್ಮೆ ಪಡುತ್ತಿದ್ದೇನೆ. ಸಮಾಜದ ಬದಲಾವಣೆ ಮಾಡುವತ್ತ ನಿಮ್ಮ ಪತ್ರಿಕೆಯೊಂದಿಗೆ ಕಾಯಾ, ವಾಚಾ, ಮನಸಾ ನಮ್ಮ ಸಹಕಾರ ಎಂದೂ ಇರುತ್ತದೆ.

*ಮಾಲೂರು* — ***ಸೂರ್ಯ ಆರ್ಟ್ಸ್, ಸರಳರಾಜು***

ಆಗಸ್ಟ್ ತಿಂಗಳ 'ಹೊಸತು' ಮುಖಪುಟ ತ್ರಿವರ್ಣದಿಂದ ಕೂಡಿದ್ದು ಮನಮೋಹಕವಾಗಿತ್ತು.

ಡಾ|| ಪ್ರಭಾಕರ ಶಿಶಿಲರವರ 'ಕಾರ್ಣಿಕ' ಕಥೆ ನನಗೆ ತುಂಬಾ ಹಿಡಿಸಿತು. ಶಂಕರ ತಲ್ಲೂರರ 'ಆಯ್ಕೆ' ಕಥೆ ಪ್ರಶಂಸನೀಯ. ಒಬ್ಬ ವಿಧವೆಯಾಗಿದ್ದು ಶೀಲಾಳ ವಿದ್ಯಾಭ್ಯಾಸ, ಸಾಧನೆ ಅವಳ ಸ್ಥಾನದಲ್ಲಿರುವ ಇತರರಿಗೆ ಮಾದರಿಯಾಗಿದೆ. ಇಂತಹ ಸುಂದರ ಸದಭಿರುಚಿಯ ಕಥೆಗಳನ್ನು ಪ್ರಕಟಿಸಿದ 'ಹೊಸತು'ವಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

*ಬೆಂಗಳೂರು* — ***ಬಿ. ವಿನೋದ್‌ಕುಮಾರ್***

ಸೆಪ್ಟಂಬರ್ ತಿಂಗಳ ಹೊಸತು ಸಂಚಿಕೆಯು ಕೈಸೇರಿತು. ಹೊಸತು ಪತ್ರಿಕೆ ಕುರಿತು ಎಷ್ಟು ಹೊಗಳಿದರೂ ಕಡಿಮೆ . ಲೇಖಕಿ ಭಾರತೀ ಕಾಸರಗೋಡು ನಮ್ಮೊಳಗಿನ ನಾವೆಂಬ ಲೇಖನವನ್ನು ರಚಿಸಿ ಉತ್ತಮವಾದ ಸಾಹಿತ್ಯವನ್ನು ನೀಡಿದ್ದಾರೆ. ಅವರಿಗೆ ನನ್ನ ಅಂತರಾಳದ ಧನ್ಯವಾದಗಳು.

*ಗಲಗಲಿ* — ***ಮಲ್ಲಿಕಾರ್ಜುನ ಗಂ. ಗಾಣಗೇರ***

> ೧೯೯೦ರಿಂದ ೨೦೦೦ನೇ ಡಿಸೆಂಬರ್‌ವರೆಗೆ ಪ್ರಕಟವಾದ ಕಥೆ, ಕವಿತೆ, ಕಾದಂಬರಿ, ನಾಟಕ, ಶಿಶು ಸಾಹಿತ್ಯ, ಪ್ರಬಂಧ, ಪ್ರವಾಸ ಕಥನ, ವಿಮರ್ಶೆ, ಅನುವಾದ, ಸ್ತ್ರೀ ಸಂವೇದಿ ಸಾಹಿತ್ಯ, ಆತ್ಮ ಚರಿತ್ರೆ ಮತ್ತಿತರ ಸಾಹಿತ್ಯ ಕೃತಿಗಳಿಗೆ 'ದಶಮಾನದ ಕೃತಿ' ಪ್ರಶಸ್ತಿಗಾಗಿ ಲೇಖಕರು, ಪ್ರಕಾಶಕರು ಕೃತಿಗಳನ್ನು ಕಳಿಸಬಹುದು. ಹತ್ತು ಪ್ರತ್ಯೇಕ ಪ್ರಶಸ್ತಿಗಳೂ ಉಂಟು. ವಿವರಗಳಿಗೆ ಸಂಪರ್ಕಿಸಿ :
>
> *'ನಮ್ ಟೀಮ್' ಸರ್. ಎಂ. ವಿ. ಅಸೋಸಿಯೇಟ್ಸ್,* ಕೂಡಡಿ - ೧, ಪಿ.ಎಲ್.ಡಿ. ಬ್ಯಾಂಕ್ ಬಿಲ್ಡಿಂಗ್, ಪಾರ್ಕ್ ಬಡಾವಣೆ, ಶಿವಮೊಗ್ಗ.

*(ಸಂಪಾದಕೀಯ – ೫ ನೇ ಪುಟದಿಂದ)*

ಸಂಕೀರ್ಣತೆಯನ್ನು ಸೂಚಿಸುತ್ತದೆ. ವಾಲ್ಮೀಕಿ ಜನಾಂಗಕ್ಕೆ ಸೇರಿದವರೆನ್ನಲಾದ ಒಂದು ಶ್ರೀಮಂತ ಕುಟುಂಬದ ಹೊನ್ನವ್ವ, ಅವರ ಮನೆಯ ಟ್ರಾಕ್ಟರ್ ಚಾಲಕ ಕೇಶವಪ್ಪನನ್ನು ಪ್ರೀತಿಸಿ ಮದುವೆಯಾದದ್ದು, ಮನೆ ಬಿಟ್ಟು ಓಡಿಹೋಗಿದ್ದು, ಹೆಣ್ಣು ಹೆತ್ತವರಿಗೆ ನುಂಗಲಾರದ ತುತ್ತಾಗಿದೆ. ಓಡಿಹೋದ ಹೆಣ್ಣು ಮಗಳನ್ನು ವಾಪಸ್ಸು ಕರೆದುಕೊಂಡು ಬಂದ ನೀಚರು ಆ ಹುಡುಗನನ್ನು ನಾಪತ್ತೆ ಮಾಡಿರುವುದು ಉಳ್ಳವರ ಅಟ್ಟಹಾಸದ ಶೈಲಿಯೇ ಆಗಿದೆ. ಇಲ್ಲಿ ತಮ್ಮ ಮಗಳು ಪ್ರೇಮಿಸಿದವನು ಚಾಲಕನಾಗದೆ ದೊಡ್ಡ ಆಫೀಸರ್ ಆಗಿದ್ದಿದ್ದರೆ ಇಂತಹ ಘಟನೆ ನಡೆಯುತ್ತಿರಲಿಲ್ಲವೇನೋ ! ದಲಿತ ಹೆಣ್ಣು ಎರ‍್ರಮ್ಮನು ಬಡವಳಾಗದೆ ಸುಶಿಕ್ಷಿತ, ಅನುಕೂಲಸ್ಥ ಹೆಣ್ಣುಮಗಳಾಗಿದ್ದರೂ ಈ ಘಟನೆ ಬಹುಶಃ ನಡೆಯದಿರುತ್ತಿತ್ತು. ಆದ್ದರಿಂದಲೇ ಇಲ್ಲಿ ಸಮಸ್ಯೆಯನ್ನು ಸರಳೀಕರಿಸುವುದಕ್ಕಿಂತ ಇಲ್ಲಿರುವ ಲಿಂಗವೈಷಮ್ಯತೆ, ವರ್ಗ ವೈಷಮ್ಯತೆಯ ಕಾವನ್ನು ಅರ್ಥಮಾಡಿಕೊಳ್ಳಬೇಕು.

ಬೆತ್ತಲೆ ಮೆರವಣಿಗೆಯನ್ನು ಮಾಡಿದವರನ್ನು ದುಷ್ಟರು, ನೀಚರು – ಎಂದೆಲ್ಲಾ ದೂಷಿಸಬಹುದಾದರೂ ಈ ಘಟನೆಗೆ ಮೂಕಸಾಕ್ಷಿಯಾಗಿ ನಿಂತ ನೂರಾರು ಮಂದಿ ಗ್ರಾಮಸ್ಥರು ಇನ್ನೆಂಥ ಹೇಡಿಗಳು ? ದಲಿತ ಮಹಿಳೆಯ ಬೆತ್ತಲೆ ಮೆರವಣಿಗೆ ಮಾಡುತ್ತಿದ್ದಾಗ ಅದನ್ನು ತಡೆಯುವ ಪ್ರಯತ್ನ ಮಾಡದೆ ನೋಡುತ್ತಾ ನಿಂತ ಹಾಗೂ ಘಟನೆಗೆ ಕುಮ್ಮಕ್ಕು ನೀಡಿದ ಕಾರಣಕ್ಕಾಗಿ ವಣೇನೂರಿನ ಗ್ರಾಮಸ್ಥರ ಮೇಲೆ ಪುಂಡುಗಂದಾಯ ವಿಧಿಸಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿರುವ ಸರ್ಕಾರಕ್ಕೆ ಆರೋಪಿಗಳ ವಿರುದ್ಧ ತೀವ್ರವಾದ ಮತ್ತು ಪರಿಣಾಮಕಾರಿಯಾದ ಕ್ರಮ ಕೈಗೊಳ್ಳಲು ಸಾಧ್ಯವಾಗಿಲ್ಲವೇ ?

ವರದಕ್ಷಿಣೆ, ಲೈಂಗಿಕ ಕಿರುಕುಳ, ಬಲಾತ್ಕಾರವನ್ನೆಲ್ಲಾ ಅತ್ಯಂತ ದೊಡ್ಡ ದೌರ್ಜನ್ಯವೆಂದು ಪರಿಗಣಿಸುವ ನಮ್ಮ ಕಾನೂನಿನಲ್ಲಿ ಬೆತ್ತಲು ಮಾಡಿ ಮೆರವಣಿಗೆ ಮಾಡುವುದು ಅಷ್ಟೊಂದು ದೊಡ್ಡ ಅಪರಾಧವಾಗಿ ಕಂಡಿಲ್ಲವೆ ? ಈ ದಿಕ್ಕಿನಲ್ಲಿ ಕಾನೂನು ನಿರ್ಮಾತೃಗಳು ಹೆಚ್ಚು ಯೋಚಿಸದಿರುವುದಕ್ಕೆ ಕಾರಣವೇನು ? ಇಂತಹ ಘಟನೆಗಳು ಇದೇ ಮೊದಲಲ್ಲ. ಹಿಂದೆ ಉತ್ತರ ಪ್ರದೇಶದಲ್ಲಿ ಗ್ರಾಮ ಪಂಚಾಯತಿಯೆದುರೇ ಮಹಿಳೆಯೊಬ್ಬಳನ್ನು ಬೆತ್ತಲೆಗೊಳಿಸಿ ಥಳಿಸಿದ ಘಟನೆ ನೆನಪಿನಲ್ಲಿದೆ. ಹಾಗೆಯೇ ಕರ್ನಾಟಕದಲ್ಲೂ ರಾಯಚೂರಿನ ಕುದುರೆಮೋತಿಯ ಮಹಂತಸ್ವಾಮಿಗಳು ಒಬ್ಬ ಶಾಲಾ ಶಿಕ್ಷಕರ ಪತ್ನಿ ಪಾರ್ವತಮ್ಮನು ತನಗೆ ಒಲಿಯದಿದ್ದುದಕ್ಕೆ ಅವಳನ್ನು ನಗ್ನಗೊಳಿಸಿ, ಮೆರವಣಿಗೆ ಮಾಡಿಸಿದ್ದ. ಅದೇ ದುಶ್ಯಾಸನರ ಪರಂಪರೆ ಈಗಲೂ ಮುಂದುವರಿದಿರುವಾಗ ಸರ್ಕಾರ ಮತ್ತು ನ್ಯಾಯಾಂಗ ಈ ದಿಕ್ಕಿನಲ್ಲಿ ಹೆಚ್ಚು ವಿವೇಚನೆಯಿಂದ ವರ್ತಿಸಬೇಕಾಗಿದೆ. ಈಗಾಗಲೆ ರಾಜ್ಯ ಸರ್ಕಾರವು ಎರಡೂ ಸದನಗಳಲ್ಲಿ ಅಂಗೀಕೃತವಾದ ಸಂಘಟಿತ ಅಪರಾಧ (ನಿಯಂತ್ರಣ) ಮಸೂದೆಯನ್ನು ರಾಷ್ಟ್ರಪತಿಗಳ ಸಹಿಗಾಗಿ ಕಳುಹಿಸಿದೆ. ಈ ಮಸೂದೆಗಳು ಎಷ್ಟೇ ಕಾನೂನಾಗಿ ಬಂದರೂ ಸರ್ಕಾರಕ್ಕೆ ಇರಬೇಕಾದ ರಾಜಕೀಯ ಇಚ್ಛಾಶಕ್ತಿಯಿಲ್ಲದಿದ್ದರೆ ನೊಂದವರಿಗೆ ಪರಿಹಾರ ಸಿಕ್ಕುವುದಿಲ್ಲ.

ಇಂದು ವೋಟಿನ ರಾಜಕೀಯದಲ್ಲಿ ಜಾತಿ, ಮತಗಳು ಲಾಭದಾಯಕ ಸಾಮಾಜಿಕ ವಿಂಗಡಣೆಗಳಾಗಿವೆ. ಆ ಸಮುದಾಯದ ಜನರ ನಿಜವಾದ ಆಸೆ, ಆಕಾಂಕ್ಷೆಗಳನ್ನು ಪ್ರತಿನಿಧಿಸುವ, ಅವರ ನೋವು ನಲಿವುಗಳಿಗೆ ಸ್ಪಂದಿಸುವ ಅಭಿಲಾಷೆ ಸರ್ಕಾರಕ್ಕಾಗಲಿ, ಈಗ ಶಾಸನ ಸಭೆಗಳಲ್ಲಿರುವ ವಿರೋಧ ಪಕ್ಷಗಳಿಗಾಗಲಿ ಇಲ್ಲ. ಇದರಿಂದಲೇ ಇಂದು ನಡೆಯುತ್ತಿರುವ ದೌರ್ಜನ್ಯಗಳಿಗೆ ಪ್ರತಿಭಟಿಸುವ ಮತ್ತು ಸ್ಪಂದಿಸುವ ಮನಸ್ಸಿಗೆ ಮಾನವೀಯತೆಯ ಸ್ಪರ್ಶ ಬೇಕಿದೆಯೇ ಹೊರತು ಜಾತಿರಾಜಕಾರಣದ ಬಣ್ಣ ಬೇಕಿಲ್ಲ. ಸರ್ಕಾರ ಎರ‍್ರಮ್ಮನಿಗೆ ಕೊಟ್ಟಿರುವ ಐವತ್ತು ಸಾವಿರ ರೂಪಾಯಿಗಳು ಅವಳಿಗೆ ಕೊಂಚ ಮಟ್ಟಿನ ಆರ್ಥಿಕ ಪರಿಹಾರವಾಗಿರಬಹುದಾದರೂ ಅವಳಿಗೆ ಬದುಕಿನಲ್ಲಿ ಸಾರ್ವಜನಿಕವಾಗಿ ಆದ ಅವಮಾನಕ್ಕೆ ಪರಿಹಾರವಾಗಿಲ್ಲ. ಅವಳ ನೋವಿಗೆ ಕಾರಣರಾದ ಆರೋಪಿಗಳಿಗೆ ಶಿಕ್ಷೆಯಾಗುವುದೂ ಅಷ್ಟೇ ಅಗತ್ಯ. ಅದರಿಂದ ಹಣದ ಮದದಿಂದ ಕೊಬ್ಬಿರುವ ಆ ನೀಚರಿಗೆ ಅಹಂಕಾರ ಭಂಗವಾಗಬೇಕು ಮತ್ತು ಇಂತಹ ಘಟನೆ ಮರುಕಳಿಸದಿರಲು ಉಳಿದವರಿಗೆ ಪಾಠವಾಗಬೇಕು. ಇದೆಲ್ಲಕ್ಕಿಂತ ಮುಖ್ಯವಾಗಿ ಒಬ್ಬ ಅಸಹಾಯಕಿಯ ಮೇಲೆ ನಡೆದ ಇಂತಹ ದೌರ್ಜನ್ಯಕ್ಕೆ ಮೂಕ ಸಾಕ್ಷಿಯಾಗುವುದು ಅಪರಾಧವನ್ನು ಮಾಡಿದಷ್ಟೇ ಘೋರಕೃತ್ಯ ಎಂಬ ಪ್ರಜ್ಞೆ ನಮ್ಮೆಲ್ಲರಲ್ಲೂ ಮೂಡಬೇಕು.

*– ಎನ್. ಗಾಯತ್ರಿ*

## ಪ್ರತಿಕ್ರಿಯೆ

### ಸರಕಾರಗಳ ಕೆಲಸ ಇದಲ್ಲ

ದೇವಾಲಯಗಳಿಗೆ ಸಹಾಯಧನ ನೀಡುವ ಬಗ್ಗೆ ಇತ್ತೀಚೆಗೆ ವಿಧಾನ ಸಭೆಯಲ್ಲಿ ಕೋಲಾಹಲವಾಯಿತು. ಗುಡಿ – ಮಠ-ಪೀಠಗಳಿಗೆ ಸರಕಾರಗಳು ಕೋಟ್ಯಂತರ ರೂಪಾಯಿ ಕೊಡುವುದು ತಾತ್ವಿಕವಾಗಿ ನಮ್ಮ ಸಂವಿಧಾನದ ಮೂಲ ತತ್ವಗಳಿಗೆ ವಿರೋಧವಾಗಿದೆ. ನಮ್ಮದು ಧರ್ಮನಿರಪೇಕ್ಷ ರಾಷ್ಟ್ರ. ದೇವರು ಧರ್ಮಗಳು ಅವರವರ ವೈಯಕ್ತಿಕ ವಿಷಯಗಳು. ಸರಕಾರಗಳು ಮಾಡಬೇಕಾದ ಹೊಣೆಗಾರಿಕೆಯ ಕೆಲಸಗಳು, ಅಭಿವೃದ್ಧಿ ಕಾರ್ಯಗಳು ಬೇಕಾದಷ್ಟಿವೆ. ಇಂಥದರಲ್ಲಿ ಗುಡಿ ಇತ್ಯಾದಿಗಳಿಗೆ ಸರಕಾರಗಳಿಂದ ಕೋಟ್ಯಂತರ ರೂಪಾಯಿ ಏಕೆ ವ್ಯಯ ಮಾಡಬೇಕು ಎಂಬ ಪ್ರಶ್ನೆ ಸಮಂಜಸವಾಗಿದೆ.

ದುಡಿಯಲಾರದ ಕೆಲವರು ಗುಡಿ ಗುಂಡಾರಗಳನ್ನೆಬ್ಬಿಸಿ ಅದನ್ನೇ ತಮ್ಮ ದಂಧೆ ಮಾಡಿಕೊಳ್ಳುವ ಪರಿಪಾಠ ಹೆಚ್ಚುತ್ತಿದೆ. ದೇವರ ಪೂಜೆ ಮಾಡಬೇಕಾದರೂ ಇವರಿಗೆ ಹಣ ಕೊಡಬೇಕು. ದೇವರಿಗೆ ನೈವೇದ್ಯ ಒಯ್ದರೂ ಅದು ಇವರ ಪಾಲಾಗುತ್ತದೆ. ದೇವರಿಗೆ ಸಾದಾ ಪೂಜೆ ಮಾಡಿದರೆ ನೂರಾರು ರೂಪಾಯಿಗಳನ್ನು, ಹೆಚ್ಚಿನ ಗ್ರೇಡಿನ ಪೂಜೆ ಪುನಸ್ಕಾರಗಳನ್ನು ಮಾಡಿದರೆ ಸಾವಿರಾರು ರೂಪಾಯಿಗಳನ್ನು ಇವರು ಬೋರ್ಡು ಹಾಕಿ ಪಡೆಯುತ್ತಾರೆ. ಇದೂ ಒಂದು ಲಾಭದಾಯಕ ಬಿಜಿನೆಸ್ಸಾಗಿದೆ. ತಿರುಪತಿಯ ಪುರೋಹಿತರು ಕೋಟ್ಯಾಧೀಶರಾಗಿರುವುದು ಇನ್ನು ಹೇಗೆ ಮತ್ತೆ ?

ಮಾಡಿಕೊಳ್ಳಲಿ. ಆದರೆ ದೇವಾಲಯಗಳಿಗೂ ಸರಕಾರಗಳು ಕೋಟ್ಯಂತರ ರೂಪಾಯಿ ಕೊಡುವುದೆಂದರೇನು ? ದೇವರು ಧರ್ಮಗಳು ವೈಯಕ್ತಿಕ ವಿಷಯಗಳಾದರೆ, ದೇವಾಲಯ ಮಠ ಪೀಠಗಳು ಸಮಾಜಕ್ಕೆ ಸಂಬಂಧಿಸಿದ ಕೆಲಸಗಳು. ಆಸಕ್ತಿ ಇರುವವರು ಅವನ್ನು ಮಾಡಿಕೊಳ್ಳಲಿ. ಗಿಡ ಮರಗಳ ಕೆಳಗೆ ಶಾಲೆ ಕಲಿಯುತ್ತಿರುವ ಗ್ರಾಮೀಣ ಮಕ್ಕಳಿಗೆ ಮೊದಲು ಶಾಲೆಗಳನ್ನು ಕಟ್ಟಿಸಲಿ.

*ಬೆಂಗಳೂರು*

*ಕಲ್ಲಿನಾಥ ಮಾಧವನವರ*

### ವೀರೇಂದ್ರ ಪಾಟೀಲರ ಪತ್ರ

೧೯೬೩ ಮತ್ತು ೧೯೮೯ರಲ್ಲಿ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾಗಿದ್ದರು. ತಾವು ಮುಖ್ಯಮಂತ್ರಿಯಾಗಿದ್ದಾಗ ಆಲಮಟ್ಟಿಯನ್ನು ಕಡೆಗಣಿಸಿ ಗುಲ್ಬರ್ಗಾ ಜಿಲ್ಲೆಗಷ್ಟೇ ಸಹಾಯವಾಗುವ ನಾರಾಯಣಪುರ ಆಣೆಕಟ್ಟು ಕಟ್ಟಿ ಕೈಬಿಟ್ಟರು.

೨೦೦೦ ಇಸವಿ ಒಳಗೆ ಕೃಷ್ಣಾ ನದೀ ನೀರಿನಲ್ಲಿ ತನ್ನ ಪಾಲನ್ನು ಕರ್ನಾಟಕ ಉಪಯೋಗಿಕೊಳ್ಳಲು ಸಾಧ್ಯವಿಲ್ಲವೆಂದು ಹೇಳುತ್ತಾ ಬಂದದ್ದನ್ನು ನಾವ್ಯಾರೂ ಕೇಳಲಿಲ್ಲ, ಓದಲಿಲ್ಲ. ಗುಲ್ಬರ್ಗಾದಲ್ಲಿ ಬೆಣ್ಣೆ ತೊರೆ, ಅಮರ್ಜಾ ಮುಲ್ಲಾಮಾರಿ ಯೋಜನೆಗಳಿಗಾಗಿ ಮತ್ತು ಬಿಜಾಪುರದಲ್ಲಿ ಆಲಮಟ್ಟಿ, ಮುಳುವಾಡ ಯೋಜನೆಗಳಿಗಾಗಿ ನಿರಂತರ ಹೋರಾಡಿದೆವು. ನಾವು ಹೋರಾಡುತ್ತಿದ್ದಾಗ ಮುಖ್ಯಮಂತ್ರಿಯಾಗಿದ್ದ, ಶಾಸಕರಾಗಿದ್ದ, ಪಕ್ಷದ ಮುಖಂಡರಾಗಿದ್ದ ವೀರೇಂದ್ರ ಪಾಟೀಲರು ನಮ್ಮ ಜೊತೆಯಲ್ಲಿ ಹೋರಾಟದ ಕೂಗು ಎಬ್ಬಿಸಬಹುದಿತ್ತು. ಸರಕಾರಗಳ ವಿರೋಚಿತ ಹೇಳಿಕೆಗಳನ್ನು ಬಹಿರಂಗಗೊಳಿಸಬಹುದಿತ್ತು.

ಬಚಾವತ್ ಆಯೋಗದ ಶಿಫಾರಸ್ ಬಂಧನಕಾರಿ. ಎ ಸ್ಕೀಮ್‌ನಂತೆ ನೀರು ಬಳಸಿಕೊಳ್ಳುತ್ತಿದ್ದೇವೆ. ಹೆಚ್ಚುವರಿ ನೀರನ್ನು ಸ್ಕೀಮ್ ಬಿ ಪ್ರಕಾರ ೨೦೦೦ ವರ್ಷದ ಬಳಿಕ ಲೇಖನದಲ್ಲಿ ಹೇಳಿದಂತೆ ಮೂರು ರಾಜ್ಯಗಳು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳಬೇಕು. ಅದು ಸಾಧ್ಯವಾಗದಿದ್ದರೆ ಕೇಂದ್ರ ಸರಕಾರವನ್ನು ಕೇಳಿಕೊಂಡು "ಕೃಷ್ಣಾ ನದಿ ಕಣಿವೆ ಪ್ರಾಧಿಕಾರ" ರಚಿಸಿಕೊಂಡು ನ್ಯಾಯ ಪಡೆಯಬೇಕು.

ನನಗೆ ಈ ಅಭಿಪ್ರಾಯ ವೀರೇಂದ್ರ ಪಾಟೀಲರದಿರಲಿಕ್ಕಿಲ್ಲೆಂದು ಅನಿಸುತ್ತದೆ. ನಾನೂ ಅವರನ್ನು ಬಲ್ಲೆ. ಈ ರೀತಿಯ ಅಭಿಪ್ರಾಯ ಅವರಿಂದ ಹೊರಬೀಳಲಿಕ್ಕಿಲ್ಲ.

*ಬಿಜಾಪುರ*

*ಎಸ್. ಕೆ. ಉಪಾಧ್ಯಾಯ*

# ಮಳೆಯನ್ನು ಕುರಿತು ಜನಪದರ ನಂಬಿಕೆಗಳು

ಮಳೆಯು ಸಕಾಲಕ್ಕೆ ಬಂದರೆ ರೈತಬಾಂಧವರು ಹರ್ಷ ಚಿತ್ತದಿಂದ ಭೂಮಿಯನ್ನು ಉತ್ತಿ ಬಿತ್ತಿ ಬೆಳೆಯನ್ನು ಬೆಳೆಯುತ್ತಾರೆ. ಒಳ್ಳೆಯ ಮಳೆಯಾದರೆ, ನಾಡು-ಕಾಡು-ಮೇಡುಗಳು ಸಮೃದ್ಧವಾಗಿ ಬೆಳೆಯುತ್ತವೆ. ಭೂಮಿತಾಯಿ ಹಚ್ಚ ಹಸಿರಿನ ಹುಲ್ಲಿನ ಮೆರಗಿನ ಸೀರೆಯನ್ನುಟ್ಟು ಗಿಡ-ಮರ ಹೂ-ಬಳ್ಳಿಗಳೆಂಬ ಆಭರಣಗಳನ್ನು ಧರಿಸಿ ನೋಡುವವರ ಕಣ್ಮನಗಳಿಗೆ ಹರ್ಷವನ್ನು ತರುತ್ತಾಳೆ. ಮನುಷ್ಯ - ಪ್ರಾಣಿ ಮತ್ತು ಪಕ್ಷಿ ಸಂಕುಲ ಸುಖ-ಸಂತೋಷದಿಂದ ಜೀವನ ಸಾಗಿಸಲು ಸಾಧ್ಯವಾಗುತ್ತದೆ. ಮಳೆ ಬಾರದಿದ್ದರೆ ಗಿಡ-ಮರಗಳು ತಮ್ಮ ಎಲೆಗಳನ್ನು ಕಳಚಿಕೊಂಡು, ಹುಲ್ಲೆಲ್ಲ ಒಣಗಿ, ನೆಲವು ಬರಡಾದಾಗ ಭೂಮಿತಾಯಿ ಸಮೃದ್ಧತೆಯನ್ನು ಕಳೆದುಕೊಂಡು ವಂಚಿತಳಂತೆ ಗೋಚರಿಸುತ್ತಾಳೆ. ಸುಂದರವಾದ ನಿಸರ್ಗವು ವಿಕೃತಗೊಳ್ಳುತ್ತದೆ.

ಕೆಲವೊಮ್ಮೆ ತಿಂಗಳುಗಟ್ಟಲೆ ಅಥವಾ ಇಡೀ ವರ್ಷಾನುಗಟ್ಟಲೆ ಮಳೆ ಬಾರದೇ ಹೋಗುತ್ತದೆ. ಆದ್ದರಿಂದ ಮನುಷ್ಯ, ಪ್ರಾಣಿ, ಪಕ್ಷಿಗಳಿಗೆ ಆಹಾರ, ನೀರು ಸಿಗದೇ ಬಹಳಷ್ಟು ತೊಂದರೆಯುಂಟಾಗುತ್ತದೆ. ಆಗ ಜನಪದರು ಇದಕ್ಕೆ ಬರ ಬಿದ್ದಿದೆ ಎಂದು ಕರೆಯುತ್ತಾರೆ. ಒಂದೊಂದು ಸಲ ವಿಪರೀತ ಮಳೆಯಿಂದ ನಿಸರ್ಗ ಹಾನಿಗೀಡಾಗುತ್ತದೆ. ಹೀಗೆ ಅತಿವೃಷ್ಟಿಯಿಂದಾದ ಬರವನ್ನು ಹಸಿಬರವೆಂದು, ಅನಾವೃಷ್ಟಿಯಿಂದಾದ ಬರವನ್ನು ಒಣಬರವೆಂದು ಕರೆಯುತ್ತಾರೆ. ಇಂತಹ ಸಂದರ್ಭದಲ್ಲಿ ಬಡಜನರು ಆಹಾರ, ನೀರಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ಇದನ್ನು ಜನಪದರು ಹೊಟ್ಟೆ ಬದುಕುವುದಕ್ಕೆ ಹೋಗುವುದೆಂದು ಕರೆಯುತ್ತಾರೆ. ಮನುಷ್ಯರಂತೆ ಪ್ರಾಣಿ-ಪಕ್ಷಿಗಳೂ ಕೂಡ ಜೀವಿಸುವುದಕ್ಕಾಗಿ ಆಹಾರ, ನೀರನ್ನು ಹುಡುಕುತ್ತಾ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುತ್ತವೆ.

ಮಳೆ ಬರದಿದ್ದರೆ ಜನಜೀವನದಲ್ಲಿ ಅವ್ಯವಸ್ಥೆ ಉಂಟಾಗುತ್ತದೆ. ಮಳೆ ಯಾಕೆ ಬರಲಿಲ್ಲವೆಂದಾಗ ಜನಪದರು ಅದಕ್ಕೆ ತಾವು ನಂಬಿಕೊಂಡ ಅನೇಕ ಕಾರಣಗಳನ್ನು ಹೇಳುತ್ತಾರೆ. ಉದಾಹರಣೆಗೆ, ಶಕ್ತಿದೇವತೆಗಳಾದ ಮಾರೆಮ್ಮ, ಶಟಗೆಮ್ಮ, ಗುಳಕವ್ವ, ಪೋಚಮ್ಮ, ದ್ಯಾಮಮ್ಮ, ದುರ್ಗಮ್ಮ, ಕೆಂಚಮ್ಮ ಈ ಮುಂತಾದವರು ಮುನಿದಿದ್ದಾರೆ, ಅವುಗಳಿಗೆ ಸಂತೃಪ್ತಿಪಡಿಸಬೇಕೆನ್ನುತ್ತಾರೆ.

ಹೀಗೆ ಕೆಲವೊಂದು ಸಂದರ್ಭದಲ್ಲಿ ಮಳೆ ಬಾರದೇ ಹೋದಾಗ ಜನಪದರು ಕೆಲವೊಂದು ಸಾಂಪ್ರದಾಯಿಕ ನಂಬಿಕೆಗಳನ್ನು, ಆಚರಣೆಗಳನ್ನು ಉಪಯೋಗಿಸಿ ಮಳೆಗಾಗಿ ಆಕಾಶದೆಡೆ ನೋಡುತ್ತಾರೆ. ಇಂಥ ಆಚರಣೆಗಳಿಂದಲೇ ಮಳೆ ಬರುತ್ತದೆಂದು ಅವರ ನಂಬಿಕೆ. ಜನಪದರು ಮಳೆಯನ್ನು ಕುರಿತು ನಂಬಿಕೊಂಡು ಬಂದಿರುವ ಆಚರಣೆಗಳನ್ನು ಈ ಕೆಳಗೆ ಅವಲೋಕಿಸಲಾಗಿದೆ.

ಗ್ರಾಮದ ಶಕ್ತಿ ದೇವತೆಗಳು ಕೋಪಿಸಿಕೊಂಡಾಗ ಮಳೆ ಬರುವುದಿಲ್ಲ ಎಂದು ಅವರು ನಂಬುತ್ತಾರೆ. ಇದಕ್ಕೆ ಪರಿಹಾರವಾಗಿ ಎಲ್ಲ ಶಕ್ತಿ ದೇವತೆಗಳಿಗೆ ಹೊಸ ಸೀರೆ ತಂದು ಉಡಿಸುತ್ತಾರೆ. ಇದಕ್ಕೆ ದೇವರಿಗೆ ಉಡಿ ತುಂಬುವುದು ಎನ್ನುವುದುಂಟು. ಅದರೊಂದಿಗೆ ಎಲ್ಲಾ ದೇವತೆಗಳ ಗುಡಿಯಲ್ಲಿ ಐದು ಅಥವಾ ಒಂಬತ್ತು ವಾರ ಹೀಗೆ ಕೆಲವು ವಾರಗಳವರೆಗೆ ದೀಪವನ್ನು ಹಗಲು-ರಾತ್ರಿ ಆರದಂತೆ ಉರಿಸುತ್ತಾರೆ. ಈ ಆಚರಣೆಯನ್ನು 'ದೀಪಕ್ಕೆ ಹಾಕುವುದು' ಎನ್ನುತ್ತಾರೆ. ಹೀಗೆ ಮಾಡುವುದರಿಂದ ದೇವತೆಗಳು ಸಂತೃಪ್ತರಾಗಿ ಮಳೆ ತರುತ್ತಾರೆಂದು ಗ್ರಾಮೀಣ ಜನರು ನಂಬಿಕೊಂಡಿದ್ದಾರೆ. ಈಗಲೂ ಕೆಲವೊಂದು ಗ್ರಾಮಗಳಲ್ಲಿ ದೇವಸ್ಥಾನಗಳ ಮುಂದೆ 'ಉಸಿರುಗಲ್ಲು'ಗಳನ್ನು ನೋಡಬಹುದು. ಮಳೆಯ ಅಭಾವದ ಸಂದರ್ಭದಲ್ಲಿ ಜನತೆ ಈ ಉಸಿರುಗಲ್ಲಿಗೆ ನೂರಾಒಂದು ಅಥವಾ ಐವತ್ತೊಂದು ಕೊಡ ನೀರು ಹೊಯ್ದರೆ (ತಣಿಸು) ಮಳೆ ಬಂದೇ ಬರುತ್ತೆಂದು ನಂಬಿ ಮಡಿ-ಉಡಿಯಿಂದ 'ಓಂ ನಮಃ ಶಿವಾಯ' ಸ್ತುತಿಯೊಂದಿಗೆ ಎಡೆಬಿಡದೇ ನೀರು ಹಾಕುವುದರಲ್ಲಿ ತಲ್ಲೀನರಾಗಿ ಪ್ರಾರ್ಥನೆ ಸಲ್ಲಿಸುತ್ತಾರೆ.

ಕೆಲವೊಂದು ಹಳ್ಳಿಗಳಲ್ಲಿ ಮಳೆರಾಜನ ಆಹ್ವಾನಕ್ಕಾಗಿ 'ಹಳ್ಳಕ್ಕೆ ಪರುವು' ಕೊಡಲಿಕ್ಕೆ ಹೋಗುವ ಪದ್ಧತಿ ಇದೆ. ಪರುವು ಎಂದರೆ ಕೆಲವರು ಇಡೀ ಹಳ್ಳಿಯಲ್ಲಿ ಅಲೆದಾಡಿ ದವಸ-ಧಾನ್ಯ ಸಂಗ್ರಹಿಸಿ, ಹೀಗೆ ಸಂಗ್ರಹಿಸಿದ ದವಸ-ಧಾನ್ಯಗಳಿಂದ ಆಹಾರ ಬೇಯಿಸಿ, ಚಕ್ಕಡಿ ಸಮೇತ ಹಳ್ಳದ ದಂಡೆಗೆ ಹೋಗಿ ಊಟ ಮಾಡಿ ಬರುತ್ತಾರೆ. ಹಳ್ಳಕ್ಕೆ ಪೂಜೆಗೈಯ್ದು ಊಟ ಮಾಡುವ ಮುನ್ನ,

'ಬಾರಪ್ಪ ಮಳಿದೇವ ಯಾವಲ್ಲಿಗ್ಹೋಗೀದಿ  
ನಿನದಾರಿ ಕಾದು ಕುಂತಾರ ಬಡಜನ  
ಎಲ್ಲಿ ಹೋಗಿ ಕುಂತಿಯೋ ಮಳಿದೇವ  
ನಿನದಾರಿ ನೋಡತಾನ ಒಕ್ಕಲಿಗ  
ಭೂಮಿ ಪಡುರಣ ಬಿದ್ದು ಬಸವಣ್ಣ ಬಾಯಬಿಡ್ತಾನ' –

ಹೀಗೆ ಮಳೆರಾಯನಿಗೆ ಸ್ವಾಗತ ಕೋರಿ ಬೇಡುತ್ತ, ಭೋಜನಕೂಟ ಮುಗಿಸಿ ಮನೆಗೆ ಹಿಂದಿರುಗುತ್ತಾರೆ. ಈ ಬಗೆಯ ಆಚರಣೆಯಿಂದಲೂ ಮಳೆ ಬರುತ್ತದೆಂಬುದು ಜನಪದರ ನಂಬಿಕೆ. ಹಾಗೆಯೇ ಇನ್ನೂ ಕೆಲವೆಡೆಗಳಲ್ಲಿ ಊರಿನ ಕೆರೆಯ ಮಣ್ಣನ್ನು ತಂದು ''ಗುಳಕವ್ವ'' ಎಂಬ ಗ್ರಾಮ ದೇವತೆಯ ಬೊಂಬೆಯನ್ನು ಮಾಡಿ ಆ ಬೊಂಬೆಗೆ ಪೂಜೆ ಗೈಯ್ಯುತ್ತಾರೆ. ಈ ಆಚರಣೆ ಊರಿನ ಓಣಿ ಓಣಿಗಳಲ್ಲಿ ಪ್ರತ್ಯೇಕವಾಗಿ ಆಚರಿಸಲ್ಪಡಲಾಗುತ್ತದೆ. ಇದು ಮೊದಲಿಂದಲೂ ಬಂದ ವಾಡಿಕೆ. ಈ ಆಚರಣೆಯಿಂದಲೂ ಮಳೆ ಬರುವುದೆಂದು ಅವರ ನಂಬಿಕೆ.

ಇವಲ್ಲದೇ ಮಕ್ಕಳಿಂದ ಕೆಲವೊಂದು ಆಟಗಳನ್ನು ಆಡಿಸಿದರೆ ಮಳೆ ಬರುವುದೆಂದು 'ಗುರ್ಜಿಯಾಟ' ಆಡಿಸುತ್ತಾರೆ. ಗುರ್ಜಿಯಾಟವೆಂದರೆ, ಇಬ್ಬರು ಹುಡುಗರು ಒಂದು ಒನಕೆಯನ್ನು ಹಿಡಿದುಕೊಂಡು ಅದಕ್ಕೆ ಒಂದು ಕಪ್ಪೆ, ಹಾಗೂ ಬೇವಿನ ತಪ್ಪಲವನ್ನು ಕಟ್ಟಿ, ಹುಡುಗರು ಮೈಮೇಲೆ ನೀರನ್ನು ಸುರಿದುಕೊಂಡು ಮನೆ-ಮನೆ ಸುತ್ತುತ್ತಾರೆ. ಇನ್ನುಳಿದ ಹಿಂಬಾಲಿತ ಹುಡುಗರು

'ಗುರ್ಜಿ, ಗುರ್ಜಿ ಎಲ್ಲ್ಯಾಡಿ ಬಂದೀ  
ಹಳ್ಳಾಕೊಳ್ಳಾ ತಿರಗ್ಯಾಡಿ ಬಂದೀ'

ಎಂದು ಹಾಡುತ್ತ ಪ್ರತಿ ಮನೆಯಲ್ಲೂ ಜೋಳ, ಗೋಧಿ, ರಾಗಿ, ಭತ್ತ, ಇತ್ಯಾದಿ ದಾನ ಪಡೆದು ಬಾವಿಯ ಮೇಲೆ ಪೂಜೆ ಮಾಡಿ ಎಲ್ಲರೂ ಸೇರಿ ಊಟ ಮಾಡುತ್ತಾರೆ. ಹೀಗೆ ಮಾಡುವುದರಿಂದ ಗಂಗಾಮಾತೆ ಮಳೆ ತರುತ್ತಾಳೆಂಬ ನಂಬಿಕೆಯೂ ಇದೆ. ಮಳೆಗೆ ಏನೇನೋ ಆಸೆ ತೋರಿಸಿ ಬರುವಂತೆ ಹಾಡುತ್ತಾರೆ :

''ಸುಣ್ಣ ಕೊಡ್ತೀನಿ ಸುರಿಯಲೇ ಮಳಿಯೇ,  
ಸುರಿಯಲೇಽಽ ಮಳಿಯೇಽ  
ಗುಮ್ಮೀ ಕೊಡ್ತೀನಿ ಗುಮ್ಮಲೇ ಮಳಿಯೇ  
ಗುಮ್ಮಲೇಽಽ ಮಳಿಯೇಽ  
ಕಂಚು ಕೊಡ್ತೀನಿ ಮಿಂಚಲೇ ಮಳಿಯೇ  
ಮಿಂಚಲೇಽಽ ಮಳಿಯೇಽ  
ಅಡಕಿ ಕೊಡ್ತೀನಿ ಹಣಿಯಲೇ ಮಳಿಯೇ  
ಹಣಿಯಲೇಽಽ ಮಳಿಯೇಽ.

ಹೀಗೆ ಈ ಮೇಲಿನ ಪದಗಳನ್ನು ಕುರಿತು ವಿವೇಚಿಸಿದಾಗ ಸುಣ್ಣ, ಗುಮ್ಮೀ, ಕಂಚು, ಅಡಕೆ, ಇವು ಒಂದೊಂದೂ ಕೆಲವು ವೈಶಿಷ್ಟ್ಯಗಳನ್ನು ಹೊಂದಿವೆಯೆಂಬುದನ್ನು ನಾವು ಗಮನಿಸಬೇಕು. ಉದಾಹರಣೆಗೆ, ಸುಣ್ಣವು ಬೆಳ್ಳನೆಯ ಬಣ್ಣ. ಇದು ಶುಭ್ರತೆಯ ಸಂಕೇತ. ಗುಮ್ಮೀ - ಇದು ದವಸ - ಧಾನ್ಯಗಳನ್ನು ಸಂಗ್ರಹಿಸುವ ಹಾಗೂ ಸಂರಕ್ಷಿಸುವ ವಸ್ತು, ಕಂಚು - ಇದು ಶ್ರೀಮಂತಿಕೆಯ ಸಂಕೇತವಾಗಿದೆ. ಈ ಹಿನ್ನೆಲೆಯಲ್ಲಿ ಜನಪದರ ಈ ಹಾಡುಗಳು ರೂಪುಗೊಂಡಿವೆ.

ಕೆಲವೊಂದು ಆಟಗಳಲ್ಲಿ ಅಪಶಕುನದ ಸೂಚನೆಯೂ ಇದೆ. ಮಳೆ ಬಾರದೇ ಇದ್ದ ಸಂದರ್ಭದಲ್ಲಿ ಕೆಲಸವಿಲ್ಲದ ಮಕ್ಕಳು, ಯುವಕರು, ಹುಲಿಮನಿ, ಗೋಲಿಯಾಟ, ಚಕ್ಕಾ ಈ ಮುಂತಾದ ಆಟಗಳನ್ನು ಆಡುತ್ತಿರುವಾಗ, ಹಿರಿಯ ವ್ಯಕ್ತಿಗಳು ಹುಡುಗರಿಗೆ ಬಯ್ಯುತ್ತಾರೆ. ಈ ಆಟಗಳನ್ನು ಆಡುವುದರಿಂದ ಮಳೆ ಬರುವುದಿಲ್ಲವೆಂದು ಅವರ ನಂಬಿಕೆ. ಅಂದರೆ 'ಈರಪ್ಪನ ಸಿಟ್ಟು ಬೀರಪ್ಪನ ಮೇಲೆ' ಎಂಬ ಗಾದೆಯಂತೆ ಮಳೆ ಬರದಿದ್ದಕ್ಕಾಗಿರುವ ಆ ಸಿಟ್ಟನ್ನು ಉಂಡಾಡುವ ಮಕ್ಕಳ ಮೇಲೆ ತೀರಿಸಿಕೊಳ್ಳುತ್ತಾರೆ.

ಗುಲಬರ್ಗಾದ ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ಆಚರಣೆಯಲ್ಲಿರುವ ಮತ್ತೊಂದು ನಂಬಿಕೆಯೆಂದರೆ ಬುಟ್ಟಿ ಪೂಜೆ ಮಾಡುವುದು. ಬುಟ್ಟಿ ಪೂಜೆಯೆಂದರೆ ವಿವಿಧ ದವಸ-ಧಾನ್ಯಗಳನ್ನು ಬೀಸಿ, ಅದರಿಂದ ಬಗೆ-ಬಗೆಯ (ಅಡುಗೆ) ಸಿಹಿ ತಿಂಡಿ, ಹೋಳಿಗೆ, ತರತರದ ಪಲ್ಲೆಗಳಿಂದ ಆಹಾರ ತಯಾರಿಸಿ, ಒಂದು ಹೊಸ ಬುಟ್ಟಿಯಲ್ಲಿ ಆಹಾರವಿಟ್ಟು ಅದಕ್ಕೆ ಸುಣ್ಣ, ಜಾಜಿ, ಹಾಗೂ ಇತರ ಅಲಂಕಾರಿಕ ವಸ್ತುಗಳಿಂದ ಅಲಂಕರಿಸಿ, ಶಕ್ತಿ ದೇವತೆಗಳ ಗುಡಿಗಳಿಗೆ ಹೋಗಿ ಪೂಜೆ ಸಲ್ಲಿಸಿ ಸಾಮೂಹಿಕವಾಗಿ ಊಟ ಮಾಡುತ್ತಾರೆ. ಹೀಗೆ ಮಾಡುವುದರಿಂದ ಶಕ್ತಿ ದೇವತೆಗಳು ತಮ್ಮ ಮೇಲೆ ದಯೆ ತೋರಿ ಮಳೆಯನ್ನು ತರುತ್ತವೆಂಬುದು ಅವರ ನಿರೀಕ್ಷೆ.

ಜನಪದರು ನಂಬಿಕೊಂಡಿರುವ ಸಂಪ್ರದಾಯಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಿಭಿನ್ನವಾಗಿರುತ್ತವೆ. ಕೆಲವೊಂದು ನಂಬಿಕೆಗಳು ಸಾಮ್ಯವಾಗಿರುತ್ತವೆ. ಹೀಗೆ ಈ ಮೇಲಿನ ನಂಬಿಕೆಗಳಲ್ಲದೇ ಇನ್ನೂ ಕೆಲವೊಂದು (ಎರೆಭೂಮಿ) ಪ್ರದೇಶಗಳಲ್ಲಿ, ಮಳೆಯು ಬರುವುದಕ್ಕಾಗಿ, 'ಹೊಂಡ ಹಾರುವುದು, ಸಪ್ತ ಭಜನೆ, ಕತ್ತೆ ಲಗ್ನ, ಕಂಬಳಿ (ಕುರುಬ) ಬೀಸುವಿಕೆ, ಮಕ್ಕಳು ಮೂಕಗಿರಕಿ ಹಾಕುವಿಕೆ, ಈ ಎಲ್ಲಾ ಆಚರಣೆಗಳು ಇಂದಿಗೂ ಪ್ರಚಲಿತವಾಗಿವೆ. ಆದರೆ ಇವು ಎಷ್ಟರ ಮಟ್ಟಿಗೆ ಸತ್ಯ ಎಂಬುದನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಇವುಗಳಲ್ಲಿ ಹುರುಳು ಕಂಡುಬರುವುದಿಲ್ಲ.

*(ವಿವಿಧ ಮೂಲಗಳಿಂದ ಸಂಗ್ರಹ)*

**ಎಮ್. ಎಸ್. ಶೆಟ್ಟರ್**  
ಹಳೇ ಬಜಾರ, 'ಸಂಗಮೇಶ್ವರ ನಿಲಯ'  
ಯಲಬುರ್ಗಾ -೫೮೩೨೩೬ ಜಿಲ್ಲಾ॥ ಕೊಪ್ಪಳ

# ಬಸವ ಚಳುವಳಿಯ ಲಕ್ಷಣೀಕರಣ

ಪಿ. ಎಸ್. ಪಾಟೀಲ

ಕ್ರಿಸ್ತಶಕ ೧೨ನೇ ಶತಮಾನದ ಮಧ್ಯದಲ್ಲಿ ಚಾಲುಕ್ಯ ಸಾಮ್ರಾಜ್ಯದಲ್ಲಿ ನಡೆದ ಬಸವ ಪ್ರಮಥರ ಚಳುವಳಿಯನ್ನು ಐತಿಹಾಸಿಕವಾಗಿ ಹಾಗೂ ಸಾಮಾಜಿಕಾರ್ಥಿಕವಾಗಿ ಲಕ್ಷಣೀಕರಿಸುವುದು ಹೇಗೆ ? 'ಕ್ರಾಂತಿ ದೂತ ಬಸವಣ್ಣ' ಕುರಿತು 'ಹೊಸತು' ಸೆಪ್ಟೆಂಬರ್ ಸಂಚಿಕೆಯಲ್ಲಿ ಬರೆಯುತ್ತ ಶ್ರೀ ಆರ್. ಡಿ. ಹೆಳಿಂಗಳಿಯವರು ಅದನ್ನು ಪ್ರಜಾಪ್ರಭುತ್ವ ಕ್ರಾಂತಿಯ ಪ್ರಾರಂಭವೆಂದೂ, ಅದಿಂದಿಗೂ ಅಪೂರ್ಣವಾಗಿ ಮುಂದುವರೆಯುತ್ತಿದೆಯೆಂದೂ ಹೇಳಿರುವುದು 'ಅತಿ' ಎಂದು ಅಭಿಪ್ರಾಯಪಟ್ಟಿದ್ದಾರೆ. 'ಅತಿ'ಯನ್ನು ವರ್ಜಿಸಿ ಅದನ್ನು ನಿಖರವಾಗಿ ಲಕ್ಷಣೀಕರಿಸುವುದಾದರೆ, ಆ ಹೋರಾಟದ ಆಶೋತ್ತರಗಳನ್ನು ಬೇರೆ ರೀತಿ ಹೇಗೆ ವರ್ಣಿಸುವುದು? ಪ್ರಶ್ನೆ ಅತ್ಯಂತ ಪ್ರಸ್ತುತವಾಗಿದ್ದು, ಬಸವಣ್ಣ ಹಾಗೂ ಬಸವ ಚಳುವಳಿಯ ಕುರಿತು ವಿಪುಲ ಚರ್ಚೆ ನಡೆಯುತ್ತಿರುವ ಈ ಸಮಯದಲ್ಲಿ ವಿದ್ವಾಂಸರು ಗಮನಿಸಿ ಸೂಕ್ತ ಉತ್ತರ ಕಂಡುಕೊಳ್ಳುವ ಅಗತ್ಯವಿದೆ.

### ಐರೋಪ್ಯ ಇತಿಹಾಸ

ಪ್ರಜಾಪ್ರಭುತ್ವ ಕ್ರಾಂತಿ, ಸಮಾಜವಾದೀ ಕ್ರಾಂತಿ, ಪಾಳೆಯಗಾರಿಕೆಯ ನಿರಾಕರಣ - ಇತ್ಯಾದಿ ಪದ ಪ್ರಯೋಗಗಳನ್ನು ನಾವು ಐರೋಪ್ಯ ಇತಿಹಾಸದಿಂದಲೇ ಪಡೆದಿರುತ್ತೇವೆ. ಪಾಳೆಯಗಾರಿಕೆಯ ಗರ್ಭದಲ್ಲೇ ಉದಿಸಿ ಫ್ರೆಂಚ್ ಕ್ರಾಂತಿಗೆ ಜನ್ಮವಿತ್ತ ಶಕ್ತಿಗಳನ್ನು ಐರೋಪ್ಯ ಇತಿಹಾಸಕಾರರು ಫ್ರೀ, ಫ್ರೀಡಂ, ಲಿಬರ್ಟಿ, ಲಿಬರಲ್ ಇತ್ಯಾದಿ ಪದಗಳಿಂದ ವರ್ಣಿಸುತ್ತಾರೆ. ಕೆಥೋಲಿಕ್ ಚರ್ಚಿನ ಅಧಿಕಾರವನ್ನು, ಪಾಳೆಯಗಾರ ಪ್ರಭುಗಳ ನಿರಂಕುಶಾಧಿಕಾರವನ್ನು ಪ್ರಶ್ನಿಸಿದ ಜನಪರ ಶಕ್ತಿಗಳು ಈ ಶಬ್ದಗಳನ್ನೇ ತಮ್ಮ ಘೋಷಣೆಗಳಾಗಿ ಉಚ್ಚರಿಸಿದ್ದು ಕಂಡುಬರುತ್ತದೆ. ಹಾಲೆಂಡ್, ಇಂಗ್ಲೆಂಡ್, ಬೆಲ್ಜಿಯಂಗಳಲ್ಲಿ ಆಗ ತಲೆದೋರಿದ ಪ್ರಾಟೆಸ್ಟೆಂಟ್ ಚಳುವಳಿಗಳನ್ನು, ಜರ್ಮನಿಯ ಮಾರ್ಟಿನ್ ಲೂಥರ್‌ನ ಚಳುವಳಿಯನ್ನು ಕೂಡ, ಹೀಗೆಯೇ ಲಿಬರ್ಟಿ ಪರವಾದ ಚಳುವಳಿಗಳೆಂದು ಲಕ್ಷಣೀಕರಿಸಲಾಗಿದೆ. ಇಂತಹವೇ ಪ್ರೇರಣೆಗಳನ್ನು ಕಂಡಾಗ ಪೌರ್ವಾತ್ಯ ಸಂದರ್ಭದಲ್ಲೂ ಪಾಶ್ಚಿಮಾತ್ಯ ವಿದ್ವಾಂಸರು ಅದೇ ರೀತಿ ಫ್ರೀ, ಫ್ರೀಡಂ - ಇತ್ಯಾದಿ ಪದಗಳಿಂದ ಲಕ್ಷಣೀಕರಿಸಿದ್ದಾರೆ. ಬಸವಾದಿ ಪ್ರಮಥರ ಚಳುವಳಿಯನ್ನು ಅಭ್ಯಸಿಸುವ ಪಾಶ್ಚಿಮಾತ್ಯ ವಿದ್ವಾಂಸರಿಗೆ ಅದು ಹೇಗೆ ಕಾಣುತ್ತದೆ ? *ಲ್ಯಾಂಡ್ ಆಫ್ ದಿ ಲಿಂಗಂ* ಬರೆದ ಆರ್ಥರ್ ಮಾಯಿಲ್ಸ್ ಬಸವಣ್ಣನನ್ನು **ದಿ ಫರ್ಸ್ಟ್ ಫ್ರೀ ಥಿಂಕರ್ ಆಫ್ ಇಂಡಿಯಾ** ಎನ್ನುತ್ತಾನೆ. ಇದೇ ರೀತಿ ಅಭಿಪ್ರಾಯಪಟ್ಟ ವಿದ್ವಾಂಸರು ಅನೇಕರಿದ್ದಾರೆ. ಅವರನ್ನೇ ಅನುಸರಿಸಿ, ವರ್ಣಾಶ್ರಮ ವಿರೋಧಿ, ಸಕಲ ಜೀವಾತ್ಮರಿಗೆ ಲೇಸ ಬಯಸುವ, ಅಂತ್ಯಜ ಕಡೆ ಹಾರುವ ಮೊದಲಾಗಿ ಎಲ್ಲರೂ ಒಂದೇ ಎಂಬ ವಚನಕಾರರನ್ನು ಲಿಬರಲ್‌ಗಳೆಂದೂ, ಸ್ವಾತಂತ್ರ್ಯ ಪರರೆಂದೂ, ಆದ್ದರಿಂದ ಪ್ರಜಾಪ್ರಭುತ್ವವಾದಿಗಳು - ಅಂದರೆ ಎಲ್ಲ ಮನುಷ್ಯರೂ ಸಮಾನರು – ಒಬ್ಬರಿಗೆ ಒಂದೇ ಮಟ್ಟದ ಅಧಿಕಾರ ಪಡೆಯ ತಕ್ಕವರು ಎಂದು ವಾದಿಸುವವರು ಎಂದು ಹೇಳುವುದು ಸರಿಯಾಗಲಾರದೆ ? ಬಸವಣ್ಣನವರನ್ನು ನಾವು ಪ್ರಜಾಪ್ರಭುತ್ವ ಕ್ರಾಂತಿಯ ಆಧ್ವರ್ಯು ಎಂದು ಹೇಳದೆ ಆ ಕ್ರಾಂತಿಯ 'ದೂತ' ಎಂದು ಮಾತ್ರ ವರ್ಣಿಸಿದ್ದೇವೆ. ಇದು 'ಅತಿ'ಯನ್ನು ವರ್ಜಿಸಲು ಸಾಕಾಗದಿದ್ದರೆ, ಬೇರೆ ಹೆಚ್ಚು ಸೂಕ್ತವಾದ ಹಾಗೂ ವಾಸ್ತವತಾ ನಿರೂಪಕವಾದ ಪದಪ್ರಯೋಗವನ್ನು ವಿದ್ವಾಂಸರು ಹುಡುಕಬೇಕಾಗಿದೆ.

### ಸಾಹಿತ್ಯ ಚರಿತ್ರೆ

ನಮ್ಮ ಇತಿಹಾಸಕಾರರು ಈ ವಿಷಯದಲ್ಲಿ ಹೆಚ್ಚು ಬರೆದಿರದಿದ್ದರೂ, ಸಾಹಿತ್ಯ ಇತಿಹಾಸಕಾರರು ತಲೆಕೆಡಿಸಿಕೊಂಡಿದ್ದಾರೆ. ವಚನಸಾಹಿತ್ಯದ ಕಾಲಭಾಗವನ್ನು ಸಾಹಿತ್ಯ ಚರಿತ್ರೆಕಾರರು ಒಕ್ಕೊರಲಿನಿಂದ ಸ್ವಾತಂತ್ರ್ಯ ಯುಗ ಎಂದು ಲಕ್ಷಣೀಕರಿಸುತ್ತ ಬಂದಿದ್ದಾರೆ. ಆಧುನಿಕ ಕನ್ನಡದ ಬೇರುಗಳನ್ನು ಆಗಲೇ ಕಂಡಿದ್ದಾರೆ. ಅದೇ ಸ್ವಾತಂತ್ರ್ಯ ಪ್ರೇರಣೆ ಛಂದಸ್ಸಿನ ಬದಲಾವಣೆಯಲ್ಲಿ, ರಗಳೆ, ಷಟ್ಪದಿ, ಹಾಡುಗಬ್ಬ, ತ್ರಿಪದಿ - ಕೊನೆಗೆ ನವ್ಯಕಾಲದ ಮುಕ್ತ ಛಂದಸ್ಸಾಗಿ ವಿಕಾಸ ಪಡೆದದ್ದನ್ನೂ ಗಮನಿಸಿದ್ದಾರೆ. ಇದೆಲ್ಲಾ ವಾಸ್ತವವಾದರೆ ಬಸವಾದಿ ಪ್ರಮಥರು ಅಗ್ರದೂತರಾಗಿ ಉಗ್ಗಡಿಸಿದ 'ಪ್ರಜಾಪ್ರಭುತ್ವ' ಕ್ರಾಂತಿಯ ಧ್ವನಿ, ಸಂತ-ಸೂಫಿ ಚಳುವಳಿಯಾಗಿ, ದಾಸ ಚಳುವಳಿಯಾಗಿ, ಬ್ರಿಟಿಷ್ ವಿರೋಧಿ ಜನಪರ ಚಳುವಳಿಯಾಗಿ - ಹೀಗೆ ಇಂದಿಗೂ ಪಾಳೆಯಗಾರಿಕೆಯ ವಿರೋಧಿ ಪ್ರೇರಣೆಗಳಿಗೆ ಮುಖವಾಣಿಯಾಗಿ ಮುಂದುವರೆಯುತ್ತಿರುವುದು ನಿಜವಲ್ಲವೆ ? ಹಿಂದುಳಿದ ವರ್ಗಗಳ ಸೈದ್ಧಾಂತಿಕ ಹೋರಾಟ ಬಸವ ಚಳುವಳಿಯ ಮುಂದುವರಿಕೆಯೆಂದರೆ ತಪ್ಪಾದೀತೆ ? ಬಂಡಾಯ, ದಸಂಸ, ಅಂಬೇಡಕರ, ಸ್ತ್ರೀವಾದಿ - ಇತ್ಯಾದಿ ಚಳುವಳಿಗಳು ಪಾಳೆಯಗಾರಿಕೆಯ ವಿರೋಧಿ ಚಳುವಳಿಗಳೇ ಅಲ್ಲವೆ ? ಬಸವಣ್ಣನ ಕಾಲಕ್ಕೆ 'ಧ್ವನಿಮಟ್ಟದ ಫ್ರೀ ಥಿಂಕರ್ಸ್' ಚಳುವಳಿಯ ಸಮಾನಾಂತರದ ರೂಪಗಳೇ ಇವೆಲ್ಲ ಎನ್ನಲು ಏನು ಅಭ್ಯಂತರವಿದೆ ?




### ಹೊಸ ನಾಯಕರು

ಈ ಹಿನ್ನೆಲೆಯಲ್ಲಿ ಆಧುನಿಕ ಕಾಲದ ಜನಪರ ಹೋರಾಟಗಳ ನಾಯಕರು 'ಬಸವಣ್ಣ'ನನ್ನು ನೆನೆಯುವ ಪ್ರಸಂಗ ಬಂದಾಗ ಆ ಸಂದರ್ಭದಲ್ಲಿ ತಮ್ಮನ್ನು ತಾವೇ ಹೇಗೆ ವರ್ಣಿಸಿಕೊಳ್ಳುತ್ತಾರೆ ? ಕರ್ನಾಟಕದಲ್ಲಿ ಭೂಸುಧಾರಣಾ ಚಳುವಳಿಯನ್ನು ಪ್ರಜಾಪ್ರಭುತ್ವೀಕರಣ ಚಳುವಳಿಯೆಂದು ಹೇಳದೇ ಬೇರೇನೆಂದು ಹೇಳಬೇಕು ? ಅದನ್ನು ಹೊಸ ಮೈಸೂರು ಪ್ರಾಂತದಲ್ಲಿ ತಮ್ಮ ಭೂಸುಧಾರಣಾ ಕಾನೂನಿನ ಮೂಲಕ ಕೈಗೊಂಡ ಶ್ರೀ ಜತ್ತಿಯವರು ತಮ್ಮನ್ನು ಬಸವನ ಅವತಾರ ಎಂದು ಕರೆದುಕೊಂಡರೆಂದು ಕೇಳಿದ್ದೇವೆ. ಅದರ ಔಚಿತ್ಯ ಏನೇ ಇರಲಿ, ಬಸವಣ್ಣನನ್ನು ಪ್ರಜಾಪ್ರಭುತ್ವೀಕರಣದೊಡನೆ ಜೋಡಿಸುವ ಪ್ರವೃತ್ತಿ ಅರ್ಥಪೂರ್ಣವಾಗಿದೆ. ಅದೇ ಕಾನೂನನ್ನು ನಿಜಕ್ಕೂ ಪ್ರಾಮಾಣಿಕತೆಯಿಂದ ಜಾರಿಗೆ ತಂದ ಮತ್ತು ನಮ್ಮ ಪ್ರಾಂತ್ಯದ ಹಿಂದುಳಿದ ಜನಾಂಗಗಳಿಗೆಲ್ಲ ಆತ್ಮಾಭಿಮಾನದ ಪ್ರೇರಣೆಯಿತ್ತು ಹೋರಾಟದತ್ತ ಹುರಿದುಂಬಿಸಿದ ದಿ. ದೇವರಾಜ ಅರಸು ಅವರು ಅಸೆಂಬ್ಲಿಯ ಕಟ್ಟೆಯ ಮೇಲೆಯೇ ತಮ್ಮನ್ನು ಬಸವಣ್ಣನ ನಿಜಾವತಾರ ಎಂದುಕೊಂಡರು. ಮತ್ತೆ ಔಚಿತ್ಯದ ಪ್ರಶ್ನೆ ಬದಿಗಿಟ್ಟು ವಿಚಾರಿಸಿದರೆ - ಈ ಕಾಲದ ಯಾವ ಪ್ರಜಾಪ್ರಭುತ್ವ ಚಳುವಳಿಯಾಗಲಿ, ಸ್ವಾತಂತ್ರ್ಯ ಚಳುವಳಿಯಾಗಲಿ, ಸಮಾನತೆಯ ಚಳುವಳಿಯಾಗಲಿ ಒಟ್ಟಾರೆ ಯಾವುದೇ ಪಾಳೆಯಗಾರಿಕೆಯ ವಿರೋಧಿ ಚಳುವಳಿಯಾಗಲಿ ತನ್ನನ್ನು ಬಸವನ ಹೆಸರಿಗೆ ಅಂಟಿಸಿಕೊಂಡಾಗ ಮಾತ್ರ ತೃಪ್ತ ಭಾವನೆ ಪಡೆಯುತ್ತದೆಯೆಂದು ಸ್ಪಷ್ಟವಾಗುತ್ತದೆ.

ಹೀಗಿರುವುದರಿಂದ, ಬಸವಣ್ಣನ ಚಳುವಳಿ ಪ್ರಜಾಪ್ರಭುತ್ವದ ಚಳುವಳಿಯ ಪ್ರಾರಂಭವಾಗಿತ್ತೆಂದು ಹೇಳುವುದು ಸತ್ಯದಿಂದ ದೂರವಾದದ್ದೆಂದು ತೋರುತ್ತದೆ. ವರ್ಣಾಶ್ರಮ ವಿರೋಧಿ ಸರ್ವಜನ ಸಮಾನತೆಯ ಕೂಗುಗಳನ್ನು ಪಾಳೆಯಗಾರ ವಿರೋಧಿ ಕೂಗುಗಳೆಂದು ಮಾತ್ರ ಲಕ್ಷಣೀಕರಿಸಲು ಸಾಧ್ಯ.

ಬಸವಣ್ಣ ಹೊಡೆದೆಬ್ಬಿಸಿದ ಕಸುಬುಗಾರರು, ಒಕ್ಕಲಿಗರು, ನಮ್ಮ ವ್ಯಾಪಾರಿಗಳೆಲ್ಲ ಆ ಸಂದರ್ಭದಲ್ಲೇ ತಲೆಯೆತ್ತುತ್ತಿದ್ದ, ''ಆಂತ್ರಪ್ರನರ್''ಗಳಾಗಲಿದ್ದ, ತಮ್ಮ ಕಾಯಕ ಸಾಧನಗಳನ್ನು ತಾವೇ ಮಾಲೀಕರಾಗಿ ಪಡೆದ ವರ್ಗಗಳು. ಈ ವರ್ಗಗಳೇ ಆನಂತರದ ಬೂರ್ಜ್ವ-ಬಂಡವಾಳಶಾಹಿ ಕೆಪಿಟಲಿಸಂ ವರ್ಗಗಳು. ಈ ವರ್ಗಗಳೇ ಇತಿಹಾಸದ ಪ್ರಜಾಪ್ರಭುತ್ವ ಕ್ರಾಂತಿಯ ಕೈವಾರಿ ವರ್ಗಗಳು. ಇವರೆಲ್ಲ ಸ್ವತಃ ಕಾಯಕಿಗಳು, ಬೇರೆಯವರಿಗಾಗಿ ಕೂಲಿಕಾಯಕ ಮಾಡತಕ್ಕವರಲ್ಲ, ತಮ್ಮ ವ್ಯಕ್ತಿತ್ವ, ಆತ್ಮಘನತೆಗಾಗಿ ಹೋರಾಡತಕ್ಕವರು. ಆದ್ದರಿಂದ ಈ ಜನ ವರ್ಗಗಳ ಆಶೋತ್ತರಗಳನ್ನು ಪ್ರಜಾಪ್ರಭುತ್ವವಾದೀ ಆಶೋತ್ತರಗಳೆಂದು ಮಾತ್ರ ಲಕ್ಷಣೀಕರಿಸಬಹುದು.

**ಸಮಾಜವಾದ**

ಇವರಾರೂ ಸಮಾಜವಾದೀ ಆಶೋತ್ತರ ಹೊಂದಿದವರಲ್ಲ ಎಂಬುದನ್ನು ಮರೆಯತಕ್ಕದ್ದಲ್ಲ. ಇವರೆಲ್ಲ ನಂತರ ಬಂದ ಪಾಳೇಗಾರರ ಬೆಂಬಲಿಗರು. ಆದ್ದರಿಂದ ಇವರನ್ನು ಆಧುನಿಕ ಬಂಡವಾಳಶಾಹಿಯ ಶೋಷಣೆಗೊಳಗಾದ ಕೂಲಿಕಾರರೆಂದರೆ ಪ್ರಮಾದವಾಗುತ್ತದೆ. ಈ ಹೊಸ ಕೂಲಿಕಾರ ವರ್ಗ ಮಾತ್ರ ತನ್ನ ಮುಕ್ತಿಯನ್ನು ಬಂಡವಾಳಶಾಹಿಯ ಕೊನೆಯ ದ್ವಾರಾ, ಉತ್ಪಾದನಾ ಸಾಧನೋಪಕರಣಗಳ ಖಾಸಗೀ ಒಡೆತನವನ್ನೇ ಕೊನೆಗಾಣಿಸಿ ಸಾಮಾಜಿಕ ಸ್ವಾಮ್ಯ ಏರ್ಪಡಿಸುವಲ್ಲಿ ತಮ್ಮ ಬಿಡುಗಡೆಯನ್ನು ಕಾಣುತ್ತಾರೆ. ಈ ಪ್ರೋಲಿಟೇರಿಯನ್ ಕಾಯಕಿಗಳು ಬಸವ ಯುಗದಲ್ಲಿ ಇದ್ದರೆಂದು ಯಾರೂ ಪ್ರತಿಪಾದಿಸುವುದಿಲ್ಲ. ಆದ್ದರಿಂದ ಬಸವಯುಗದ ಕಾಯಕ ಜೀವಿಗಳ ಹೋರಾಟ ಪ್ರಜಾಪ್ರಭುತ್ವ ಸಿದ್ಧಿಗಾಗಿ ನಡೆಯಬಹುದಾಗಿತ್ತೇ ವಿನಾ, ಸಮಾಜವಾದೀ ಕ್ರಾಂತಿಗಾಗಿ ಸರ್ವಥಾ ಅಲ್ಲ. ಇದನ್ನೇ ಗ್ರಂಥದಲ್ಲಿ ನಾವು ಗಮನಿಸಿದ್ದು. ಈ ದೃಷ್ಟಿಯಿಂದ ಯಾವುದೇ 'ಅತಿ' ಘಟಿಸಿರುವುದಿಲ್ಲ.

**ಸಮತಾವಾದ**

ಕೊನೆಯದಾಗಿ, ಬಸವಾದಿ ಪ್ರಮಥರ ಸಮತಾ ಪ್ರತಿಪಾದನೆಯನ್ನು ಮೂಲತಃ ಪ್ರಜಾಪ್ರಭುತ್ವವಾದೀ ಸಮತಾಪರತೆಯೆಂದು ಸ್ಪಷ್ಟಪಡಿಸಿ, ಅದು ಸಮಾಜವಾದೀ ಪರವಾಗದೆಂದು ವಿವರಿಸಿ, ಅದರ 'ಮಹಾಮನೆ'ಯ ಆದರ್ಶವನ್ನು ಪ್ರಿಮಿಟಿವ್ ಕಮ್ಯುನಿಸಂ ವಾದಕ್ಕೆ ಸಮಾನವಾದುದೆಂದು ವಿವರಿಸಲಾಗಿದೆ. ಈ ವಿವರಣೆ ಈ ಗ್ರಂಥದಲ್ಲಿ ಪೂರಾ ಬರಲಿಲ್ಲ ನಿಜ, ಆದರೆ ಇದಕ್ಕೆ ಪೂರಕವಾಗಿ ಬಂದ **ಬಸವ ಚಳುವಳಿಯ ಭೌತವಾದಿ ಅಧ್ಯಯನದ**ಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ. ಚಳುವಳಿಯ ಈ ಪ್ರಶ್ನೋತ್ತರದಿಂದಾಗಿಯೇ ಅದು ''ಲೋಕ ವಿರೋಧಿ''ಯಾಯಿತೆಂದೂ ವಿವರಿಸಲಾಗಿದೆ. ಎಂತಲೇ ಚಳುವಳಿ ಬೆಳೆಯುತ್ತಿರುವ ಖಾಸಗೀವಾದದೆದುರು ಒಂದು 'ವೀರ ಮತವಾದ'ವಾಗಿ ಮಾತ್ರ ಉಳಿದು ಬಂದಿತು. ಆದರೂ ಅದರ ಎಂಥದೋ ಕಮ್ಯೂನ್ ವಾದ ಇಂದಿನ ಬಂಡವಾಳೋತ್ತರ ಕಮ್ಯೂನ್ ವಾದಕ್ಕೆ ಒಂದು ವಿಧದ ಪ್ರೋತ್ಸಾಹವನ್ನು ನೀಡುತ್ತಿದೆ ಮಾತ್ರ.

ಇಷ್ಟಾಗಿಯೂ ಬಸವ ಚಳುವಳಿಯ ಲಕ್ಷಣೀಕರಣದ ಪ್ರಶ್ನೆ ಕೊನೆಯದಾಗಿ ನಿರ್ಧಾರವಾಗಿ ಅದರ ಬೆಳಕು ಆಧುನಿಕ ಹೋರಾಟದಲ್ಲೂ ದಾರಿದೀಪವಾಗಲು ನೆರವಾಗುವಂತೆ ವಿದ್ವಾಂಸರಲ್ಲಿ ಚರ್ಚೆ ಮುಂದುವರೆಯಲೇಬೇಕಾಗಿದೆ.

**ಪಿ. ಎಸ್. ಪಾಟೀಲ**
ಅಡ್ವೋಕೇಟ್, ಅಕ್ಕಮಹಾದೇವಿ ಕ್ರಾಸ್ ರೋಡ್
ಬಿಜಾಪುರ-೫೮೬ ೧೦೧

ಜಗತ್ತಿನಲ್ಲಿ
ಮೊತ್ತಮೊದಲು ನಾ ಅತ್ತಾಗ
ನನ್ನ ತಾಯಿ ಮುಗುಳ್ನಕ್ಕಿದ್ದಳು

**ಹರ್ಷದ್ ವರ್ಕಾಡಿ**
ಹಲಸಿನಕಟ್ಟೆ, ಅಂಚೆ : ವರ್ಕಾಡಿ
ಕೇರಳ ರಾಜ್ಯ - ೬೭೧ ೩೨೩

## ಬಿಚ್ಚೋಲೆ ಗೌರಮ್ಮ

ಗೊತ್ತಲ್ಲ ನಿಮಗೆ ಬಿಚ್ಚೋಲೆ ಗೌರಮ್ಮ ?
ಕೆಲವೇ ಬಿಳಿಕೂದಲು, ಮಧ್ಯೆ ಬೈತಲು
ಮೂಗುತಿ ವಜ್ರದೋಲೆ ಕಾಸಿನ ಸರ ಎಂಟುತೊಲೆ !
ನೆಪ್ಪಾಯಿತೆ ?
ಕಮಲದ ಕಂಪನಿಯವರು ವಿದೇಶೀ ದಲ್ಲಾಳಿಗಳಿಗೆ
ಪಾರ್ಟಿ ಕೊಟ್ಟರು ಇಂಡಿಯಾ ಇಂಟರ್‌ನ್ಯಾಷನಲ್ ಹೊಟಲಲ್ಲಿ
ಆಮಂತ್ರಣವಿತ್ತು ಗೌರಮ್ಮನಿಗು.
ಹುಬ್ಬು ಕತ್ತರಿಸಿ, ತುಟಿ ತುಟಿಕಟ್ಟಿಗೆ, ಕೆನ್ನೆಗೆ ಕೆಂಬಣ್ಣ
ಕಣ್ಣಿಗೆ ಕಾಡಿಗೆ ತೀಡಿ,
ಸನಾತನವ ಆಧುನಿಕಗೊಳಿಸಿಕೊಂಡು ಬಂದರೆ
ಭಾರತಾಂಬೇ ಎಂದು ಅಡ್ಡಬಿದ್ದು ಪರಿಚಯಿಸಿದರು
ಅದೇ ಕಮಲದ ಕಂಪನಿಯವರು.
ಜೊತೆ ನಿಂತು ಫೋಟೋ ಹಿಡಿಸಿಕೊಂಡರು ವಿದೇಶೀಯರು.
ಆಮೇಲೆ 'ನೊರೆಗರೆವ ವಿಸ್ಕಿ ಸೋಡಾ' ಸರಬರಾಜು
ಕೈ ಕೈ ಹಿಡಿದು ಕುಣಿವ ಮೋಜು.

''ಬನ್ನಿ ನಾನೂ ಕುಣಿವೆ ನಿಮ್ಮೊಂದಿಗೆ''
ಎಂದರು. ಯಾರು ? ಬಿಚ್ಚೋಲೆ ಗೌರಮ್ಮನವರು !
ಕೈ ಮುಗಿದು ಹಿಂಜರಿದರು ವಿದೇಶೀ ಹೈದರು.

ಇನ್ನೊಮ್ಮೆ ಕೂಗಿದರು ಗೌರಮ್ಮನವರು
ಬನ್ನಿ ನಾನೂ ಕುಣಿವೆ ನಿಮ್ಮೊಂದಿಗೆ,
ದೇಶೀ ಹುಡುಗರು ಪಿಸುನುಡಿ ಬದಲಿಸಿಕೊಂಡು
ಮೂಲೆ ಸೇರಿದರು.

ಸೋಲದ ಗೌರಮ್ಮ
ತೋಳು ಚಾಚಿ ಇಂಗ್ಲಿಷಿನಲ್ಲೇ ಗದರಿದರು:

''ಬನ್ನಿರೋ ಕುಣಿವೆ ನಿಮ್ಮೊಂದಿಗೆ
ಯಾವುದೂ ರೋಗವಿಲ್ಲ ನನಗೆ !''
ಕೈ ತಟ್ಟಿ ನಗುತ ದೂರ ಸರಿದರೆಲ್ಲರೂ
ಯಾರೊಬ್ಬರೂ ಬರಲಿಲ್ಲ ತಾಂಬೂಲ ಕೊಡಲು
ಕಣ್ಣೀರುಗರೆದರು ಗೌರಮ್ಮನವರು !



**ಚಂದ್ರಶೇಖರ ಕಂಬಾರ**
ಸಿರಿಸಂಪಿಗೆ, ನಂ. ೧೩೬, ಕೆಂಗೇರಿ ಉಪನಗರ
ಬೆಂಗಳೂರು-೫೬೦ ೦೬೦

# ಮಹಾತ್ಮ ಗಾಂಧಿ ಎಂಬ ಮಹಾನ್ ಚೇತನ

**ಕುಸುಮ ಡಿ. ಟಿ.**



ನಮ್ಮ ದೇಶದ ಪಿತಾಮಹ ಹಾಗೂ ಮಹಾತ್ಮ ಎಂಬ ಅತ್ಯುನ್ನತ ಸ್ಥಾನವನ್ನು ಪಡೆದಿರುವಂತಹ ಗಾಂಧೀಜಿಯವರ ಜೀವನ ಚರಿತ್ರೆಯಾದ ''ನನ್ನ ಸತ್ಯಾನ್ವೇಷಣೆ'' ಎಂಬ ಅಮೂಲ್ಯ ಪುಸ್ತಕದ ವಿಮರ್ಶೆ ಮಾಡುವುದು ಸುಲಭದ ಕೆಲಸವೇನಲ್ಲ. ಅವರು ಅದನ್ನು ತಮ್ಮ ಜೀವನ ಚರಿತ್ರೆ ಎನ್ನುವದಕ್ಕಿಂತ ಹೆಚ್ಚಾಗಿ ತಮ್ಮ ಜೀವನದಲ್ಲಿನ ಅನುಭವಗಳು, ಅಂದರೆ, ಸತ್ಯದ ಜೊತೆಗಿನ ಪ್ರಯೋಗಗಳು ಎಂದೇ ವರ್ಣಿಸಿದ್ದಾರೆ. ಸತ್ಯ ಹಾಗೂ ಅಹಿಂಸೆ ಎಂಬ ಎರಡು ಉದಾತ್ತ ಮೌಲ್ಯಗಳನ್ನು ಆಧರಿಸಿ ಇಡೀ ಪ್ರಪಂಚವನ್ನೇ ತಮ್ಮ ಪ್ರಭಾವಕ್ಕೆ ಸೆಳೆದುಕೊಂಡ ಮಹಾನ್ ಚೇತನ ಗಾಂಧೀಜಿ. ಇವರ ಈ ಪ್ರಯೋಗಗಳು ಅಂದರೆ ಜೀವನ ಚರಿತ್ರೆಯ ಬಗೆಗಿನ ಒಂದು ಸಣ್ಣ ಕಿರುನೋಟ ಇಲ್ಲಿದೆ.

ಗಾಂಧೀಜಿ ಅವರು ಎಂದೂ ಕೂಡ ಒಂದು ಸುಳ್ಳು ಹೇಳಿರಲಿಲ್ಲ, ಅಲ್ಲದೆ ಮೊದಲಿನಿಂದಲೂ ಬಹಳ ನಾಚಿಕೆ ಸ್ವಭಾವದವರಾಗಿದ್ದರು. ಒಂದು ಬಾರಿ ಇನ್‌ಸ್ಪೆಕ್ಟರು ಶಾಲೆಗೆ ಬಂದರು. ಅವರು ಗಾಂಧೀಜಿಯವರನ್ನು 'Kettle' ಎಂಬ ಪದದ ಕಾಗುಣಿತವನ್ನು ಹೇಳುವಂತೆ ಕೇಳಿದರು. ಆದರೆ ಗಾಂಧೀಜಿ ಅದನ್ನು ಸರಿಯಾಗಿ ಉಚ್ಚರಿಸಲೇ ಇಲ್ಲ. ಅವರ ಶಿಕ್ಷಕರು ಅವರಿಗೆ ಸಂಜ್ಞೆಯಿಂದ ಹೇಳಿಕೊಟ್ಟರೂ ಕೂಡ ಹೇಳಲಿಲ್ಲ. ಹೀಗೆ ಎಂಥ ಸನ್ನಿವೇಶದಲ್ಲೂ ಕೂಡ ಕಾಪಿ ಮಾಡುವುದನ್ನು ಕಲಿಯಲಿಲ್ಲ. ಒಂದು ಬಾರಿ ಅವರು ಶ್ರವಣಕುಮಾರನ ಬಗ್ಗೆ ಒಂದು ಪುಸ್ತಕವನ್ನು ಓದಿದರು. ಅದು ಅವರ ಜೀವನದ ಮೇಲೆ ಮಾತೃ ಹಾಗೂ ಪಿತೃಭಕ್ತಿಗಳನ್ನು ಇಮ್ಮಡಿಸಿದ ಮೊದಲ ಪುಸ್ತಕ.

ಇನ್ನೊಂದು ಅವರ ಮೇಲೆ ಅತ್ಯಂತ ಪ್ರಭಾವ ಬೀರಿದ ಕೃತಿ ಎಂದರೆ 'ಹರಿಶ್ಚಂದ್ರ' ನಾಟಕ. ಹರಿಶ್ಚಂದ್ರ ಅವರ ಜೀವನದ ಒಬ್ಬ ಆದರ್ಶಮಯ ವ್ಯಕ್ತಿಯಾಗಿಬಿಟ್ಟ.

ಅವರಿಗೆ ಹದಿಮೂರು ತುಂಬಿದಾಗ ಕಸ್ತೂರ್‌ಬಾ ಅವರೊಡನೆ ವಿವಾಹವಾಯಿತು. ಅಷ್ಟು ಚಿಕ್ಕ ವಯಸ್ಸಿನಲ್ಲೇ ಆದ ತಮ್ಮ ಮದುವೆಯ ಬಗ್ಗೆ ಗಾಂಧೀಜಿ ಬಹಳ ಖೇದವನ್ನು ವ್ಯಕ್ತಪಡಿಸಿದ್ದಾರೆ. ಅವರಿಗೆ ಆ ಸಮಯದಲ್ಲಿ ಎಲ್ಲಾ ಹುಡುಗಾಟ ಎನಿಸಿದರೂ ನಂತರ ಇದರ ಬಗ್ಗೆ ಬಹಳ ಬೇಸರಪಟ್ಟಿದ್ದಿದೆ. ಕಸ್ತೂರ್‌ಬಾ ಆಗ ಬಹಳ ಸರಳ ವ್ಯಕ್ತಿತ್ವದ ಅನಕ್ಷರಸ್ಥ ಹಾಗೂ ಮುಗ್ಧ ಹುಡುಗಿ. ಆಕೆಗೂ ಮದುವೆಯಾದಾಗ ಹದಿಮೂರು ವರ್ಷ. ಆಗ ಗಾಂಧೀಜಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದರು. ಒಂದು ಬಾರಿ ಶಾಲೆಯಲ್ಲಿ ತಮ್ಮ ಬೇಜವಾಬ್ದಾರಿಯಿಂದಾಗಿ ಸುಳ್ಳುಗಾರನೆನಿಸಿಕೊಂಡರು. ಅಂದಿನಿಂದ ಸತ್ಯವಂತನಾದವನು ಜವಾಬ್ದಾರಿಯುತನಾಗಿಯೂ ಇರಬೇಕು ಎಂಬ ಅಂಶವನ್ನು ಜೀವನದಲ್ಲಿ ರೂಢಿಸಿಕೊಂಡರು.

ಈ ಸಮಯದಲ್ಲೇ ಅವರ ಜೀವನದ ಪ್ರಮುಖ ತಪ್ಪುಗಳು ನಡೆದವು. ಅವರು ಕತ್ತಲೆಗೆ ತುಂಬಾ ಹೆದರುತ್ತಿದ್ದರು. ಆದ್ದರಿಂದ ಅವರ ಸ್ನೇಹಿತನೊಬ್ಬ ಅವರಿಗೆ ಮಾಂಸಾಹಾರ ತಿಂದರೆ ಧೈರ್ಯ ಬರುವುದೆಂದು ಹುರಿದುಂಬಿಸಿದ. ಇದರಿಂದ ವೈಷ್ಣವನಾಗಿದ್ದರೂ ಕೂಡ ಗಾಂಧೀಜಿ ತಮ್ಮ ಜೀವನದಲ್ಲಿ ಮೊದಲನೆಯಬಾರಿಗೆ ಮಾಂಸವನ್ನು ತಿಂದರು. ಅದೇ ಸ್ನೇಹಿತನ ಮಾತನ್ನು ಕೇಳಿ ತಮ್ಮ ಹೆಂಡತಿಗೆ ಹಿಂಸೆಯನ್ನೂ ಕೊಟ್ಟದ್ದುಂಟು ಹಾಗೂ ನಂತರ ಅದರ ಬಗ್ಗೆ ಪಶ್ಚಾತ್ತಾಪಪಟ್ಟದ್ದೂ ಉಂಟು. ಸಿಗರೇಟ್ ಸೇದುವುದಕ್ಕಾಗಿ ದುಡ್ಡು ಕದ್ದು ತಂದವರು ಗಾಂಧೀಜಿ. ನಂತರ ಆತ್ಮಹತ್ಯೆಗೆ ಕೂಡ ಪ್ರಯತ್ನಿಸಿ ವಿಫಲರಾದವರು. ಈ ರೀತಿ ಎಷ್ಟೋ ತಪ್ಪುಗಳನ್ನು ಮಾಡಿದ ಗಾಂಧೀಜಿ ಒಂದೊಂದು ತಪ್ಪಿನಲ್ಲೂ ಒಂದೊಂದು ಪಾಠವನ್ನು ಕಲಿತರು. ಅದನ್ನೆಲ್ಲಾ ಒಂದು ಪತ್ರದಲ್ಲಿ ಬರೆದು ತಂದೆಗೆ ತಿಳಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರು. ಮುಂದೆಂದೂ ತಮ್ಮ ಜೀವನದಲ್ಲಿ ತಪ್ಪುಗಳನ್ನು ಪುನರಾವರ್ತಿಸಲಿಲ್ಲ.

೧೮೮೭ರಲ್ಲಿ ಮೆಟ್ರಿಕ್ ಪರೀಕ್ಷೆಯನ್ನು ಮುಗಿಸಿ ಅವರು ನಂತರದ ಉಚ್ಚ ಶಿಕ್ಷಣಕ್ಕಾಗಿ ಇಂಗ್ಲೆಂಡ್‌ಗೆ ತೆರಳುವುದಕ್ಕಿಂತ ಮುಂಚೆ ತಮ್ಮ ತಾಯಿಗೆ ಮೂರು ಆಶ್ವಾಸನೆಗಳನ್ನು ಕೊಟ್ಟರು. ಅವು ಹೆಣ್ಣು, ಸಾರಾಯಿ ಹಾಗೂ ಮಾಂಸವನ್ನು ವಿದೇಶದಲ್ಲಿ ಮುಟ್ಟುವುದಿಲ್ಲ ಎಂದು. ಅದರಂತೆ ಎಷ್ಟೇ ಕಷ್ಟ ಬಂದರೂ ಕೂಡ ಅವರು ಅಲ್ಲಿ ಎಂದೂ ತಮ್ಮ ಮಾತನ್ನು ಮೀರಲಿಲ್ಲ. ಅವರದು ತೀರಾ ಸಂಕೋಚದ ಪ್ರವೃತ್ತಿ. ಹತ್ತು ಜನರ ಮುಂದೆ ನಿಂತು ಮಾತನಾಡಲು ಯಾವಾಗಲೂ ಹಿಂದೆ. ಈ ನಿಟ್ಟಿನಲ್ಲಿ ಹೇಳುವುದಾದರೆ ದಕ್ಷಿಣ ಆಫ್ರಿಕಾಕ್ಕೆ ಬಂದ ಮೇಲೆಯೇ ಬಹಳ ವಾಕ್ಚಾತುರ್ಯವನ್ನು ಗಳಿಸಿಕೊಂಡರು. ಅವರು ತಮ್ಮ ಸಂಕೋಚ ಪ್ರವೃತ್ತಿಯನ್ನು ಕೂಡ ಸತ್ಯಾನ್ವೇಷಣೆಯ ಒಂದು ಭಾಗವೆಂದೇ ಭಾವಿಸಿದ್ದರು. ಈ ರೀತಿ ತಮ್ಮ ಜೀವನದ ದೌರ್ಬಲ್ಯಗಳನ್ನೇ ತಮ್ಮ ಶಕ್ತಿಯನ್ನಾಗಿ ಮಾಡಿಕೊಂಡ ಅದ್ಭುತ ವ್ಯಕ್ತಿ ಗಾಂಧೀಜಿ. ಈ ಮಧ್ಯೆ ಅವರಿಗೆ ಭಾರತದ ಥಿಯೋಸಾಫಿಕಲ್ ಸೊಸೈಟಿಗೆ ಸೇರಿಕೊಳ್ಳಲು ಅವಕಾಶ ಬಂದರೂ ಕೂಡ ಅವರು ಸೇರಿಕೊಳ್ಳಲಿಲ್ಲ. ಏಕೆಂದರೆ ಅಲ್ಲಿ ಧರ್ಮದ ಪ್ರಚಾರ ಮಾಡಲಾಗುತ್ತಿತ್ತು. ಆದ್ದರಿಂದ, ಗಾಂಧೀಜಿ ತನಗೆ ಗೊತ್ತಿಲ್ಲದಿರುವುದನ್ನು ಬೇರೆಯವರಿಗೆ ಹೇಗೆ ಹೇಳುವುದು, ಮೊದಲು ತನಗೆ ತಾನೇ ಧರ್ಮದ ಅರಿವು ಮೂಡಿಸಿಕೊಂಡ ಮೇಲೆ ಅದಕ್ಕೆ ಸೇರುತ್ತೇನೆ ಎಂದರಂತೆ. ಇಲ್ಲದಿದ್ದರೆ ಅರ್ಧಜ್ಞಾನ ಅಪಾಯಕ್ಕೆ ಎಡೆಮಾಡಿಕೊಡುವ ಸಂದರ್ಭಗಳು ಹುಟ್ಟಿಕೊಳ್ಳುತ್ತವೆಂಬುದು ಅವರ ಸ್ಪಷ್ಟ ಅಭಿಮತವಾಗಿತ್ತು.

ಗಾಂಧೀಜಿಯವರು ತಮ್ಮ ವಕೀಲ ವೃತ್ತಿಯ ಪರೀಕ್ಷೆಗಳನ್ನು ೧೮೯೧ರ ಜೂನ್ ೧೦ರಂದು ಮುಗಿಸಿ ೧೨ನೇ ತಾರೀಖಿನಂದು ತವರಿಗೆ ವಾಪಸ್ಸಾದರು. ಅವರು ತಾವು ಓದಿದುದನ್ನು ಕಾರ್ಯರೂಪಕ್ಕೆ ತರಲು ಪಟ್ಟ ಶ್ರಮ ಅಷ್ಟಿಷ್ಟಲ್ಲ. ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಸ್ನೇಹಿತನೊಬ್ಬನ ಸಲಹೆಯ ಮೇರೆಗೆ ದಾದಾಭಾಯಿ ನವರೋಜಿಯವರ ಕೆಲವು ಸಭೆಗಳಿಗೆ ತಪ್ಪದೇ ಹಾಜರಾಗುತ್ತಿದ್ದರು. ಅವರೊಡನೆಯ ಮಾತುಕತೆಗಳಿಂದ ತಮ್ಮ ಆತ್ಮಸ್ಥೈರ್ಯ ಹೆಚ್ಚಿತೆಂದು ಅವರೇ ಹೇಳಿಕೊಂಡಿದ್ದಾರೆ.

ಅಕ್ಟೋಬರ್ ೨ ಗಾಂಧಿ ಜಯಂತಿಯ ದಿನ. ಆ ಮಹಾನ್ ಚೇತನದ ಬದುಕು ಆದರ್ಶಗಳನ್ನು ನೆನಪಿಸಿಕೊಳ್ಳುವುದಲ್ಲದೆ ಅವರು ಅನುಸರಿಸಿದ ಮೌಲ್ಯಗಳ ಆಧಾರದ ಮೇಲೆ ಈ ರಾಷ್ಟ್ರದ ಕನಸುಗಳನ್ನು ನನಸಾಗಿಸುವಲ್ಲಿ ನಮ್ಮ ಸಾಧನೆಗಳೇನು ಎಂಬುದನ್ನು ಮೌಲ್ಯಮಾಪನಕ್ಕೆ ಗುರಿಮಾಡಿಕೊಳ್ಳಬೇಕಾದ ಸಂದರ್ಭವೂ ಕೂಡ.

ಗಾಂಧಿ ೧೯೩೧ರಲ್ಲಿ ಇಂಗ್ಲೆಂಡಿಗೆ ಭೇಟಿ ಇತ್ತ ಸಂದರ್ಭ. ಅವರನ್ನು ಮುತ್ತಿಕೊಂಡ ಸಾವಿರಾರು ಅಭಿಮಾನಿಗಳ ಗುಂಪಿನಲ್ಲಿದ್ದ ಒಂದು ಪುಟ್ಟ ಹುಡುಗಿ ಈ ಅರೆಬೆತ್ತಲೆ ಮೈಯಿನ, ವಿಚಿತ್ರ ವ್ಯಕ್ತಿಯನ್ನು ನೋಡಿ ಬೆರಗಿನಿಂದ ''ಅಮ್ಮಾ , ಈ ಮನುಷ್ಯ ನಿಜವಾಗಿಯೂ ಅಷ್ಟು ದೊಡ್ಡ ವ್ಯಕ್ತಿಯೇ ?'' ಎಂದು ತನ್ನ ಅಮ್ಮನನ್ನು ಕೇಳಿದಳಂತೆ. ಗಾಂಧೀಜಿ ಅವರದು ಎಂದೆಂದಿಗೂ ಅಚ್ಚರಿ ಮೂಡಿಸುವಂತಹ ವ್ಯಕ್ತಿತ್ವ. ಆ ಇಂಗ್ಲೆಂಡಿನ ಬಾಲಕಿಯಂತೆಯೇ ಬೆರಗುಗೊಂಡಿರುವ ನಮ್ಮ ಚಾಮರಾಜನಗರದ ಹೊಂಡರಬಾಳುವಿನ ಶಾಲೆಯಲ್ಲಿ ಹತ್ತನೆಯ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿನಿ ಡಿ. ಟಿ. ಕುಸುಮ ಗಾಂಧೀಜಿ ಅವರ ಆತ್ಮಕಥೆ ''ನನ್ನ ಸತ್ಯಾನ್ವೇಷಣೆ''ಯನ್ನು ಓದಿ ಪ್ರಭಾವಿತಳಾಗಿ ಅವರ ಬದುಕು ಜೀವನದ ಬಗ್ಗೆ ಬರೆದಿದ್ದಾರೆ.

ಭಾರತಕ್ಕೆ ಬಂದ ಮೇಲೆ ಗಾಂಧೀಜಿ ಅವರಿಗೆ ತಮ್ಮ ತಾಯಿ ತೀರಿಹೋದ ಸುದ್ದಿ ತಿಳಿಯಿತು. ಗಾಂಧೀಜಿಯವರಿಗೆ ತಮ್ಮ ಗುರುವಿನ ಬಗ್ಗೆ ಬಹಳ ಗೌರವವಿತ್ತು. ಒಬ್ಬರ ಜೀವನ ಸಾರ್ಥಕವಾಗಬೇಕಾದರೆ ಒಬ್ಬ ಗುರುವಿನ ಪ್ರಭಾವ ಇರಲೇ ಬೇಕೆಂಬುದು ಅವರ ನಂಬಿಕೆಯಾಗಿತ್ತು. ಅವರ ಜೀವನದ ಮೇಲೆ ಅತಿ ಹೆಚ್ಚು ಪ್ರಭಾವ ಬೀರಿದ ಮೂರು ಅಂಶಗಳು, ಅವರೇ ಹೇಳಿಕೊಂಡಿರುವ ಹಾಗೆ ರಾಯ್‌ಚಂದ್ ಭಾಯ್‌ರವರ ಜೊತೆಗಿನ ಜೀವನ ಸಂಪರ್ಕ, 'The Kingdom of God is Within You' ಎಂಬ ಟಾಲ್‌ಸ್ಟಾಯ್‌ರವರ ಕೃತಿ ಹಾಗೂ 'Unto This Last' ಎಂಬ ಜಾನ್ ರಸ್ಕಿನ್‌ರ ಪುಸ್ತಕ.



ಕೆಲವು ದಿನಗಳ ನಂತರ ಗಾಂಧೀಜಿಯವರಿಗೆ ದಕ್ಷಿಣ ಆಫ್ರಿಕಾಕ್ಕೆ ಹೋಗುವ ಅವಕಾಶ ಸಿಕ್ಕಿತು. ಅಲ್ಲಿ ಒಮ್ಮೆ ರೈಲುಪ್ರಯಾಣ ಮಾಡುತ್ತಿದ್ದಾಗ ಕಪ್ಪು ಜನಾಂಗದವರೆಂದು ಅವರನ್ನು ರೈಲಿನಿಂದ ಹೊರದೂಡಿದರು. ಅಲ್ಲದೆ ಅಲ್ಲಿ ಅವರಿಗೆ ಆದ ಅವಮಾನದ ಪ್ರಸಂಗಗಳು ಹಲವಾರು. ಅದೇ ಸಂದರ್ಭದಲ್ಲಿ ಅವರಿಗೆ ಅನೇಕ ಭಾರತೀಯರ ಪರಿಚಯವಾಯಿತು. ಅಲ್ಲಿನ ಭಾರತೀಯರ ಹೀನಾಯ ಪರಿಸ್ಥಿತಿಯನ್ನು ಕಣ್ಣಾರೆ ಕಂಡ ಅವರು ಅದಕ್ಕೆ ಪರಿಹಾರಗಳ ಬಗ್ಗೆ ಚಿಂತಿಸತೊಡಗಿದರು. ಪರಿಣಾಮ ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿನ ಭಾರತೀಯರ ಹಕ್ಕಿಗಾಗಿ ಹೋರಾಡ ತೊಡಗಿದ್ದು. ನಾಟಾಲ್‌ನಲ್ಲೇ ತಂಗಿದ ಗಾಂಧೀಜಿ ಪತ್ರಿಕೆಗಳ ಮೂಲಕ ತಮ್ಮ ಹೋರಾಟಕ್ಕೆ ಹೊಸ ಆಯಾಮವನ್ನು ಸೃಷ್ಟಿಸಿಕೊಂಡರು. ಅಲ್ಲಿನ ಸಾಮಾಜಿಕ ಸುಧಾರಣೆಗೆ ಟೊಂಕ ಕಟ್ಟಿ ನಿಂತು ನಾಟಾಲ್ ಭಾರತೀಯ ಕಾಂಗ್ರೆಸ್ ಸ್ಥಾಪನೆಗೂ ಕಾರಣರಾದರು. ಕೊನೆಗೂ ಗಾಂಧೀಜಿ ಹೋರಾಟಗಳ ಮೂಲಕ ದಕ್ಷಿಣ ಆಫ್ರಿಕಾದಲ್ಲಿ ಜನಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾದರು. ಈ ಯಶಸ್ಸು ನಂಬಿಕೆ, ತಾಳ್ಮೆ, ಪರಿಶ್ರಮದ ಮಹತ್ವವನ್ನು ಸಾರಿತು. ಈ ಮೂರು ರತ್ನಗಳು ನಮ್ಮ ವಶವಾದರೆ ಜಯವೆಂಬುದು ಮರೀಚಿಕೆಯಲ್ಲ ಎಂಬುದನ್ನು ಗಾಂಧೀಜಿ ತೋರಿಸಿಕೊಟ್ಟರು. ನಂತರ ಭಾರತಕ್ಕೆ ಮರಳಿ ಬಂದದ್ದು ಅವರ ಜೀವನದಲ್ಲಿಯೇ ಒಂದು ಹೊಸ ಅಧ್ಯಾಯವನ್ನೇ ತೆರೆಯಿತೆನ್ನಬೇಕು.

ಮೊದಲು ಮುಂಬೈಯಲ್ಲಿ ಜರುಗಿದ ಸಭೆ ನಂತರ ಪೂನಾ ಮದ್ರಾಸ್ ಹೀಗೆ ಒಂದಾದ ನಂತರ ಒಂದು ಕಾರ್ಯಕ್ರಮಗಳಲ್ಲಿ ಅವರ ಭಾಗವಹಿಸುವಿಕೆ ಹೆಚ್ಚಾಯಿತು. ಪುಣೆಯಲ್ಲಿ ಲೋಕಮಾನ್ಯ ತಿಲಕ್ ಹಾಗೂ ಗೋಖಲೆಯವರ ಜೊತೆಗಿನ ಭೇಟಿ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಹುಟ್ಟಿಗೆ ಕಾರಣವೆನ್ನಬಹುದು. ಮದ್ರಾಸ್‌ನಲ್ಲಿನ ಅವರ ಭಾಷಣ ಸಾವಿರಾರು ಜನರ ಮೇಲೆ ಪ್ರಭಾವ ಬೀರಿತು. ಗಾಂಧೀಜಿ ಅವರು ತಮ್ಮ ಕಲ್ಕತ್ತಾ ಭೇಟಿಯಲ್ಲಿ ಅನೇಕ ತೊಂದರೆಗಳನ್ನು ಎದುರಿಸ ಬೇಕಾಯಿತು. ಆದರೂ ಎದೆಗುಂದದೆ ಮುನ್ನಡೆದರು. ಅವರ ಸತ್ಯಸಂಧತೆ ಹಾಗೂ ಅಹಿಂಸಾತ್ಮಕ ಮನೋವೃತ್ತಿ ಅವರ ವ್ಯಕ್ತಿತ್ವದ ಜೀವಾಳ. ಮತ್ತೆ ದಕ್ಷಿಣ ಆಫ್ರಿಕಾದಿಂದ ಬಂದ ಕರೆಗೆ ಓಗೊಟ್ಟು ಈ ಬಾರಿ ತಮ್ಮ ಪತ್ನಿ ಹಾಗೂ ಮಕ್ಕಳ ಜೊತೆ ಅಲ್ಲಿಗೆ ಪ್ರಯಾಣ. ಅಲ್ಲಿ ಕಾಲಿಡುತ್ತಿದ್ದಂತೆ ಬಿಳಿ ಜನರು ಅವರ ಮೇಲೆ ಹಲ್ಲೆ ಮಾಡಿದರು. ನಂತರ ಪೊಲೀಸ್ ಸಹಾಯದಿಂದ ಅವರ ಬಿಡುಗಡೆ. – ಇದೇ ಸಂದರ್ಭದಲ್ಲಿ ಗಾಂಧೀಜಿ ಅವರಿಂದ ಸತ್ಯಾಗ್ರಹ ಚಳುವಳಿಯ ಆರಂಭ. ಗಾಂಧೀಜಿ ತಮ್ಮ ಜೊತೆಗೆ ಇದ್ದ ಸತ್ಯಾಗ್ರಹಿಗಳ ಮಕ್ಕಳಿಗಾಗಿ ಒಂದು ಶಾಲೆಯನ್ನೇ ಪ್ರಾರಂಭಿಸಿದರು.

ಭಾರತಕ್ಕೆ ಹಿಂದಿರುಗಿದ ಕೆಲದಿನಗಳಲ್ಲೇ ಕಾಂಗ್ರೆಸ್ ಅಧಿವೇಶನ ನಡೆಯಲಿತ್ತು. ಅಲ್ಲಿ ಗಾಂಧೀಜಿ ಕಸ ಎಸೆಯುವವರಾಗಿ, ಕ್ಲರ್ಕ್ ಆಗಿ, ಬೇರರ್ ಆಗಿ ಸಂತೋಷದಿಂದ ಕೆಲಸ ಮಾಡಿದರು. ಕೀಳರಿಮೆ, ಮೇಲರಿಮೆ ಅವರಿಗೆ ಒಗ್ಗದ ಮಾತು. ಎಲ್ಲವನ್ನೂ ಒಂದೇ ರೀತಿ ಸ್ವೀಕರಿಸುವ ದೊಡ್ಡ ವ್ಯಕ್ತಿತ್ವ ಅವರದು. ಹೀಗೆ ತ್ಯಾಗ ಮತ್ತು ಸರಳತೆ ದಿನೇ ದಿನೇ ಅವರ ಜೀವನದ ಭಾಗಗಳಾಗುತ್ತ ಹೋದವು.

ಗಾಂಧೀಜಿಯವರು ೧೯೦೪ರ ಹೊತ್ತಿಗೆ 'Indian Opinion' ಎಂಬ ತಮ್ಮ ಪತ್ರಿಕೆಯ ಮೂಲಕ ಸತ್ಯಾಗ್ರಹವೆಂಬುದು ಒಂದು ಪ್ರಬಲವಾದ ಅಸ್ತ್ರವೆಂದು ಓದುಗರಲ್ಲಿ ತಿಳಿವು ಮೂಡಿಸಿದರು. ಅಷ್ಟರಲ್ಲಿ ದಕ್ಷಿಣ ಆಫ್ರಿಕಾದಲ್ಲಿ ವರ್ಣ ಭೇದ ಎಂಬ ಭೂತ ಬೆಳೆದು ನಿಂತಿತ್ತು. ಅಲ್ಲಿಯ ಕಪ್ಪು ಜನ ಗಾಂಧಿಯವರನ್ನು ತಮ್ಮ ಸಹೋದರ ಎಂದೇ ಭಾವಿಸಿದ್ದರು. ಈ ಸಂದರ್ಭದಲ್ಲಿ 'ಅನ್‌ಟು ದಿಸ್ ಲಾಸ್ಟ್' ಎಂಬ ಪುಸ್ತಕ ಅವರ ಜೀವನದ ಗತಿಯನ್ನೇ ಬದಲಿಸಿತು. ನಮ್ಮ ಯುವ ಜನಾಂಗ ಓದಲೇಬೇಕಾದ ಪುಸ್ತಕವಿದು. ಅಂತಹ ವ್ಯಕ್ತಿ ಮೇಲೆ ಅಷ್ಟೊಂದು ಪ್ರಭಾವ ಬೀರಿದ ಪುಸ್ತಕ ನಮ್ಮ ಮೇಲೆ ಸ್ವಲ್ಪವಾದರೂ ಪ್ರಭಾವ ಬೀರುತ್ತದೆ ಎಂಬ ನಂಬಿಕೆ ನನ್ನಲ್ಲಿದೆ.

ನಾಟಾಲ್‌ನ ಜುಲು ಎಂಬಲ್ಲಿ ಕ್ರಾಂತಿಯಾಯಿತು. ಆಗ ಗಾಂಧೀಜಿ ತಮ್ಮ ಸ್ವಯಂ ಸೇವಕರ ತಂಡದೊಂದಿಗೆ ಅಲ್ಲಿಗೆ ಧಾವಿಸಿ ಗಾಯಾಳುಗಳ ಸೇವೆ ಮಾಡಿದರು. ಅದನ್ನು ದೇವರ ಕೆಲಸವೆಂದೇ ನಂಬಿ ದುಡಿದರು. ಜುಲುವಿನ ಮಾರಣಹೋಮ ಗಾಂಧೀಜಿಯವರಿಗೆ ಬಹಳ ನೋವನ್ನುಂಟುಮಾಡಿತು. ಇದೇ ನೋವು ಅವರಿಗೆ ಸತ್ಯಾಗ್ರಹವನ್ನು ಹುಟ್ಟುಹಾಕುವಂತೆ ಪ್ರೇರೇಪಿಸಿತು. ಅವರು ಅದನ್ನು ಪತ್ರಿಕೆಗಳ ಮೂಲಕ ಭಾರತದಲ್ಲಿಯೂ ಪ್ರಚುರಗೊಳಿಸಿದರು.

ಆಧ್ಯಾತ್ಮಿಕವಾಗಿ ಹಾಗೂ ಸಾಹಿತ್ಯಕವಾಗಿ ಮಕ್ಕಳನ್ನು ಶಿಕ್ಷಿತರನ್ನಾಗಿ ಮಾಡುತ್ತ ಹೋದ ಹಾಗೆ ಅವರು ಅಧ್ಯಾತ್ಮದ ಬಗ್ಗೆ ಹೆಚ್ಚು ಒಲವು ತೋರಿಸತೊಡಗಿದರು. ಅವರ ಮಕ್ಕಳನ್ನು ಆ ಅಶಿಕ್ಷಿತ ಮಕ್ಕಳ ಜೊತೆ ಓದಿಸುವುದನ್ನು ಸ್ನೇಹಿತರೊಬ್ಬರು ಆಕ್ಷೇಪಿಸಿದಾಗ ಅವರು ನೀಡಿದ ಉತ್ತರ ಹೀಗಿತ್ತು: ''ನಾನು ಹಾಗೆ ಭೇದ ಭಾವ ಮಾಡಲು ಸಾಧ್ಯವಿಲ್ಲ. ಇದರಿಂದ ಅವರಲ್ಲಿ ಅಹಂಭಾವ ಬೆಳೆಯಬಹುದು. ಕೆಟ್ಟದ್ದನ್ನು ಅವರು ಕಲಿಯುವುದಕ್ಕಿಂತ ಆ ಮಕ್ಕಳು ಉಳಿದವರಿಗೆ ಒಳ್ಳೆಯದನ್ನು ಕಲಿಸಿದರೆ ಅದಕ್ಕೇನನ್ನುತ್ತೀರಿ ?'' ಅವರದು ಎಂತಹ ನಿಷ್ಕಪಟ ಮನೋವೃತ್ತಿ ಅಲ್ಲವೇ ?

ಅನಂತರ ೧೯೧೪ರಲ್ಲಿ ಗೋಖಲೆಯವರ ಕರೆಯ ಮೇರೆಗೆ ಗಾಂಧೀಜಿ ಇಂಗ್ಲೆಂಡ್‌ಗೆ ಹೋದಾಗ ಅಲ್ಲಿ ಮೊದಲನೆಯ ಮಹಾಯುದ್ಧ ಶುರುವಾಗಿತ್ತು. ಇಲ್ಲೂ ಕೂಡ ಗಾಂಧೀಜಿ ಒಂದು ಸ್ವಯಂ ಸೇವಾ ತಂಡವನ್ನು ರಚಿಸಿದರು. ಇಲ್ಲಿ ಅವರಿಗೆ ಸರೋಜಿನಿ ನಾಯ್ಡುರವರ ಭೇಟಿಯಾಯಿತು. ಇಲ್ಲಿ ಅಹಿಂಸೆಯ ಪಾತ್ರವನ್ನು ಗಾಂಧೀಜಿ ಸ್ಮರಿಸಿದ್ದಾರೆ. ಮನುಷ್ಯರು ತಾವು ಬದುಕಲು ಎಷ್ಟು ಜನರ ಹಿಂಸೆ ಮಾಡುತ್ತಾರೆ, ಜನ ಇರಲಿ ಎಲ್ಲಾ ರೀತಿಯ ಜೀವಜಂತುಗಳಿಗೂ ಹಿಂಸೆ ನೀಡುತ್ತಾರೆ. ಇಂತಹ ಮಾನವ ಅಹಿಂಸೆಯನ್ನು ಪೂರ್ಣವಾಗಿ ಅಳವಡಿಸಿಕೊಳ್ಳಲು ಸಾಧ್ಯವಿಲ್ಲ. ಆದರೂ ಆದಷ್ಟು ಮಟ್ಟಿಗೆ ಯುದ್ಧ ಮುಂತಾದ ಹಿಂಸಾತ್ಮಕ ಚಟುವಟಿಕೆಗಳನ್ನು ಬಿಟ್ಟರೆ ಜಗತ್ತಿನಲ್ಲಿ ಎಷ್ಟು ಶಾಂತಿ ನೆಲೆಸುವಂತೆ ಮಾಡಬಹುದು ಎಂಬುದು ಅವರ ಆಶಯವಾಗಿತ್ತು. ಅದೇ ಮಾರ್ಗದಲ್ಲಿ ನಡೆದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟು ಇಡೀ ವಿಶ್ವಕ್ಕೇ ಮಾದರಿ ದೇಶ ಎನಿಸಿದ ಮಹೋನ್ನತ ವ್ಯಕ್ತಿ ಗಾಂಧೀಜಿ.

೧೯೧೯ರಲ್ಲಿ ದೆಹಲಿಯಲ್ಲಿ ಗಾಂಧೀಜಿ ನೇತೃತ್ವದಲ್ಲಿ ಹರತಾಳ ಪ್ರಾರಂಭವಾಯಿತು. ದೆಹಲಿಯಲ್ಲಿ ಮೊದಲ ಬಾರಿಗೆ ಜರುಗಿದ ಹರತಾಳ. ಪರಿಣಾಮವಾಗಿ ಬ್ರಿಟಿಷ್ ಸರ್ಕಾರಕ್ಕೆ ದಿಗ್ಭ್ರಮೆ ಉಂಟಾಯಿತು. ಇಡೀ ದೇಶದಲ್ಲೆಲ್ಲಾ ಸತ್ಯಾಗ್ರಹವನ್ನು ಪ್ರಾರಂಭಿಸುವ ನಿಟ್ಟಿನಲ್ಲಿ ಗಾಂಧೀಜಿ ಅವಿರತವಾಗಿ ದುಡಿದರು. ಎಲ್ಲಾ ಕಡೆ ಸಭೆಗಳನ್ನು ನಡೆಸಲಾಯಿತು. ಆದರೂ ನಾಗರೀಕ ಅಸಹಕಾರ ಚಳುವಳಿಗಾಗಿ ಗಾಂಧೀಜಿಯವರು ರಚಿಸಲು ಹೊರಟ ಸೈನಿಕರ ತಂಡದ ಸಂಖ್ಯೆ ದಿನೇ ದಿನೇ ಕ್ಷೀಣಿಸತೊಡಗಿತು. ಆದ್ದರಿಂದ ಭಾರತದಲ್ಲಿ ಹಿಂಸಾತ್ಮಕ ಚಟುವಟಿಕೆಗಳು ಹೆಚ್ಚಾಗತೊಡಗಿದವು. ಆಗ ಗಾಂಧೀಜಿ ತಮ್ಮ ಮನಸ್ಸಿನ ಭಾವನೆಗಳು ಹಾಗೂ ಸತ್ಯಾಗ್ರಹದ ವಿಚಾರಗಳನ್ನು ಜನರ ಮನಸ್ಸಿನಲ್ಲಿ ಅಚ್ಚು ಇಳಿಸಲು

೧೪ನೇ ಪುಟಕ್ಕೆ

# ಅಕ್ಟೋಬರ್ ಕ್ರಾಂತಿಯ ಹಂಬಲ, ನೆನಪುಗಳು

ರಷ್ಯಾದ ಇತ್ತೀಚಿನ ಸಾಮಾನ್ಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ೧೯೯೦ರಲ್ಲಿ ಅಲ್ಲಿಯ ಕಮ್ಯುನಿಸ್ಟ್ ಸರ್ಕಾರ ಕುಸಿದು ಬಿದ್ದಿದ್ದಕ್ಕೆ ಕಾರಣಗಳೇನಿರಬಹುದೆಂದು ಮತ್ತೊಮ್ಮೆ ವಿಶ್ಲೇಷಿಸುವ ಸಂದರ್ಭ ಈಗ ಬಂದಿದೆ.

ಪಾಶ್ಚಿಮಾತ್ಯ ದೇಶಗಳು ಶಕುನ ನುಡಿದಂತೆ ಆ ದೇಶವೇನೂ ಛಿದ್ರಛಿದ್ರವಾಗಿ ಹರಿದುಹೋಗಿಲ್ಲ. ಅವರ ಬಾಹ್ಯಾಕಾಶ ಕ್ಷೇತ್ರ, ಅಣುಶಕ್ತಿ ಕ್ಷೇತ್ರ ಮುಂತಾದವು ಕುಸಿದುಬಿದ್ದಿಲ್ಲ. ಹಾಗಾಗಿದೆಯೆಂದು ಬಣ್ಣಿಸುವ ಎಲ್ಲಾ ವರದಿಗಳೂ ಆಧಾರರಹಿತ. ಉತ್ಪ್ರೇಕ್ಷೆಯಿಂದ ಕೂಡಿದವು. ಅಂತರರಾಷ್ಟ್ರೀಯವಾಗಿ ಅಲ್ಲಿಯ ಜನರು ತಮ್ಮ ಧ್ವನಿಯೆತ್ತುವ ಸಾಮರ್ಥ್ಯವನ್ನು ಹೊಂದಿದ್ದಾರೆಂಬುದು ಪಶ್ಚಿಮದ ಭಂಟನಂತಿದ್ದ ಬೋರಿಸ್ ಎಲ್‌ತ್ಸಿನ್ ನಿರ್ಗಮಿಸಿದ ನಂತರ ಮತ್ತೊಮ್ಮೆ ಸ್ಪಷ್ಟವಾಗುತ್ತಿದೆ.

ಈಗಿನ ರಷ್ಯ ತ್ಸಾರ್ ಕಾಲದ ನಂತರದಲ್ಲಿದ್ದ ರಷ್ಯ ಎಂದು ಹೇಳಬಹುದೇನೋ. ಇವರೊಡನೆ ಸೋವಿಯೆತ್ ಒಕ್ಕೂಟದಲ್ಲಿ ಸೇರಿದ್ದ ಈಗಿನ ರಷ್ಯದ ಎಲ್ಲೆಯಲ್ಲಿನ ಹೊಸ ರಾಷ್ಟ್ರಗಳಲ್ಲಿ ಬೇರೆ ಬೇರೆ ಬುಡಕಟ್ಟಿನ ಜನರಿದ್ದಾರೆ, ಧರ್ಮದವರಿದ್ದಾರೆ. ಈ ರಾಷ್ಟ್ರಗಳು ರಷ್ಯದಷ್ಟು ಆರ್ಥಿಕವಾಗಿ ಮುಂದುವರಿಯಲಿಲ್ಲ. ಅಂದರೆ, ಸೋವಿಯೆತ್ ರಷ್ಯದ ಕಾಲದಲ್ಲಿ ಪ್ರಾದೇಶಿಕವಾಗಿ ಆರ್ಥಿಕ ವಿಕಾಸ ತೀವ್ರ ಅಸಮತೋಲನ ಸ್ವರೂಪ ಪಡೆದು, ಅದರ ಐಕ್ಯ ಸ್ವರೂಪಕ್ಕೆ ತೀರ ಧಕ್ಕೆ ಉಂಟುಮಾಡಿತು. ಈ ಹಿಂದುಳಿದ ಪ್ರದೇಶಗಳು ಪ್ರಾಕೃತಿಕವಾಗಿ ಸಂಪದ್ಭರಿತವಾಗಿದ್ದವು. ಒಂದು ರೀತಿಯಲ್ಲಿ ರಷ್ಯ ಈ ಪ್ರದೇಶಗಳ ಸಂಪನ್ಮೂಲಗಳಿಂದ ತನ್ನ ಪ್ರದೇಶವನ್ನು ಅಭಿವೃದ್ಧಿ ಪಡಿಸಿಕೊಂಡಿತೆಂಬುದು ಸ್ವಲ್ಪಮಟ್ಟಿಗೆ ನಿಜ. ಆದರೆ ಅದೇ ಕಾಲದಲ್ಲಿ ಈ ಹಿಂದುಳಿದ ಪ್ರದೇಶಗಳಲ್ಲಿ ಸಾಮಾಜಿಕ-ರಾಜಕೀಯ ಪ್ರಜ್ಞೆ ತುಂಬ ಬೆಳೆಯಿತು. ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ದೊರೆತ ಶಿಕ್ಷಣ, ಅದರಿಂದ ಹೊಮ್ಮಿದ ವೈಜ್ಞಾನಿಕ ಪ್ರಜ್ಞೆ ಅಲ್ಲಿಯ ಬೆಳವಣಿಗೆಗೆ ಕಾರಣವೆನ್ನಬಹುದು.

> **ಭಾರತ ಮತ್ತು ರಷ್ಯಾಗಳೆರಡರಲ್ಲೂ ಗಮನಿಸಬೇಕಾದ ಇಂದಿನ ಒಂದು ಮಹತ್ವದ ಅಂಶವಿದೆ. ಅದೇನೆಂದರೆ, ಆರ್ಥಿಕ ಉದಾರೀಕರಣದಲ್ಲಿ ವಿದೇಶಿ ಹಸ್ತಕ್ಷೇಪದ ಆತಂಕಕಾರೀ ಸೂಚನೆಗಳು ಸಾಕಷ್ಟು ತಲೆ ಎತ್ತಿವೆ. ರಾಷ್ಟ್ರಪ್ರೇಮಿಗಳೂ ದೂರದರ್ಶಿಗಳೂ ಆದ ಧೀಮಂತ ನಾಯಕರುಗಳ ಕೊರತೆ ನಿಜಕ್ಕೂ ಆತಂಕಕ್ಕೆ ಕಾರಣವಾಗಿದೆ. ಭಾರತದಲ್ಲಿ ಇದನ್ನು ತಿಳಿದು ಎಚ್ಚೆತ್ತುಕೊಳ್ಳಲು ಇನ್ನೂ ಸಮಯ ಮೀರಿಲ್ಲ. ಪ್ರಾದೇಶಿಕ ವಿಷಯಗಳಲ್ಲಿ ವಿದೇಶೀ ಹಸ್ತಕ್ಷೇಪದ ಸೂಚನೆಗಳಿಗೇನೂ ಕೊರತೆಯಿಲ್ಲ. ಅದು ಚಿಗುರೊಡೆಯದಂತೆ ನೋಡಿಕೊಳ್ಳಬೇಕಾದ್ದು ಪ್ರಜಾಪ್ರಭುತ್ವ ವಾದಿಗಳೆಲ್ಲರ ಜವಾಬ್ದಾರಿಯಾಗಿದೆ.**

ರಷ್ಯದ ಸಂವಿಧಾನ ತನ್ನ ಪ್ರದೇಶಗಳಿಗೆ ಸ್ವಾಯತ್ತತೆಯು ಬೇಕೆಂದರೆ ಸ್ವಯಂ ನಿರ್ಧಾರದ ಹಕ್ಕನ್ನು ಮಾನ್ಯ ಮಾಡಬೇಕೆಂದು ಆರಂಭದಿಂದಲೇ ಸ್ಪಷ್ಟಪಡಿಸಿತ್ತು. ಆದರೆ ಆಳುವ ಪಕ್ಷದ ಸಂಕುಚಿತ ವರ್ತನೆಯಿಂದಾಗಿ ರಾಷ್ಟ್ರದ ಐಕ್ಯತೆಗೆ ಆಗುತ್ತಿದ್ದ ಆಘಾತವನ್ನು ಸಕಾಲದಲ್ಲಿ ಗಮನಿಸಲಿಲ್ಲ ಹಾಗೂ ಕಾಲಕ್ರಮದಲ್ಲಿ ಅದರ ಎಲ್ಲ ಹಂತದ ಮುಂದಾಳುಗಳು ತೀರಾ ಲಂಚಕೋರತನ, ಸ್ವಜನ ಪಕ್ಷಪಾತ, ಸರ್ವಾಧಿಕಾರ ಮುಂತಾದ ಅತಿರೇಕಗಳ ಕೆಟ್ಟ ಚಾಳಿಗೆ ಬಲಿಯಾದರು. ಆ ಪಕ್ಷದ ಆಂತರಿಕ ಪ್ರಜಾಪ್ರಭುತ್ವ ನೀತಿ ಹಾಳಾಗಿತ್ತು. ಇಂಥ ಪರಿಸ್ಥಿತಿಯನ್ನು ರಾಷ್ಟ್ರದ ಒಳ ಶತ್ರುಗಳು, ಅಂದರೆ ಲಂಚಗುಳಿತನದಿಂದ ಬಲಿತ ಶ್ರೀಮಂತ ವರ್ಗ, ಪಶ್ಚಿಮದ ಪಿತೂರಿಕೋರರೊಡನೆ ಸಹಕರಿಸಿದಾಗ ಸೋವಿಯೆತ್ ರಾಷ್ಟ್ರ ತನ್ನ ಒಕ್ಕೂಟದ ಸ್ವರೂಪವನ್ನು ಕಳೆದುಕೊಂಡು ಕುಸಿದುಬಿದ್ದದ್ದು ಆಶ್ಚರ್ಯವೇನಲ್ಲ. ಅಷ್ಟೇನೂ ಹೆಚ್ಚು ಹಿಂಸಾಚಾರವಿಲ್ಲದೆ ಹೊಸ ರಾಷ್ಟ್ರಗಳಿಗೆ ಜನ್ಮವಿತ್ತು ಹಳೆಯ ರಷ್ಯ ಉಳಿದುಕೊಂಡಿದ್ದು ಒಂದು ಸಹಜ ಚಾರಿತ್ರಿಕ ಬೆಳವಣಿಗೆ ಎಂದೆನಿಸುತ್ತದೆ. ಈಗ ಉಂಟಾಗಿರುವ ಹೊಸರಾಷ್ಟ್ರಗಳು ಹಾಗೂ ರಷ್ಯ ತಾವಾಗಿಯೇ ಬೇರ್ಪಡಲು ಒಮ್ಮತದಿಂದ ಒಪ್ಪಿಕೊಂಡಂತೆ ಆಗಿರುವ ಈ ಬೆಳವಣಿಗೆ ಎಲ್‌ತ್ಸಿನ್ನನ ವೈಯಕ್ತಿಕ ಸಾಧನೆಯಲ್ಲ ಅಥವಾ ಕಮ್ಯುನಿಸಂ ಸಿದ್ಧಾಂತದ ವೈಫಲ್ಯವೂ ಅಲ್ಲ. ಆದರೆ ಚರಿತ್ರಾರ್ಹವಾದ ಸವಾಲನ್ನು ಕಮ್ಯುನಿಸ್ಟ್ ಪಕ್ಷ ಎದುರಿಸದೇ ಹೋದದ್ದು ಒಂದು ದುರಂತವಷ್ಟೆ.

ಹತ್ತೊಂಬತ್ತನೇ ಶತಮಾನದಲ್ಲಿ ಅಂದಿನ ರಷ್ಯ ಮತ್ತು ಅದರ ಸುತ್ತಲಿನ ಅನೇಕ ರಾಜ್ಯಗಳ ಪರಿಸ್ಥಿತಿಯೊಡನೆ ಇಂದಿನ ಪರಿಸ್ಥಿತಿಯನ್ನು ಹೋಲಿಸಿ ನೋಡಿದರೆ ಅಕ್ಟೋಬರ್ ಕ್ರಾಂತಿಯ ಮತ್ತು ಎಂಬತ್ತು ವರ್ಷದ ಕಮ್ಯುನಿಸ್ಟ್ ಆಡಳಿತದಿಂದ ಆಗಿರುವ ಅದ್ಭುತ ಬೆಳವಣಿಗೆಗಳು ಎಲ್ಲರಿಗೂ ತಿಳಿದ ವಿಷಯವೇ. ಈ ಪ್ರದೇಶ ಪಶ್ಚಿಮದ ವಸಾಹತುಶಾಹಿಗಳ ಬಲವಾದ ಹೊಡೆತ ತಪ್ಪಿಸಿಕೊಂಡವು. ರಾಜಕೀಯವಾಗಿ ಹಾಗೂ ಸಾಮಾಜಿಕವಾಗಿ ಬಹಳ ಮುಂದುವರಿದವು. ಈಗ ಸಂಪೂರ್ಣ ಆತ್ಮವಿಶ್ವಾಸದಿಂದ ಅಭಿವೃದ್ಧಿಯತ್ತ ಸಾಗಿವೆ.

ಈ ಹೊಸ ರಾಜ್ಯಗಳು ಎದುರಿಸಬೇಕಾದ ಸಮಸ್ಯೆಗಳಲ್ಲಿ ಬಹುಮುಖ್ಯವಾದವು ಮೂಲಭೂತ ಮತಾಂಧ ಮತ್ತು ಜನಾಂಗೀಯ ಶಕ್ತಿಗಳು ಹುಟ್ಟಿಹಾಕುವಂತಹವು. ಮತ್ತೊಮ್ಮೆ ಪಶ್ಚಿಮದ ವಸಾಹತುಶಾಹಿಗಳು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕ್‌ಗಳ ಮೂಲಕ ಇವರ ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಸ್ಥಾಪಿಸುವುದು ಕಂಡುಬರುತ್ತಿದೆ.

ಸೋವಿಯೆತ್ ರಷ್ಯಾದ ಐಕ್ಯತೆಯನ್ನು ಉಳಿಸಿಕೊಳ್ಳಲಾಗದ ಅನುಭವ ಚೀನಾಕ್ಕೂ, ಭಾರತಕ್ಕೂ ಪ್ರಸ್ತುತವಾದ



ಬಹುಮುಖ್ಯ ಅಂಶವಾಗಬಲ್ಲದು. ಪ್ರಾದೇಶಿಕ ಅಸಮತೋಲನ ಯಾವಾಗಲೂ ಐಕ್ಯತೆಗೆ ಬಲು ದೊಡ್ಡ ಶತ್ರು. ನಮ್ಮ ಪ್ರಾಬಲ್ಯವನ್ನು ಮುರಿಯಲು ಸತತ ಪ್ರಯತ್ನ ಮಾಡುವ ಪಶ್ಚಿಮದವರಿಗೆ ಈ ಪರಿಸ್ಥಿತಿ ಸುಲಭ ಅವಕಾಶ ಕಲ್ಪಿಸುತ್ತದೆ. ಇದರೊಂದಿಗೆ ರಾಜಕೀಯ ಭ್ರಷ್ಟಾಚಾರ ಸೇರಿದರೆ ನಮ್ಮ ಇತಿಶ್ರೀಯನ್ನು ಹಾಡಿಬಿಡುತ್ತಾರೆ. ಅವರು ಈಗಾಗಲೇ ತಮ್ಮ ರಹಸ್ಯ ದಾಖಲೆಗಳನ್ನು ಮೂವತ್ತು ವರ್ಷಗಳಿಗೊಮ್ಮೆ ಬಹಿರಂಗಗೊಳಿಸಲು ಅವಕಾಶವಿದೆ. ಎಂದರೆ, ಅಲ್ಲಿಯ ತಮ್ಮ ಪ್ರತಿನಿಧಿ ಸರ್ಕಾರಗಳು ನಡೆಸಿರುವ ಗುಟ್ಟಿನ ವ್ಯವಹಾರಗಳು ಹಾಗೂ ಪಿತೂರಿಗಳ ಬಗ್ಗೆ ತಿಳಿಯಲು ಅಷ್ಟು ವರ್ಷಗಳು ಕಾಯಬೇಕಾಗುತ್ತದೆ. ಹಿಂದೆ ಷಡ್ಯಂತ್ರ ರಚಿಸಿದ್ದವರು ಈಗ ಸಾಧುಗಳಾಗಿದ್ದಾರೆಂದು ಬಗೆಯುವುದು ಭ್ರಮೆ.

ಸೋವಿಯೆತ್ ರಷ್ಯಾದಲ್ಲಿ ಆಗಿದ್ದಾದರೂ ಏನು ? ಅಮೆರಿಕ ಮತ್ತಿತರ ಪಶ್ಚಿಮ ರಾಷ್ಟ್ರಗಳವರು ತಕ್ಕ ಸನ್ನಿವೇಶವಿದ್ದರೆ ಮಾತ್ರ ಆಂತರಿಕ ಹಸ್ತಕ್ಷೇಪ ಮಾಡಲು, ಪಿತೂರಿ ನಡೆಸಲು ಸಾಧ್ಯ. ಈ ಕೆಲಸ ನಿರ್ವಹಿಸುವವರು ತೆರೆಮರೆಯಲ್ಲಿ ಒಳಗೇ ಅಡಗಿಕೂಡುವ ಶತ್ರುಗಳು. ಒಮ್ಮೊಮ್ಮೆ ಆಳುವವರ ಪರದೇಶಿ ಹೆಂಡಿರೂ ಈ ಕೆಲಸ ಮಾಡಬಹುದು. ಆದರೆ ಇದೆಲ್ಲದಕ್ಕಿಂತ ಮುಖ್ಯವಾದುದು ಆಳುವ ವರ್ಗದ ಆಂತರಿಕ ಮಟ್ಟದಲ್ಲಿನ ದೌರ್ಬಲ್ಯ ಹಾಗೂ ವೈಫಲ್ಯಗಳು. ಅದೇ ಮೂಲ ಕಾರಣವಾಗುತ್ತದೆ. ಸೋವಿಯೆತ್ ರಷ್ಯದ ಪತನದೊಡನೆ ಕಮ್ಯುನಿಸಂ ಪತನದ ಶಕುನವನ್ನೂ ನುಡಿದು ಎಲ್ಲೆಡೆ ಹಬ್ಬವನ್ನು ಸಮಾಜವಾದಿ ವಿರೋಧಿ ಶಕ್ತಿಗಳು ಆಚರಿಸಿದ್ದು ಈಗ ಹಳೆಯ ಮಾತು. ಈ ಬಗ್ಗೆ ವಿಪುಲವಾದ ಚರ್ಚೆಯ ಅಗತ್ಯವಿದೆ. ಈ ನಿಟ್ಟಿನಲ್ಲಿ ಒಂದೆರಡು ಬೆಳವಣಿಗೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಪಶ್ಚಿಮದವರು ನುಡಿದಂತೆ ಈ ದೇಶದಲ್ಲಿ ಹಾಗೂ ಪೂರ್ವ ಯೂರೋಪಿನಲ್ಲಿ ಅಂತೆಯೇ ಸೋವಿಯೆತ್ ಪತನದೊಡನೆ ಹುಟ್ಟಿಕೊಂಡ ಅದರ ಗಡಿಯಲ್ಲಿನ ಮಧ್ಯ ಏಷ್ಯದ ರಾಷ್ಟ್ರಗಳಲ್ಲಿ ನಡೆದ ಪ್ರಜಾಪ್ರಭುತ್ವಾತ್ಮಕ ಚಳುವಳಿಗಳಲ್ಲಿ, ಚುನಾವಣೆಗಳಲ್ಲಿ, ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಅಲ್ಲಿಯ ಹಳೆಯ ಕಮ್ಯುನಿಸ್ಟ್ ನಾಯಕತ್ವವೇನೂ ಹೇಳ ಹೆಸರಿಲ್ಲದೆ ಕೊಚ್ಚಿಹೋಗಿಲ್ಲ, ಅದೇ ಹೆಸರಿನಲ್ಲೋ, ಬೇರೆ ಹೆಸರಿನಲ್ಲೋ ಹಿಂದಿನ ಪ್ರಗತಿಪರ ಶಕ್ತಿಗಳು ಅಲ್ಲಲ್ಲೇ ಅಧಿಕಾರಕ್ಕೆ ಪುನಃ ಆರಿಸಿ ಬಂದಿದ್ದಾರೆ ಅಥವಾ ವಿರೋಧ ಪಕ್ಷವಾಗಿ ಸಕ್ರಿಯರಾಗಿದ್ದಾರೆ. ಪೋಲೆಂಡ್, ಯುಗೋಸ್ಲಾವಿಯಾ, ಬೈಲೋರಷ್ಯ, ಕಿರ್‌ಗಿಝ್, ಕಜಾಕಸ್ತಾನ ಮುಂತಾದ ಕಡೆಯಲ್ಲದೆ, ರಷ್ಯದಲ್ಲೇ ಕಮ್ಯುನಿಸ್ಟ್ ಪಕ್ಷ ವಿರೋಧ ಪಕ್ಷದಲ್ಲಿದ್ದರೂ ಬಲಾಢ್ಯ ಪಕ್ಷವಾಗಿದೆ. ಆಳುವ ಪಕ್ಷದಲ್ಲೂ ಹಿಂದಿನವರು ಬಹು ಸಂಖ್ಯೆಯಲ್ಲಿ ಉಳಿದಿದ್ದಾರೆ.

ಅಲ್ಲಿ ಆದ ಘಟನೆಗೆ ಎರಡು ಕಾರಣಗಳನ್ನು ಗುರುತಿಸಬಹುದು; ಅಂದಿನ ರಷ್ಯ ಗಡಿಯಲ್ಲಿನ ಹಿಂದುಳಿದ ಬುಡಕಟ್ಟಿನ, ವಿವಿಧ ಮತೀಯರ, ಅದರಲ್ಲೂ ಮುಸ್ಲಿಮರ ಪ್ರದೇಶಗಳು ತಾವಾಗಿಯೇ ಕ್ರಾಂತಿಯ ನಂತರ ರಚನೆಯಾದ ಸೋವಿಯೆತ್ ಒಕ್ಕೂಟದಲ್ಲಿ ಸೇರಿಕೊಂಡರು. ಅಂದಿನ ಸಂವಿಧಾನದಂತೆ ಒಕ್ಕೂಟದೊಳಗಿನ ರಾಷ್ಟ್ರಗಳಿಗೆ ಸ್ವಯಂ ನಿರ್ಧಾರದ ಹಕ್ಕನ್ನು ಲೆನಿನ್ನರು ಘೋಷಿಸಿದ್ದರು. ಆದರೂ ಅವರೆಲ್ಲಾ ಒಕ್ಕೂಟಕ್ಕೆ ಸೇರಿದ್ದಕ್ಕೆ ಮುಖ್ಯ ಕಾರಣವೆಂದರೆ, ತಾವೂ ಆರ್ಥಿಕವಾಗಿ ಸಾಮಾಜಿಕವಾಗಿ ಒಕ್ಕೂಟದಲ್ಲಿ ಭೇದ ಭಾವವಿಲ್ಲದೆ ಪ್ರಗತಿ ಹೊಂದಬಹುದು ಎಂಬ ಆಶಯದಿಂದ. ಈ ಮಹದಾಶಯ ಬಹುಮಟ್ಟಿಗೆ ನೆರವೇರದಿದ್ದುದು ಈ ರಾಷ್ಟ್ರಗಳು ಒಕ್ಕೂಟದಿಂದ ಹೊರಬರಲು ಕಾರಣವೆನ್ನಬಹುದು.

ಭಾರತ ಮತ್ತು ರಷ್ಯಾಗಳೆರಡರಲ್ಲೂ ಗಮನಿಸಬೇಕಾದ ಇಂದಿನ ಒಂದು ಮಹತ್ವದ ಅಂಶವಿದೆ. ಅದೇನೆಂದರೆ, ಆರ್ಥಿಕ ಉದಾರೀಕರಣದಲ್ಲಿ ವಿದೇಶಿ ಹಸ್ತಕ್ಷೇಪದ ಆತಂಕಕಾರೀ ಸೂಚನೆಗಳು ಸಾಕಷ್ಟು ತಲೆ ಎತ್ತಿವೆ. ರಾಷ್ಟ್ರಪ್ರೇಮಿಗಳೂ ದೂರದರ್ಶಿಗಳೂ ಆದ ಧೀಮಂತ ನಾಯಕರುಗಳ ಕೊರತೆ ನಿಜಕ್ಕೂ ಆತಂಕಕ್ಕೆ ಕಾರಣವಾಗಿದೆ. ಭಾರತದಲ್ಲಿ ಇದನ್ನು ತಿಳಿದು ಎಚ್ಚೆತ್ತುಕೊಳ್ಳಲು ಇನ್ನೂ ಸಮಯ ಮೀರಿಲ್ಲ. ಪ್ರಾದೇಶಿಕ ವಿಷಯಗಳಲ್ಲಿ ವಿದೇಶೀ ಹಸ್ತಕ್ಷೇಪದ ಸೂಚನೆಗಳಿಗೇನೂ ಕೊರತೆಯಿಲ್ಲ. ಅದು ಚಿಗುರೊಡೆಯದಂತೆ ನೋಡಿಕೊಳ್ಳಬೇಕಾದ್ದು ಪ್ರಜಾಪ್ರಭುತ್ವವಾದಿಗಳೆಲ್ಲರ ಜವಾಬ್ದಾರಿಯಾಗಿದೆ.


**ಕೆ. ಎಸ್. ಪಾರ್ಥಸಾರಥಿ**
ಇ-೧೦, ವೈರ್‌ಲೆಸ್ ಮಾನಿಟರಿಂಗ್ ಸ್ಟೇಷನ್ ಕಾಂಪೌಂಡ್
ಜಯನಗರ, ಬೆಂಗಳೂರು - ೫೬೦ ೦೪೧


*೮ನೇ ಪುಟದಿಂದ*

'ನವಜೀವನ' ಹಾಗೂ 'ಯಂಗ್ ಇಂಡಿಯಾ' ಪತ್ರಿಕೆಗಳು ನೆರವಾದವು. ಅವುಗಳ ಸಹಾಯದಿಂದ ಗಾಂಧೀಜಿ ಜನರಲ್ಲಿ ಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾದರು.

ಈ ಸಮಯದಲ್ಲೇ ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡ ಜರುಗಿತು. ಗಾಂಧೀಜಿ ಪಂಜಾಬ್‌ನಲ್ಲಿ ಖಾದಿ ಪ್ರಚಾರ ಕೈಗೊಂಡರು. ಪಂಜಾಬ್‌ನ ಅತಂತ್ರ ಸ್ಥಿತಿ ದಿನೇ ದಿನೇ ದಟ್ಟವಾಗತೊಡಗಿತು. ನಂತರ ದೆಹಲಿಯಲ್ಲಿ ನಡೆಯಲಿದ್ದ ಕಿಲಾಫತ್ ಸಭೆಗೆ ಗಾಂಧೀಜಿ ಹಾಜರಾದರು. ಇಲ್ಲಿ ವಿದೇಶಿ ವಸ್ತುಗಳ ಬಹಿಷ್ಕಾರದ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ನಂತರ ನಡೆದ ಅಮೃತಸರ್‌ನ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿ ತಮ್ಮ ಕಾಂಗ್ರೆಸ್ ರಾಜಕೀಯಕ್ಕೆ ಪಾದಾರ್ಪಣೆ ಮಾಡಿದರು. ನಂತರದ ಸಮಯದಲ್ಲಿ ಸ್ವರಾಜ್ಯ ಭಾವನೆ ದೇಶದ ಜನರಲ್ಲಿ ಹರಡತೊಡಗಿತು. ಜನತೆ ಒಂದಲ್ಲ ಒಂದು ರೀತಿಯಲ್ಲಿ ಸರಕಾರಕ್ಕೆ ಭೀತಿಯನ್ನು ಹುಟ್ಟಿಸಲು ಪ್ರಾರಂಭಿಸಿದರು. ಗಾಂಧೀಜಿ ಹಾಗೂ ಇನ್ನಿತರ ಧುರೀಣರು ದೇಶದ ಸ್ವಾತಂತ್ರ್ಯಕ್ಕಾಗಿ ಯೋಜನೆಗಳನ್ನು ರೂಪಿಸಲಾರಂಭಿಸಿದರು. ನಂತರ ಖಾದಿಯ ಜನನ. ಎಲ್ಲಾ ಕಡೆ ಖಾದಿ ತಯಾರಿಸುವ ಚರಕ ಬಳಕೆಗೆ ಬಂದಿತು. ಗಾಂಧೀಜಿ ಸ್ವಯಂ ಖಾದಿ ಬಟ್ಟೆಯನ್ನು ಧರಿಸಲು ಆರಂಭಿಸಿದರು. ಸ್ವದೇಶಿ ಚಳುವಳಿಯು ಹುಟ್ಟಿದ್ದು ಈ ಸಂದರ್ಭದಲ್ಲಿಯೇ.

ನಂತರ ಅಸಹಕಾರ ಚಳುವಳಿಯ ಪ್ರಾರಂಭ. [illegible] ಸ್ವಾತಂತ್ರ್ಯ ಹೋರಾಟ ತೀವ್ರತೆಯನ್ನು ಪಡೆದು ಗಾಂಧೀಜಿ ಅದರ ಕೇಂದ್ರ ಬಿಂದುವಾದರು. ನಾಗಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಹಿಂದೂ ಮುಸಲ್ಮಾನರ ಏಕತೆಗೆ [illegible] ಅಭಿಪ್ರಾಯ ಹಾಕಲಾಯಿತು. ಗಾಂಧಿಯವರ ಜೀವನ ಚರಿತ್ರೆ ನಮಗೆ ತಿಳಿಸಿಕೊಡುವ ಮುಖ್ಯ ಅಂಶವೆಂದರೆ ಸತ್ಯವನ್ನು ಕಾಣಲು ನಾವು ಪೂರ್ಣ ಪ್ರಮಾಣದಲ್ಲಿ ಅಹಿಂಸೆಯನ್ನು ಪಾಲಿಸಬೇಕು. ಸತ್ಯವೇ ದೇವರು, ಅಹಿಂಸೆಯೇ ಪರಮ ಧರ್ಮ. ಇವೆರಡು ನಮ್ಮ ಜೀವನದ ಮಹಾಮಂತ್ರಗಳಾಗಬೇಕು. ಆ ಸತ್ಯವನ್ನು ನೋಡ ಬೇಕಾದರೆ ನಾವು ಈ ಜಗತ್ತಿನ ಪ್ರತಿಯೊಂದು ಅಣು ಜೀವಿಯನ್ನು ಸಮಾನವಾಗಿ ಕಾಣಬೇಕು. ಆದರೆ ಇದಕ್ಕಾಗಿ ನಮ್ಮ ಆತ್ಮಶುದ್ಧಿ ಆಗಬೇಕು. ಆತ್ಮಶುದ್ಧಿಯಿಲ್ಲದೆ ಅಹಿಂಸೆಯನ್ನು ಪಾಲಿಸಲು ಸಾಧ್ಯವಿಲ್ಲ. ಶುದ್ಧತೆ ಎನ್ನುವುದು ಕಾಯಾ, ವಾಚಾ, ಮನಸಾ ಆದಾಗ



ತಾವು ಭ್ರಷ್ಟಾಚಾರದ ಬೆಳೆಯನ್ನು ತುಂಬಾ ಚೆನ್ನಾಗಿ ಬೆಳೀತೀರಂತೆ...ಅದಕ್ಕೆ ಯಾವ ಗೊಬ್ಬರ ಹಾಕ್ತೀರಿ ಅಂತ ಕೇಳ್ತೀರಾ ಸ್ವಾಮೀ.?

ಮಾತ್ರ ದೇವರ ಸಾಕ್ಷಾತ್ಕಾರವಾಗುತ್ತದೆ. ರಾಮನಾಮದ ಮುಂದೆ ಬೇರಾವ ಶಕ್ತಿಯೂ ಇಲ್ಲ. ಇದನ್ನೆಲ್ಲಾ ಗಾಂಧೀಜಿ ಸಾಧಿಸಿದ್ದರೂ ಕೂಡ ಗಾಂಧೀಜಿ ಹೇಳುತ್ತಾರೆ, ಸೂರ್ಯನಿಗಿಂತ ಎಷ್ಟೋ ಪಟ್ಟು ಹೆಚ್ಚು ಬೆಳಕನ್ನು ಹೊಂದಿರುವ ಸತ್ಯದ ಕಾಂತಿಯಲ್ಲಿ ಕೇವಲ ಒಂದು ಮಿನುಗನ್ನು ಮಾತ್ರ ಪಡೆಯಲು ಶಕ್ತನಾಗಿದ್ದೇನೆ ಎಂದು. ಎಂತಹ ದೊಡ್ಡ ಮಾತು ! ದೊಡ್ಡ ಮನುಷ್ಯರು ಯಾವಾಗಲೂ ತಾವು ಚಿಕ್ಕವರು ಎಂದೇ ತಿಳಿಯುತ್ತಾರೆ. ಇಂತಹ ಮಹಾನ್ ಚೇತನ ನಮ್ಮ ದೇಶದಲ್ಲಿ ಜನ್ಮ ತಾಳಿತು ಎಂಬುದು ನಾವು ಹೆಮ್ಮೆ ಪಡಬೇಕಾದ ವಿಷಯ.

ಆಲ್ಬರ್ಟ್ ಐನ್‌ಸ್ಟೈನ್ ಹೇಳಿದ್ದಾರೆ, ''ನಮ್ಮ ಮುಂದಿನ ಪೀಳಿಗೆಯವರು ಇಂತಹ ಒಬ್ಬ ವ್ಯಕ್ತಿ ಜಗತ್ತಿನಲ್ಲಿದ್ದ ಎಂದರೆ ನಂಬದಿರಬಹುದು'' ಎಂದು. ಅಂತಹ ತಮ್ಮ ದಿವ್ಯ ಪ್ರಭೆಯನ್ನು ಎಲ್ಲರ ಮೇಲೆ ಬೀರಿ ಎಲ್ಲರ ಮನಸ್ಸಿನಲ್ಲೂ ಪ್ರತಿಷ್ಠಾಪನೆಗೊಂಡಿದ್ದಾರೆ ಗಾಂಧೀಜಿ. ದೇವರ ಮೇಲಿನ ಅವರ ಅನನ್ಯ ಭಕ್ತಿ ಅವರ ಯಶಸ್ಸಿಗೆ ಪ್ರಮುಖ ಕಾರಣ. ಆದರೆ ಅವರ ರಾಮರಾಜ್ಯದ ಕನಸು ಮಾತ್ರ ಇಂದಿಗೂ ನನಸಾಗಿಲ್ಲ. ಜನರು ಅವರ ಆದರ್ಶಗಳನ್ನು ಮರೆಯುತ್ತಿದ್ದಾರೆ. ನಮ್ಮ ಆಲೋಚನೆಗಳನ್ನು ಆದಷ್ಟುಮಟ್ಟಿಗೆ ಗಾಂಧೀಜಿಯವರ ಚಿಂತನೆಗಳ ದಿಶೆಯಲ್ಲಿ ಹರಿಸಿದರೆ ನಮ್ಮ ದೇಶಕ್ಕೆ ಒಳಿತಾಗುವುದರಲ್ಲಿ ಸಂದೇಹವಿಲ್ಲ.


**ಕುಸುಮ ಡಿ. ಟಿ.**
ಹೊಂಡರಬಾಳು
ಚಾಮರಾಜನಗರ.

**ದ**ಕ್ಷಿಣ ಆಫ್ರಿಕಾದ ವಿಮೋಚನಾ ಚಳುವಳಿಯ ಆಧಾರ ಸ್ತಂಭಗಳಲ್ಲಿ ಒಂದಾಗಿದ್ದು ಅಮೋಘ ಹೋರಾಟಗಾರನಾಗಿ ವರೇಣ್ಯನೆನಿಸಿಕೊಂಡ ಗೋವಾನ್ ಇತ್ತೀಚೆಗೆ ನಿಧನರಾದರು. ತೊಂಭತ್ತು ವರ್ಷದ ಜೀವನದಲ್ಲಿ ಸುಮಾರು ಎಪ್ಪತ್ತೈದು ವರ್ಷಗಳ ಕಾಲ ಈ ಮಹಾತ್ಮನು ಸತತವಾಗಿ ಜನಪರ ಸಂಘರ್ಷದಲ್ಲಿ ಭಾಗಿಯಾಗಿದ್ದ. ರಿವೋನಿಯಾ ಮೊಕದ್ದಮೆಯಲ್ಲಿ 'ದೇಶದ್ರೋಹ'ದ ಆಪಾದನೆಯನ್ನು ಎದುರಿಸುತ್ತಾ ಅಂದಿನ ಮದಾಂಧ ಬಿಳಿಯ ಸರ್ಕಾರಕ್ಕೆ ಮಣಿಯದೆ ನೆಲ್ಸನ್ ಮಂಡೇಲ, ವಾಲ್ಟರ್ ಸಿಸುಲು ಮುಂತಾದವರೊಡನೆ ರೋಬೆನ್ ದ್ವೀಪದ ಕಾರಾಗೃಹಕ್ಕೆ ತಳ್ಳಲ್ಪಟ್ಟು ತಾನೂ ಕಲ್ಲು ಕುಟ್ಟುವ ಕಠಿಣ ಶಿಕ್ಷೆ ಅನುಭವಿಸಿದ.



ಗೋವಾನ್ ಆರ್ಚಿಬಾಲ್ಡ್ ಮ್ವುನ್ಯೇಲಿನಾ ಅಂಬೇಕಿ ಹುಟ್ಟಿದ್ದು ಕೇಪ್ ಪ್ರಾಂತ್ಯದ ಟ್ರಾನ್ಸ್‌ಕೈನಲ್ಲಿ, ೧೯೧೦ರ

# ಇತಿಹಾಸ ಪುರುಷ ಗೋವಾನ್ ಅಂಬೇಕಿ

ಜುಲೈ ಏರಡು. ತಂದೆ-ತಾಯಿ ಕೃಷಿಕರು, ಮತಧರ್ಮದ ಕಟ್ಟಾ ಅನುಯಾಯಿಗಳು. ಕರಿಯರ ಆರ್ಥಿಕ ಹೀನಸ್ಥಿತಿಯ ಹಿನ್ನೆಲೆಯಲ್ಲಿ ನೋಡಿದರೆ ಗೋವಾನ್‌ರ ತಂದೆ ಅನುಕೂಲಸ್ಥರೇ: ಒಂದು ಹಿಂಡು ದನ, ಕುದುರೆಗಳು, ಕುರಿ-ಮೇಕೆಗಳು ಅವರಲ್ಲಿ ಧಾರಾಳವಾಗಿದ್ದುವು. ಆರು ಸೋದರಿಯರು ಮತ್ತು ಒಬ್ಬ ಅಣ್ಣನೂ ಸೇರಿದಂತೆ ಅಂಬೇಕಿ ಕುಟುಂಬದ ಎಲ್ಲರೂ ವಿದ್ಯಾಭ್ಯಾಸದ ಅವಕಾಶ ಪಡೆದಿದ್ದರು. ಮನೆಯಿಂದ ಏಳು ಮೈಲಿ ದೂರದ ಶಾಲೆಯಲ್ಲಿ ಗೋವಾನ್‌ಗೆ ಪ್ರಾಥಮಿಕ ಶಿಕ್ಷಣ. ಇಡೀ ದಿನ ಅಷ್ಟು ದೂರ ಹೋಗಿ ಬರುವುದರಲ್ಲೇ ಕಳೆಯುತ್ತಿತ್ತು. ಶಾಲೆ ಇದ್ದದ್ದು ಒಂದು ಚರ್ಚಿನ ಅಂಗಣದಲ್ಲಿ. ಬೆಂಚು - ಮೇಜುಗಳ ಹೆಸರೇ ಇರಲಿಲ್ಲ. ಎಲ್ಲ ತರಗತಿಗಳ ವಿದ್ಯಾರ್ಥಿಗಳೂ ತಮ್ಮ ತಮ್ಮ ಪಾಠಗಳನ್ನು ಒಟ್ಟಿಗೆ ಅರಚಿಕೊಳ್ಳುತ್ತಿದ್ದರೂ ಹೇಗೆ ಶಿಕ್ಷಣ ಸಾಧ್ಯವಾಯಿತೆಂದು ನಂತರದ ದಿನಗಳಲ್ಲಿ ಗೋವಾನ್ ಅಚ್ಚರಿ ವ್ಯಕ್ತಪಡಿಸುತ್ತಿದ್ದುದುಂಟು. ೧೯೩೭ರಲ್ಲಿ ಈತ ರಾಜ್ಯಶಾಸ್ತ್ರ ಮತ್ತು ಮನಶ್ಶಾಸ್ತ್ರಗಳ ವಿಭಾಗದಿಂದ ಪದವಿ ಪಡೆದುಕೊಂಡ. ಆಮೇಲೆ ಇನ್ನೂ ಕೆಲವು ಪದವಿಗಳನ್ನು ಪಡೆದು ವಿದ್ಯಾರ್ಹತೆ ಹೆಚ್ಚಿಸಿಕೊಳ್ಳಲು ಶ್ರಮಿಸಿದರು. ಹಾಗೆ ಅಭ್ಯಾಸ ಮಾಡಿದ ವಿಷಯಗಳಲ್ಲಿ 'ದಕ್ಷಿಣ ಆಫ್ರಿಕಾದ ಆರ್ಥಿಕತೆಯಲ್ಲಿ ಸ್ಥಳೀಯರ ಸ್ಥಾನ' ಮತ್ತು 'ಬಿಳಿಯರಲ್ಲಿ ಬಡವರ ಸಮಸ್ಯೆ' ಎಂಬುವೂ ಸೇರಿದ್ದುವು.

ಹುಡುಗ ೧೫ ವರ್ಷದವನಿದ್ದಾಗ ಅವನ ಮೆಥಾಡಿಸ್ಟ್ ಚರ್ಚ್‌ನ ಹಿರಿಯ ಪಾದ್ರಿ ಮಲೊಂಗೋ ಒಂದು ಸಂಗೀತ ಸಭೆ ಆಯೋಜಿಸಿ ಹಣ ಸಂಗ್ರಹಿಸಿದ್ದ : ಅದು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ಗಾಗಿ. ಹುಡುಗನ ರಾಜಕೀಯ ಪ್ರಜ್ಞೆ ಅದರಿಂದ ಜಾಗೃತಗೊಳ್ಳಲಾರಂಭವಾಯಿತು. ತನ್ನ ೧೯ನೆಯ ವಯಸ್ಸಿನ ವೇಳೆಗೆ ಆತ ಜೊಹಾನ್ಸ್‌ಬರ್ಗ್‌ಗೆ ಬಂದ. ವರ್ತಮಾನ ಪತ್ರಿಕೆಗಳನ್ನು ಹಂಚುವುದು, ಇತರೆ ಪದಾರ್ಥಗಳನ್ನು ಮನೆಗಳಿಗೆ ಮುಟ್ಟಿಸುವುದು ಅವನ ಕೆಲಸ. ದೇಶದ ಕಡುಬಡತನದ ಪರಿಚಯ ಇದರಿಂದ ನೇರವಾಗಿ ದೊರೆಯಿತು. ಆತ ವಾಸವಾಗಿದ್ದ ಝೋಪಡಿಗಳ ಮೇಲೆ ಆಗಾಗ್ಗೆ ಪೊಲೀಸರ ಧಾಳಿ ನಡೆಯುತ್ತಿತ್ತು : ಪರವಾನಗಿ ಪತ್ರಗಳ ತಪಾಸಣೆಗೆ ಮತ್ತು ಕಳ್ಳಭಟ್ಟಿ ತಯಾರಾಗುತ್ತಿದೆಯೇ ಎಂಬುದರ ಪರಿಶೀಲನೆಗೆ. ಗೋವಾನ್ ಇದರಿಂದ ಕೃದ್ಧನಾಗುತ್ತಿದ್ದ. ಇಂತಹ ನೀಚ ವ್ಯವಸ್ಥೆಯನ್ನು ಕಿತ್ತುಹಾಕಬೇಕೆಂಬ ದೃಢ ನಿಶ್ಚಯ ಆಗಲೇ ಮೊಳಕೆಯೊಡೆದದ್ದು.

೧೯೩೫ರಲ್ಲಿ ಗೋವಾನ್ ವಿದ್ಯಾರ್ಥಿದೆಸೆಯಲ್ಲೇ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಸೇರಿಕೊಂಡ. ಅನೇಕ ಗ್ರಂಥಗಳ ರಚನೆ, ಪತ್ರಿಕೋದ್ಯಮ, ರಾಜಕೀಯ ಚಟುವಟಿಕೆ, ಶಸ್ತ್ರಪ್ರಯೋಗ – ಹೀಗೆ ಬಹುಮುಖವಾಗಿ ಆತನ ಕಾರ್ಯರಂಗ ವಿಸ್ತಾರಗೊಂಡಿತು. ತನ್ನ ರಾಜಕೀಯ ಚಟುವಟಿಕೆಗಳಿಂದಾಗಿ ೧೯೩೯ರಲ್ಲಿ ಗೋವಾನ್ ಅಧ್ಯಾಪಕನ ಕೆಲಸ ಕಳೆದುಕೊಂಡು ೧೯೪೧ರಲ್ಲಿ ಟ್ರಾನ್ಸ್‌ಕೈ ಮತದಾರರ ಸಂಘದ ಕಾರ್ಯದರ್ಶಿಯಾಗಿ ಚುನಾಯಿತನಾದ. ಆಮೇಲೆ ಅದೇ ಪ್ರಾಂತ್ಯದ ಸಂಘಟಿತ ಒಕ್ಕೂಟದ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಗೊಂಡ. ೧೯೫೩ರಿಂದ ಎರಡು ವರ್ಷಗಳ ಮಟ್ಟಿಗೆ ಮತ್ತೆ ಅಧ್ಯಾಪಕನಾದ. ಹೋರಾಟದ ರಂಗದಲ್ಲಿ ಹೆಚ್ಚು ಹೆಚ್ಚು ಮಹತ್ವದ ಕೆಲಸಗಳನ್ನು ಮಾಡುತ್ತಾ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ರಾಷ್ಟ್ರೀಯ ಅಧ್ಯಕ್ಷರಾಗಿ ಗೋವಾನ್ ಚುನಾಯಿತರಾದದ್ದು ೧೯೫೭ರಲ್ಲಿ. ದೇಶದಿಂದ ಹೊರದೂಡಲ್ಪಟ್ಟ ಮೇಲೂ ಆತ ಆ ಸ್ಥಾನದಲ್ಲಿ ಬಹುಕಾಲ ಮುಂದುವರಿದರು. ಈ ಮಧ್ಯೆ ಬಿಳಿಯರ ಕಾರಾಗೃಹಗಳಿಗೆ ಗೋವಾನ್ ಹತ್ತಾರು ಬಾರಿ ತಳ್ಳಲ್ಪಟ್ಟಿದ್ದರು.

ಗೋವಾನ್ ಅಂಬೇಕಿ ಒಬ್ಬ ನಿಷ್ಠಾವಂತ ಮಾರ್ಕ್ಸ್‌ವಾದಿ. ಬಿಳಿಯರ ಸರ್ಕಾರವು ಕಮ್ಯುನಿಸ್ಟ್ ಸಿದ್ಧಾಂತವನ್ನು ನುಚ್ಚುನೂರು ಮಾಡಬೇಕೆಂದು ಹೊರಡಿಸಿದ ಶಾಸನದಡಿಯಲ್ಲಿ ಗೋವಾನ್‌ರದು ಮೊದಲ ಹೆಸರು. ಎಂತಹ ಆಪತ್ತುಗಳನ್ನು ಎದುರಿಸಬೇಕಾಗಿ ಬಂದರೂ ಗೋವಾನ್ ಕಡೆಯುವರೆಗೂ ತಾನು ನಂಬಿದ್ದ ಸಿದ್ಧಾಂತದಿಂದ ದೂರವಾಗಲಿಲ್ಲ. ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಚಳುವಳಿಗೆ, ವಿಮೋಚನಾ ಹೋರಾಟಕ್ಕೆ, ಜನಾಂಗೀಯ ಸಾಮರಸ್ಯದ ಸೃಷ್ಟಿಗೆ, ಬೌದ್ಧಿಕ – ಸೈದ್ಧಾಂತಿಕ ಚರ್ಚೆಗಳಿಗೆ, ಅಂತರರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಗಳಿಗೆ ಗೋವಾನ್‌ರ ಕೊಡುಗೆ ಅಗಾಧ ಮತ್ತು ಅವಿಸ್ಮರಣೀಯ.

೧೯೩೭ರಲ್ಲಿ ತನ್ನ ಸಹೋದ್ಯೋಗಿಯೊಬ್ಬಳನ್ನು ಗೋವಾನ್ ಮದುವೆಯಾದರು. "ಆಕೆ ಬೌದ್ಧಿಕವಾಗಿ ನನ್ನ ಸರಿಸಮಾನಳು ಮತ್ತು ನನ್ನ ಜೀವನದೃಷ್ಟಿ ಹಾಗೂ ರಾಜಕೀಯ ಆಕಾಂಕ್ಷೆಗಳು ಆಕೆಯದೂ ಆಗಿವೆ" ಎಂದು ಗೋವಾನ್ ಪದೇಪದೇ ಹೇಳುತ್ತಿದ್ದರು. ಅವರ ನಾಲ್ಕು ಮಕ್ಕಳ ಪೈಕಿ ಥಾಬೋ ಅಂಬೇಕಿ ಒಬ್ಬ. ಇಂಗ್ಲೆಂಡಿನ ಸಸೆಕ್ಸ್ ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರ ವ್ಯಾಸಂಗ ಮಾಡಿದ ಈತ ಈಗ ದಕ್ಷಿಣ ಆಫ್ರಿಕಾದ ಅಧ್ಯಕ್ಷ. ತಂದೆಯಂತೆ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಕಾರ್ಯಕರ್ತನಾದರೂ ಥಾಬೋ ಕಮ್ಯುನಿಸ್ಟ್ ಚಳುವಳಿಯಲ್ಲಿ ಅಷ್ಟಾಗಿ ಭಾಗವಹಿಸಿಲ್ಲ. ಇತ್ತೀಚೆಗೆ ಡರ್ಬಾನ್‌ನಲ್ಲಿ ಅಂತರರಾಷ್ಟ್ರೀಯ ಸಮಾವೇಶವೊಂದು ಜರುಗಿತಷ್ಟೇ : ಜನಾಂಗೀಯ ವಿದ್ವೇಷ, ಅಸಹನೆ, ಸಾಮಾಜಿಕ ತಾರತಮ್ಯ ಮುಂತಾದುವನ್ನು ಚರ್ಚಿಸುವುದು ಅದರ ಉದ್ದೇಶವಾಗಿತ್ತು. ಸಮಾವೇಶವನ್ನು ಕಾತುರದಿಂದ ನಿರೀಕ್ಷಿಸುತ್ತಿದ್ದ ಕ್ರಿಯಾಶೀಲತೆಯ ಖನಿ ಗೋವಾನ್ ಅಂಬೇಕಿ ಸಮಾವೇಶ ಆರಂಭವಾಗಬೇಕಿದ್ದ ಹಿಂದಿನ ದಿನ ಅಸು ನೀಗಿದ್ದೊಂದು ಸೋಜಿಗದ ವಿಷಯ. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಶಸ್ತ್ರಸಜ್ಜಿತ ಪಡೆಯಾದ ಉಮ್‌ಕೋಂತೋ ವೆ ಸಿಜ್ವೆ ಎಂಬ ಮಹಾನ್ ಸಂಘಟನೆಯ ಯೋಜಕ, ನೇತಾರ ಮತ್ತು ಸ್ವಾತಂತ್ರ್ಯ ಹೋರಾಟಗಾರ ಗೋವಾನ್‌ರ ಸಂದೇಶ ಅಚ್ಚಳಿಯದಂತೆ ಉಳಿದಿದೆ. ಇದು ಎಲ್ಲ ರಾಷ್ಟ್ರಗಳ ಸಾಮಾನ್ಯ ಜನರ ಆಶಯಗಳನ್ನು ಪೂರೈಸುವ ದಿಕ್ಕಿನಲ್ಲಿ ನಮ್ಮನ್ನು ಕೊಂಡೊಯ್ಯುತ್ತದೆಂಬ ಭರವಸೆಯನ್ನು 'ಹೊಸತು' ಪುನರುಚ್ಚರಿಸುತ್ತಾ ಗೋವಾನ್‌ರಿಗೆ ತನ್ನ ಗೌರವವನ್ನು ಸಲ್ಲಿಸುತ್ತದೆ.

– ಜಿ. ರಾಮಕೃಷ್ಣ

## ಕ್ರಿಯಾಶೀಲವಾಗಿದೆ !



ಭೂಮಿಯ ಮೇಲೆ
ಬೆಳಕು ಹರಡುವಲ್ಲಿ
ನನ್ನದೂ ಪಾಲಿದೆ !

ಇಲ್ಲಿ ನಡೆವ ಎಲ್ಲ
ಸಂಘರ್ಷಗಳಲ್ಲಿ
ನನ್ನದೂ ಪಾಲಿದೆ !

ನಾನು ಯಾರನ್ನು ಪ್ರೀತಿಸಿದ್ದೆನೋ
ಅದೇ ಏಕಾಂತದೊಂದಿಗೆ ಅವಿಶ್ರಾಂತ
ಅವರೊಂದಿಗೇ ಇದ್ದೇನೆ !

ನನ್ನ ಗಾಢ ಮೌನದಲ್ಲಿ
ಕಡಲು ಕ್ರಿಯಾಶೀಲವಾಗಿದೆ !

ಮೂಲ : ಪಾಬ್ಲೊ ನೆರೂದಾ
ಅನು : ಡಾ॥ ಪಂಚಾಕ್ಷರಿ ಹಿರೇಮಠ

# ಸಾಮಾಜಿಕ ವಿಪ್ಲವದಲ್ಲಿ ಕಾವ್ಯದ ಪಾತ್ರ

ಡಾ॥ ಎ. ವೃಷಭೇಂದ್ರಾಚಾರ್

ಸಾಹಿತ್ಯವು ಸಮಾಜವನ್ನು ಪ್ರಭಾವಗೊಳಿಸಬಲ್ಲುದೆ ? ಅದು ಎಷ್ಟರಮಟ್ಟಿಗೆ ಸಾಧ್ಯ ? ಎಂಬುದು ಕುತೂಹಲಕಾರಿಯಾದ ಪ್ರಶ್ನೆ. ಈ ಬಗ್ಗೆ ಸ್ವಲ್ಪ ಹಿಂದಕ್ಕೆ ಹೊರಳಿ ನೋಡೋಣ. ಮಹಾಕಾವ್ಯಗಳಾದ ರಾಮಾಯಣ - ಮಹಾಭಾರತಗಳು ಇಡೀ ದೇಶದ ಪರಂಪರೆಯ ಮೇಲೆ ಎಂಥ ಗಾಢವಾದ ಪರಿಣಾಮ ಬೀರುತ್ತಾ ಬಂದಿವೆ ಎಂಬುದನ್ನು ನೋಡಿದರೆ ಆಶ್ಚರ್ಯ ಉಂಟಾಗುತ್ತದೆ. ಜನರ ಜೀವನದಲ್ಲಿ ಎಲ್ಲ ಆಯಾಮಗಳಲ್ಲಿ, ಎಲ್ಲ ಹಂತಗಳಲ್ಲಿ, ನಡೆ-ನುಡಿ, ಸಂಸ್ಕೃತಿ, ಕಲೆ, ಮೌಲ್ಯಗಳು ಎಲ್ಲವುಗಳಲ್ಲಿ ಅವು ಇಳಿದುಬಂದಿವೆ, ಉಳಿದುಬಂದಿವೆ. ಮೂಲ ಕೃತಿಗಳೇ ಅಲ್ಲದಿದ್ದರೂ ದೇಶೀಯ ರೂಪಗಳ ಮೂಲಕವಾಗಿಯಾದರೂ ಅವು ಪ್ರಭಾವ ಬೀರಿವೆ. ನಮ್ಮ ದೇಶವಷ್ಟೆ ಅಲ್ಲ - ಹಿಂದೆ ನಮ್ಮ ಜನ ಸಂಪರ್ಕ ಹೊಂದಿದ್ದ ಇಂಡೋನೇಷ್ಯಾ, ಇಂಡೋಚೀಣಾ ದೇಶಗಳಲ್ಲೂ ಅವುಗಳ ಪ್ರಭಾವ ಅಚ್ಚಳಿಯದೆ ಉಳಿದುಬಂದಿದೆ. ನಮ್ಮ ದೇಶೀಯ ಭಾಷೆಗಳ ಪ್ರಾರಂಭಿಕ ಸಾಹಿತ್ಯವೆಲ್ಲವೂ ಅವುಗಳಿಗೆ ಋಣಿಯಾಗಿವೆ. ಅಷ್ಟೇ ಅಲ್ಲ, ದೇಶೀಯ ಜಾನಪದ ಸಾಹಿತ್ಯ ಮತ್ತು ಜನಜೀವನವನ್ನೂ ಅವು ಗಾಢವಾಗಿ ಪ್ರಭಾವ ಗೊಳಿಸಿವೆ. ಸಮಾಜದ ಮೇಲೆ ಇಷ್ಟೊಂದು ಪ್ರಭಾವ ಬೀರಿದ ಸಾಹಿತ್ಯ ಕೃತಿಗಳು ಬೇರಾವ ಜಾಗತಿಕ ಮಟ್ಟದಲ್ಲೂ ವಿರಳ ಎನ್ನಬಹುದು.

ಇವುಗಳ ಪ್ರಭಾವದಿಂದ ಬಿಡಿಸಿಕೊಂಡು ದೇಶೀಯ ಭಾಷೆಗಳು ತಂತಮ್ಮ ಸ್ವಂತಿಕೆಯನ್ನು ರೂಪಿಸಿಕೊಂಡು ಬಂದಿವೆ ಎಂಬುದು ಈ ಚರ್ಚೆಯ ಇನ್ನೊಂದು ಮುಖ.

ನಮ್ಮ ಕನ್ನಡದ ಸಂದರ್ಭಕ್ಕೆ ಬಂದರೆ ಜೈನ ಧರ್ಮವು ಕರ್ನಾಟಕದಲ್ಲಿ ಪ್ರಸಾರವಾಗಲು ಪ್ರಾಕೃತ-ಕನ್ನಡ ಕೃತಿಗಳು ಬಹಳ ಪರಿಣಾಮ ಬೀರಿದವು. ಆಮೇಲೆ ೧೨ನೇ ಶತಮಾನದಲ್ಲಿ ಮೂಡಿಬಂದ ವಚನ ಸಾಹಿತ್ಯ ಕ್ರಾಂತಿಯಂತೂ ಅತ್ಯದ್ಭುತವಾದುದು. ರಾಮಾಯಣ-ಭಾರತ, ಸಂಸ್ಕೃತ ಸಾಹಿತ್ಯ, ವರ್ಣಾಶ್ರಮಧರ್ಮಗಳ ಹಿಡಿತದಿಂದಲೂ ಹಾಗೂ ಜೈನ ಧರ್ಮದ ಹಿಡಿತದಿಂದಲೂ ಕನ್ನಡ ಜನತೆಯನ್ನು ಮುಕ್ತಗೊಳಿಸಿ ತಮ್ಮದೇ ಆದ ಜನಪರ ಸಂಸ್ಕೃತಿಯನ್ನು ಬೆಳೆಸುವಲ್ಲಿ ವಚನ ಸಾಹಿತ್ಯದ ಪ್ರಭಾವ ಪ್ರಶಂಸನೀಯ. ಕನ್ನಡ ಭಾಷೆ, ಸಾಹಿತ್ಯ, ಕನ್ನಡದ ಜನತೆಯ ನಡೆನುಡಿ ಎಲ್ಲವನ್ನೂ ತಿದ್ದಿ ರೂಪಿಸಿದ ಹಿರಿಮೆ ವಚನ ಸಾಹಿತ್ಯದ್ದು. ಅದರ ಪ್ರಭಾವ ಅಂದಿನಿಂದ ಇಂದಿನವರೆಗೂ ಸಾಗಿಬಂದಿದೆ. ವಚನ ಸಾಹಿತ್ಯ ನಿರ್ಮಿಸಿದ ಜಾಡಿನಲ್ಲಿಯೇ ನಡೆದುಬಂದ ಕಾವ್ಯಗಳು, ತತ್ವಪದಗಳು, ದಾಸರ ಪದಗಳು, ಸರ್ವಜ್ಞನ ತ್ರಿಪದಿಗಳು ಕನ್ನಡಿಗರಲ್ಲಿ ಎಷ್ಟು ಜನಜನಿತವಾಗಿವೆ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಒಂದು ವೇಳೆ ಇಂಥ ಸಾಹಿತ್ಯಕ ಪರಂಪರೆ ಇಲ್ಲದಿದ್ದರೆ ಕನ್ನಡಿಗರ ಜನಜೀವನ ಸಂಸ್ಕೃತಿಗಳು ಎಷ್ಟು ಬರಡಾಗಿರುತ್ತಿದ್ದವು ಎಂದು ಊಹಿಸಲೂ ಸಾಧ್ಯವಿಲ್ಲ.

ಸಮಾಜವನ್ನು ಬದಲಾಯಿಸುವುದರಲ್ಲಿ ಸಾಹಿತ್ಯವು ತನ್ನದೇ ಪಾತ್ರವನ್ನು ವಹಿಸಬಲ್ಲುದು ಎಂಬುದನ್ನು ಇತ್ತೀಚಿನ ರಷ್ಯನ್ ಸಾಹಿತ್ಯ, ಆಫ್ರಿಕದ ಕಪ್ಪು ಸಾಹಿತ್ಯ, ಮತ್ತಿತರ ದೇಶಗಳಲ್ಲಿ ಜನಪರ ಚಳುವಳಿಗಳಿಂದ ಮೂಡಿಬಂದ ಕ್ರಾಂತಿ ಸಾಹಿತ್ಯ ಕೃತಿಗಳು [illegible] ತೋರುತ್ತವೆ. ನಮ್ಮ ನೆರೆಯಲ್ಲೇ

ಕಾವ್ಯವು ವಿಪ್ಲವಾತ್ಮಕವಾಗಿರಬೇಕಾದರೆ ಅದಕ್ಕೆ ಸಮಗ್ರ ಸಾಮಾಜಿಕ ಬದಲಾವಣೆಯ ತಾತ್ವಿಕ ಹಿನ್ನೆಲೆ ಇರಬೇಕಾಗುತ್ತದೆ, ಸಾಮಾಜಿಕ ಬದ್ಧತೆ ಇರಬೇಕಾಗುತ್ತದೆ. (ವಚನಕಾರರಿಗೆ ತಮ್ಮದೇ ಆದ ರೀತಿಯ ಸಾಮಾಜಿಕ ಬದ್ಧತೆ ಇತ್ತು. 'ಉರಿ ಬರಲಿ ಸಿರಿ ಬರಲಿ' ಎಂಬ ಛಲವಿತ್ತು. ಆದ್ದರಿಂದಲೇ ಬಹುಮಟ್ಟಿಗೆ ಸಮಗ್ರ ಕರ್ನಾಟಕದ ಸಾಮಾಜಿಕ, ಧಾರ್ಮಿಕ ಚಿತ್ರವನ್ನೇ ಅವರು ಬದಲಿಸಲು ಸಾಧ್ಯವಾಯಿತು). ದಂತ ಗೋಪುರಗಳಲ್ಲಿ ಕುಳಿತ, ಬಿಳಿ ಬಟ್ಟೆಯ ನಾಜೂಕಾದ ಮಧ್ಯಮ - ಉತ್ತಮ ದರ್ಜೆಯ ಕವಿಗಳು ಅವರು ಎಷ್ಟೇ ಕ್ರಾಂತಿಕಾರಿಗಳಂತೆ ಬರೆದರೂ - ಸಾಮಾಜಿಕ ವಿಪ್ಲವಕ್ಕೆ ಕಾರಣವಾಗುವುದಿಲ್ಲ.

ಇರುವ ತೆಲುಗು ಸಾಹಿತ್ಯದ ಕ್ರಾಂತಿಕಾರಿ ಸ್ವರೂಪವು ಅಲ್ಲಿಯ ಜನಪರ ಹೋರಾಟಗಳಿಗೆ ಹೇಗೆ ಸ್ಫೂರ್ತಿಯಾಯಿತು, ಹೇಗೆ ಅಲ್ಲಿಯ ಜನರ ಆಲೋಚನೆ, ಕಲೆ, ಧೋರಣೆಗಳನ್ನು ರೂಪುಗೊಳಿಸಿತು ಎಂಬುದನ್ನು ಅವಲೋಕಿಸಿದರೆ ಇತ್ತೀಚಿನ ಕನ್ನಡ ಸಾಹಿತ್ಯ ಏಕೆ ಪ್ರಭಾವಕಾರಿಯಾಗಿಲ್ಲ ಎಂಬುದಕ್ಕೆ ಉತ್ತರ ದೊರೆಯುತ್ತದೆ.

ಸಾಹಿತ್ಯದಿಂದ ಸಮಾಜವನ್ನು ಬದಲಾಯಿಸಲು ಸಾಧ್ಯವೇ ? ಮಂತ್ರಿಸಿದರೆ ಮಾವಿನಕಾಯಿ ಉದುರುತ್ತದೆಯೆ ? ಆಧುನಿಕ ಕನ್ನಡ ಸಾಹಿತ್ಯಕ ಸಂದರ್ಭದಲ್ಲಿ ಈ ಪ್ರಶ್ನೆಗಳು ಎಷ್ಟು ಪ್ರಸ್ತುತ ? ನವೋದಯ ಕವಿಗಳು ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ರಾಷ್ಟ್ರಭಕ್ತಿ, ನಾಡು ನುಡಿಗಳ ಅಭಿಮಾನ, ಗತಕಾಲದ ವೈಭವೀಕರಣ, ಸಾಮಾಜಿಕ ಸುಧಾರಣೆಗಳು, ಸ್ವಾತಂತ್ರ್ಯ, ಸಮಾನತೆ, ಸೋದರತೆ ಮುಂತಾದ ವಿಷಯಗಳನ್ನು ಕುರಿತು ವಿಪುಲವಾಗಿ ಕಾವ್ಯ ರಚನೆ ಮಾಡಿದರು. ಆ ಮೂಲಕ ಕಾವ್ಯ ಜನಸಾಮಾನ್ಯರನ್ನು ಸ್ಪಂದಿಸುವಂತಾಯಿತು. ಹಾಗೆಯೇ ಕಾವ್ಯ ಸಮೃದ್ಧಿಯೂ ತಲೆದೋರಿತು. ತೀರಾ ಕೆಳಗಿನ ಹಂತದ




ಜನರಲ್ಲದಿದ್ದರೂ ಓದು ಕಲಿತ ಮೇಲ್ವರ್ಗ-ಮಧ್ಯಮವರ್ಗಗಳಂತೂ ಈ ಪ್ರಭಾವದ ವ್ಯಾಪ್ತಿಗೆ ಒಳಗಾದವು. ಆ ಕವಿಗಳ ಧೋರಣೆ ಬಹುಮಟ್ಟಿಗೆ ಸುಧಾರಣೆಯ ಹಂತದ್ದಾಗಿತ್ತು. ಕೆಲವು ವೇಳೆ ಹಿಂದಿನ ಮೌಲ್ಯಗಳ ಪುನರುಜ್ಜೀವನವೂ ಆಗಿತ್ತು. ಸಮಾಜವನ್ನು ತಲಸ್ಪರ್ಶಿಯಾಗಿ ಹಾಗೂ ಸಮಗ್ರವಾಗಿ ಆಮೂಲಾಗ್ರವಾಗಿ ಬದಲಾಯಿಸುವುದು ಅವರ ಉದ್ದೇಶವಾಗಿರಲಿಲ್ಲ. ಇಂಥ ಸಮಗ್ರಕ್ರಾಂತಿ ದೃಷ್ಟಿಯನ್ನು ನೀಡಬಲ್ಲ ಮಾರ್ಕ್ಸಿಸ್ಟ್ ವಿಚಾರಧಾರೆಯನ್ನು ಅವರು ಅನುಮಾನದಿಂದ ನೋಡಿದರು - ಮೈಲಿಗೆಯಂತೆ ದೂರವಿಟ್ಟರು.

ಕಾವ್ಯವು ವಿಪ್ಲವಾತ್ಮಕವಾಗಿರಬೇಕಾದರೆ ಅದಕ್ಕೆ ಸಮಗ್ರ ಸಾಮಾಜಿಕ ಬದಲಾವಣೆಯ ತಾತ್ವಿಕ ಹಿನ್ನೆಲೆ ಇರಬೇಕಾಗುತ್ತದೆ, ಸಾಮಾಜಿಕ ಬದ್ಧತೆ ಇರಬೇಕಾಗುತ್ತದೆ. (ವಚನಕಾರರಿಗೆ ತಮ್ಮದೇ ಆದ ರೀತಿಯ ಸಾಮಾಜಿಕ ಬದ್ಧತೆ ಇತ್ತು. 'ಉರಿ ಬರಲಿ ಸಿರಿ ಬರಲಿ' ಎಂಬ ಛಲವಿತ್ತು. ಆದ್ದರಿಂದಲೇ ಬಹುಮಟ್ಟಿಗೆ ಸಮಗ್ರ ಕರ್ನಾಟಕದ ಸಾಮಾಜಿಕ, ಧಾರ್ಮಿಕ ಚಿತ್ರವನ್ನೇ ಅವರು ಬದಲಿಸಲು ಸಾಧ್ಯವಾಯಿತು). ದಂತ ಗೋಪುರಗಳಲ್ಲಿ ಕುಳಿತ, ಬಿಳಿ ಬಟ್ಟೆಯ ನಾಜೂಕಾದ ಮಧ್ಯಮ - ಉತ್ತಮ ದರ್ಜೆಯ ಕವಿಗಳು ಅವರು ಎಷ್ಟೇ ಕ್ರಾಂತಿಕಾರಿಗಳಂತೆ ಬರೆದರೂ - ಸಾಮಾಜಿಕ ವಿಪ್ಲವಕ್ಕೆ ಕಾರಣವಾಗುವುದಿಲ್ಲ.

ಹಾಗೆ ನೋಡಿದರೆ ಕಾವ್ಯದಿಂದಲೇ ಕ್ರಾಂತಿಯಾಗುತ್ತದೆ ಎಂಬ ತಿಳುವಳಿಕೆಯೂ ತಪ್ಪು. ಸಾಮಾಜಿಕ ಕ್ರಾಂತಿಗೆ ದ್ವಂದ್ವಾತ್ಮಕವಾದ, ಐತಿಹಾಸಿಕವಾದ ಭೌತಿಕ ಕಾರಣಗಳೇ ಹಿನ್ನೆಲೆಯಾಗಿರುತ್ತವೆ. ಸಾಂಪ್ರದಾಯಿಕ ಶಕ್ತಿಗಳ ಹಾಗೂ ಪಟ್ಟಭದ್ರ ವ್ಯವಸ್ಥೆಯ ವಿರುದ್ಧವಾಗಿ ಪ್ರಗತಿಪರ ಶಕ್ತಿಗಳು ಹೋರಾಟದಲ್ಲಿ ತೊಡಗಬೇಕಾಗುತ್ತದೆ. ಕಾವ್ಯವನ್ನೂ ಇನ್ನಿತರ ಕಲಾ ಮಾಧ್ಯಮಗಳೊಡನೆ ಪ್ರಗತಿಪರ ಸಂಘಟನೆಗಳು ತಮ್ಮ ಉದ್ದೇಶ ಸಾಧನೆಗೆ ಬಳಸಿಕೊಳ್ಳುತ್ತವೆ.

ಸ್ವಾತಂತ್ರ್ಯ ಸಂಗ್ರಾಮದ ಸನ್ನಿವೇಶದಲ್ಲಿ ಸಾಹಿತ್ಯವನ್ನು - ಕಾವ್ಯವನ್ನು ಈ ರೀತಿ ಬಳಸಿಕೊಳ್ಳಲಾಯಿತು. ಸ್ವಾತಂತ್ರ್ಯ ಬಂದ ಮೇಲೆ ಆ ಬಗೆಯ ಕನ್ನಡ ಕಾವ್ಯ ಸಂತೃಪ್ತವಾಗಿ ವಿರಮಿಸಿಬಿಟ್ಟಿತು - ತನ್ನ ಕೆಲಸ ಮುಗಿಯಿತೆಂದು. ಆದರೆ ಕೇವಲ ಸ್ವಾತಂತ್ರ್ಯ ಪಡೆಯುವುದನ್ನೇ ಗುರಿಯಾಗಿಟ್ಟುಕೊಂಡಿಲ್ಲದಿದ್ದ ತೆಲುಗು ಕಾವ್ಯವು ಸ್ವಾತಂತ್ರ್ಯ ಪ್ರಾಪ್ತಿಯಿಂದ ಬಹಳವೇನೂ ಪರಿಣಾಮ ಹೊಂದಲಿಲ್ಲ. ಸಮತಾ ಸಿದ್ಧಾಂತಕ್ಕೆ ಬದ್ಧವಾಗಿದ್ದ ಅಲ್ಲಿಯ ಕವಿಗಳು ಆಗ ಸಮಗ್ರ ಬದಲಾವಣೆಗಾಗಿ ಹೋರಾಡುತ್ತಲೇ ಇದ್ದರು. ಜನರನ್ನು ಕೇವಲ ಬ್ರಿಟಿಷ್ ದಬ್ಬಾಳಿಕೆಯಿಂದ ಮುಕ್ತ ಮಾಡುವುದಷ್ಟೇ ಅಲ್ಲ, ದೇಶೀಯ ಜಮೀನ್ದಾರರ, ಸಾಮಂತರಾಜರ ಕ್ರೂರ ಹಿಂಸೆಗಳಿಂದ ಬಿಡುಗಡೆಗೊಳಿಸುವ ಮಹತ್ತರ ಉದ್ದೇಶಕ್ಕಾಗಿ ದುಡಿಯುತ್ತಿದ್ದರು. ತೆಲಂಗಾಣಾ ಹೋರಾಟವು ಅವರ ಕಾರ್ಯರಂಗವಾಗಿತ್ತು. ಕಾವ್ಯರಂಗವೂ ಕೂಡ. ಆಧುನಿಕ ತೆಲುಗು ಸಾಹಿತ್ಯದಲ್ಲಿ ತೆಲಂಗಾಣಾ ಹೋರಾಟ ಕಾವ್ಯವು ಬಹಳ ಮಹತ್ವದ ಸ್ಥಾನ ಪಡೆದಿದೆ. ಇದು ತೆಲುಗು ಕಾವ್ಯವು ಅಂದಿನ ಸಮಕಾಲೀನ ಭಾರತೀಯ ಭಾಷೆಗಳ ಕಾವ್ಯಕ್ಕಿಂತ ಭಿನ್ನವಾಗಿ ಮತ್ತು ಉಜ್ವಲವಾಗಿ ನಿಲ್ಲುವಂತೆ ಮಾಡಿದೆ. ಹಾಗೆಯೇ ಕನ್ನಡಕ್ಕಿಂತ

ಬೇರೆಯಾಗಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ವಿಪ್ಲವ ಕಾವ್ಯ ಅಥವಾ ಸಾಹಿತ್ಯ ಎಂಬುದನ್ನು ಬದುಕಿನಿಂದ ಪ್ರತ್ಯೇಕವಾಗಿ ಭಿನ್ನವಾಗಿ ಇಟ್ಟು ನೋಡಲು ಸಾಧ್ಯವಿಲ್ಲ. ನಾವು ಹೇಗೆ ಬದುಕುತ್ತೇವೆ ಎಂಬುದರ ಮೇಲೆ ನಮ್ಮ ಆಲೋಚನೆಗಳು - ಮಾತುಗಳು, ಮಾತುಗಳ ವ್ಯಕ್ತವಾಗುವ ಸಾಹಿತ್ಯ ನಿಂತಿರುತ್ತದೆ. ಆಲೋಚನೆಗಳು ಮತ್ತು ಬದುಕು ಇವು ಪರಸ್ಪರ ಪೂರಕವಾಗಿ ಪ್ರಭಾವಗಳಾಗಿ ನಡೆದಿರುತ್ತವೆ. ಬದುಕಿನ ರೀತಿಯಲ್ಲಿ ಉಂಟಾಗುವ ಮಾರ್ಪಾಟುಗಳು ನಮ್ಮ ಆಲೋಚನೆಗಳನ್ನು ಪ್ರಭಾವಗೊಳಿಸುತ್ತವೆ. ಕೆಲವೊಮ್ಮೆ ಹೊಸ ಹೊಸ ಆಲೋಚನೆಗಳ ಪ್ರಭಾವ ನಮ್ಮ ಮೇಲಾಗಿ ಆ ಆಲೋಚನೆಗಳು ನಮ್ಮ ಬದುಕಿನ ರೀತಿನೀತಿಗಳನ್ನು ಮಾರ್ಪಡಿಸುತ್ತವೆ. ಈ ಶತಮಾನದ ಪ್ರಾರಂಭದಿಂದ ನಮ್ಮಲ್ಲಿ ಉಂಟಾದ ಪರಿಣಾಮಗಳು - ಬದಲಾವಣೆಗಳು - ಆಧುನಿಕ ಎನ್ನುವಂಥವೆಲ್ಲ ಇದೇ ರೀತಿ ಬಂದವು. ಹೊಸ ವೈಜ್ಞಾನಿಕ ಯುಗವೊಂದು ಈ ರೀತಿ ತಲೆದೋರಿದೆ. ನಾವು ಎಲ್ಲ ಬಗೆಯ ಆಧುನಿಕ ಸೌಲಭ್ಯಗಳನ್ನು ಬಳಸುತ್ತಿದ್ದೇವೆ. ತಂತ್ರಜ್ಞಾನವನ್ನು ಎಲ್ಲ ರಂಗಗಳಲ್ಲಿ ಅಳವಡಿಸಿಕೊಂಡಿದ್ದೇವೆ. ಆದರೆ ಈ ಆಧುನಿಕತೆ ದೇಶದ ಎಲ್ಲ ಜನರಿಗೆ ಲಭ್ಯವಾಗಿಲ್ಲ. ಅಲ್ಲದೆ ಈ ಸೌಲಭ್ಯಗಳನ್ನು ಬಳಸುವ ಎಲ್ಲ ಜನರೂ ವೈಚಾರಿಕವಾಗಿ ಅದೇ ಪ್ರಮಾಣದಲ್ಲಿ ಬೆಳೆದಿಲ್ಲ, ಬದಲಾವಣೆಯಾಗಿಲ್ಲ. ಇದಕ್ಕೆ ಜನಸಾಮಾನ್ಯರಲ್ಲೂ ವೈಚಾರಿಕ ಜಾಗೃತಿ ತಲೆದೋರಬೇಕಾಗಿದೆ. ಈ ಜಾಗೃತೀಕರಣದ ಕೆಲಸದಲ್ಲಿ ಕಲೆ ಸಾಹಿತ್ಯಗಳ ಪಾತ್ರ ಅತಿ ಹೆಚ್ಚಿನದು. ಮೂಲತಃ ಅದು ಜನಸಾಮಾನ್ಯರಿಂದಲೇ ಮೂಡಿಬರಬೇಕಾಗಿದೆ.

ಕನ್ನಡದಲ್ಲಿ ಇಂಥ ಜಾಗೃತೀಕರಣದ ಸಾಹಿತ್ಯಕ್ಕೆ ನೆಲಗಟ್ಟು ಮೂಡಲಿಲ್ಲ. ನಮ್ಮ ನವೋದಯ ಹಾಗೂ ನವ್ಯ ಕವಿಗಳು ಕ್ರಾಂತಿಯನ್ನು - ವೈಚಾರಿಕತೆಯನ್ನು ಪ್ರಯತ್ನ ಪೂರ್ವಕವಾಗಿ ತಡೆಗಟ್ಟಿದರು. ಇತ್ತೀಚಿನ ದಲಿತ ಬಂಡಾಯ ಚಳುವಳಿಗಳೂ ದೊಡ್ಡ ಸದ್ದುಗಳನ್ನು ಮಾಡಿ ಆಮೇಲೆ ತಣ್ಣಗಾಗಿವೆ. ಕೆಲವೊಮ್ಮೆ ಬರಿಯ ಕ್ಲೀಷೆಗಳಾಗಿಯೇ ಉಳಿದುಬಿಟ್ಟಿವೆ. ನಮ್ಮಲ್ಲಿ ಸಾಂಪ್ರದಾಯಿಕ ಶಕ್ತಿಗಳು ಪ್ರಬಲವಾಗಿವೆ ಅಥವಾ ಕವಿಗಳ ಧೋರಣೆ ಕೂಡ ಸಮಗ್ರ ಕ್ರಾಂತಿಯನ್ನು ಬಯಸದೆ ಕೇವಲ ಮೇಲ್ಪದರಿನ ಮಾರ್ಪಾಟುಗಳಿಗೆ ಮಾತ್ರ ಸೀಮಿತವಾಗಿದೆ. ಇರುವ ಹಳೆಯ ವ್ಯವಸ್ಥೆಯೊಡನೆ ನಮ್ಮ ಸಾಹಿತಿಗಳು ರಾಜೀ ಮಾಡಿಕೊಂಡು ಸ್ಥಾನಮಾನಗಳನ್ನುಣ್ಣುತ್ತ ಸಂತೃಪ್ತರಾಗಿದ್ದಾರೆ. ಬಂಡಾಯ, ದಲಿತ, ಸ್ತ್ರೀವಾದಿ ಮುಂತಾದ ಏನೇನೋ ಸಾಹಿತ್ತಿಕ ಕ್ರಾಂತಿಗಳಾದಂತೆ ಕಂಡರೂ ಇವೆಲ್ಲ ನೆಲಮಟ್ಟದಲ್ಲಿ ನಡೆಯುತ್ತಿಲ್ಲ. ಕಾಗದ - ವೇದಿಕೆಗಳಲ್ಲಿ ನಡೆದಂತೆ ಕಾಣುತ್ತಿವೆ. ಫ್ಯಾಷನ್ ಷೋಗಳಂತೆ ವಿಜೃಂಭಿಸುತ್ತಿವೆ. ಇಂಥ ಹಣೆಪಟ್ಟಿ ಹೊಂದಿದವರು ಪ್ರಶಸ್ತಿಯೋ, ಸ್ಥಾನಮಾನವೋ ದೊರೆತ ಮೇಲೆ ತಾವು ಯಾವ ಜನರೊಳಗಿಂದ ಮೇಲೆ ಬಂದರೋ ಅವರನ್ನೇ ದೂರವಿಡುತ್ತಾರೆ. ಇದು ಕನ್ನಡದಲ್ಲಿನ ವಿಪ್ಲವದ ದುರ್ದೆಸೆ.

ಸಮಾಜ ಮತ್ತು ಸಾಹಿತ್ಯಗಳು ವಿಪ್ಲವಾತ್ಮಕವಾಗಿ ಹೇಗೆ ಬೆಳೆಯಬೇಕೆಂಬುದನ್ನು ನಮ್ಮ ಪಕ್ಕದಲ್ಲೇ ಇರುವ ತೆಲುಗು ವಿಪ್ಲವ ಸಾಹಿತ್ಯವನ್ನು ನೋಡಿ ತಿಳಿಯಬೇಕು. ಅಲ್ಲಿಯ ಕವಿಗಳು ವ್ಯವಸ್ಥೆಯನ್ನು ತೀವ್ರವಾಗಿ ವಿರೋಧಿಸುತ್ತಾರೆ. ರಾಜೀ ಮಾಡಿಕೊಳ್ಳಲು ಒಪ್ಪುವುದಿಲ್ಲ. ಶೋಷಿತ ಜನರೊಡನೆ, ಗಿರಿಜನರೊಡನೆ ಬದುಕುತ್ತಾರೆ. ಅವರಿಗಾಗಿ ಅವರ ಮಾತು-ಧಾಟಿಗಳಲ್ಲಿ ಬರೆಯುತ್ತಾರೆ. (ನಮ್ಮಲ್ಲಿ ನವ್ಯರು ತೊಡಿಸಿದ ಮೋಸದ ಮುಸುಗಿನ ವೇಷ ಅವರಲ್ಲಿ ಕಾಣಸಿಗುವುದಿಲ್ಲ - ಸಿಕ್ಕರೂ ವಿಪ್ಲವ ಸಾಹಿತ್ಯದಲ್ಲಿ ಸಿಗುವುದಿಲ್ಲ. ನಮ್ಮಲ್ಲಿ ದಲಿತ - ಬಂಡಾಯವಾದಿಗಳೂ ಈ ಮುಸುಕಿನಿಂದ ಹೊರಬಂದಿಲ್ಲ). ಅವರು ಸಾಮಾಜಿಕ ಕ್ರಾಂತಿಯ ತತ್ವಗಳಿಗಾಗಿ ಬದ್ಧರಾಗಿದ್ದಾರೆ. ಅಂಥ ವಿಚಾರಗಳನ್ನು ಜನರಲ್ಲಿ ಮೂಡಿಸಲು ದುಡಿಯುತ್ತಾರೆ. ಇದಕ್ಕಾಗಿ ವ್ಯವಸ್ಥೆಯು ಅನೇಕ ಬಗೆಗಳಲ್ಲಿ ಅವರನ್ನು ಹಿಂಸಿಸುತ್ತಾ ಬಂದಿದೆ. ಕೆಲವರು ಇಂಥ ಹೋರಾಟದಲ್ಲಿ ಪ್ರಾಣ ತೆತ್ತಿದ್ದಾರೆ. ಕೆಲವರು ಸೆರೆವಾಸ ಅನುಭವಿಸಿದ್ದಾರೆ. ಕೆಲವರು ನೌಕರಿಗಳನ್ನು ಕಳೆದುಕೊಂಡಿದ್ದಾರೆ. ಹಲವಾರು ಕ್ರಾಂತಿಕಾರಿಗಳು ಭೂಗತರಾಗಿ ಕಠೋರ ಬದುಕನ್ನು ಬಾಳುತ್ತಿದ್ದಾರೆ.

ನಮ್ಮ ಕವಿಗಳೂ ಇಂಥ ಧೀರ ಮಾರ್ಗ ಹಿಡಿಯಬೇಕು. ಅದು ಮುಳ್ಳಿನ ದಾರಿ. ಹೇಡಿಗಳ ದಾರಿಯಲ್ಲ. ಕನ್ನಡ ಸಮಾಜವೂ ಅಂಥ ಒಂದು ವಿಪ್ಲವದ ಪರ್ವಕಾಲಕ್ಕಾಗಿ ಕಾಯುತ್ತಾ ಇದೆ.

ಎ. ವೃಷಭೇಂದ್ರಾಚಾರ್
ಕನ್ನಡ ಉಪನ್ಯಾಸಕ
ಎಸ್. ಈ. ಎಸ್. ಮಹಾವಿದ್ಯಾಲಯ. ಸೊಂಡೂರು -೫೮[illegible]೯

## ವಿನೋದ ಗಣಿತ

### ಸೆಪ್ಟೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

೧ರಿಂದ ೫೦ರವರೆಗಿನ ಎಲ್ಲ ಸಂಖ್ಯೆಗಳಿಗೆ ಸಮನಾದ ಸದಸ್ಯತ್ವವುಳ್ಳ ೫೦ ರಾಜಕೀಯ ಪಕ್ಷಗಳಿವೆ. ಇವುಗಳು ಎರಡೆರಡಂತೆ ವಿಲೀನಗೊಂಡು ಕೊನೆಗೊಮ್ಮೆ ಒಂದೇ ಪಕ್ಷ ಉಳಿಯುತ್ತದೆ. ಆದರೆ ಪ್ರತಿ ವಿಲೀನವಾದಾಗಲೂ ವಿಲೀನಗೊಂಡ ಪಕ್ಷ ಒಂದರ ಅಧ್ಯಕ್ಷ ಎಲ್ಲ ಪಕ್ಷಗಳಿಂದ ದೂರವಿರುತ್ತಾನೆ. ಈ ವಿಲೀನ ಪ್ರಕ್ರಿಯೆಯ ಯಾವುದಾದರೊಂದು ಮಜಲಿನಲ್ಲಿರುವ ಎಲ್ಲ ಪಕ್ಷಗಳ ಒಟ್ಟು ಸದಸ್ಯತ್ವ 'ಕ' ಆಗಿರಲಿ. ಹೀಗಿರುವಾಗ ಆ ಮಜಲಿನಲ್ಲಿ ಯಾವುದಾದರೂ ಎರಡು ಪಕ್ಷಗಳು ವಿಲೀನಗೊಂಡರೆ ಹೊಸ ಮಜಲಿನಲ್ಲಿರುವ ರಾಜಕೀಯ ಪಕ್ಷಗಳ ಸಂಖ್ಯೆ ಹಿಂದಿನದಕ್ಕಿಂತ ಒಂದು ಕಡಿಮೆಯಾಗುತ್ತದೆ. ಅಲ್ಲದೆ ಈ ಹೊಸ ಮಜಲಿನಲ್ಲಿರುವ ಎಲ್ಲ ರಾಜಕೀಯ ಪಕ್ಷಗಳ ಸದಸ್ಯತ್ವದ ಒಟ್ಟು ಮೊತ್ತ 'ಕ'ಗಿಂತ ಕೇವಲ ಒಂದು ಕಡಿಮೆ.

ಆರಂಭದಲ್ಲಿ ಇರುವ ೫೦ ಪಕ್ಷಗಳ ಒಟ್ಟು ಸದಸ್ಯತ್ವ ೧೨೭೫ (ಒಂದರಿಂದ ೫೦ರವರೆಗಿನ ಸಂಖ್ಯೆಗಳ ಮೊತ್ತ). ವಿಲೀನೀಕರಣದ ಪ್ರಕ್ರಿಯೆಯಿಂದ ಕೊನೆಗೊಮ್ಮೆ ಒಂದೇ ಪಕ್ಷ ಉದಿಸಿ ಬರಬೇಕಾದರೆ ವಿಲೀನ ಪ್ರಕ್ರಿಯೆಯು ೪೯ ಬಾರಿ ನಡೆಯಬೇಕಾಗುತ್ತದೆ. ಹೀಗಾಗಿ ಆರಂಭದಲ್ಲಿದ್ದ ಒಟ್ಟು ಸದಸ್ಯತ್ವದಲ್ಲಿ ಪ್ರತಿ ವಿಲೀನಕ್ಕೊಂದರಂತೆ ಕ್ಷಯಿಸುತ್ತಾ ಕೊನೆಗೆ ಉಳಿಯುವ ಪಕ್ಷದ ಸದಸ್ಯತ್ವ ೧೨೭೫-೪೯=೧೨೨೬.

### ಈ ತಿಂಗಳ ಪ್ರಶ್ನೆ

ಅಯೋಧ್ಯಾ ನಗರಿಯಲ್ಲಿ ಅಷ್ಟಲಕ್ಷ್ಮಿಗಳಿಗೆ ಪ್ರತಿಯೊಬ್ಬರಿಗೂ ಒಂದರಂತೆ ಎಂಟು ಮಂದಿರಗಳನ್ನು ನಗರದ ಆಸ್ತಿಕ ಮಹಾಶಯರುಗಳು ಕಟ್ಟಿಸಿದ್ದಾರೆ. ಈ ಮಂದಿರಗಳು ಒಂದೇ ಸಾಲಿನಲ್ಲಿದ್ದು ಯಾವುದೇ ಅಕ್ಕಪಕ್ಕದ ಎರಡು ಮಂದಿರಗಳ ನಡುವಣ ದೂರ ೫೦ ಗಜ.

ಆರಂಭದಲ್ಲಿ ಎಂಟು ಭಕ್ತರು ಮಂದಿರಕ್ಕೆ ಒಬ್ಬರಂತೆ ಸೇರಿಕೊಂಡು ಅಲ್ಲಿ ಪೂಜೆ ಮಾಡಿ ವರ ಕೇಳುತ್ತಿರುತ್ತಾರೆ. ಇವರು ಒಂದು ಮಂದಿರದ ಪೂಜೆಯ ನಂತರ, ಆ ಕ್ಷಣದಲ್ಲಿ ತಮತಮಗೆ ತೋಚಿದಂತೆ ಬೇರೊಂದು ಮಂದಿರಕ್ಕೂ ಚಲಿಸಿ ಅಲ್ಲಿಯೂ ಪೂಜಿಸುತ್ತಾರೆ (ಹೀಗೆ ಚಲಿಸುತ್ತಿರುವಾಗ ಒಮ್ಮೆ ಪೂಜೆ ಸಲ್ಲಿಸಿದ ಮಂದಿರಕ್ಕೇ ಮತ್ತೊಮ್ಮೆ ಬರಬಾರದೆಂದೇನಿಲ್ಲ). ಆದರೆ ಈ ಎಲ್ಲ ಚಲನೆಗಳೂ ಒಂದು ಸೂತ್ರಕ್ಕೆ ಒಳಪಡುತ್ತವೆ. ಅದೇನೆಂದರೆ 'ಕ' ಎಂಬ ಭಕ್ತನೊಬ್ಬ ಒಂದು ಮಂದಿರದಿಂದ ಹೊರಟು, ಮಂದಿರದ ಸಾಲುಗಳನ್ನನುಸರಿಸಿ ಬೇರೊಂದು ಮಂದಿರಕ್ಕೆ ಹೋಗಲು (ಅದು ಪಕ್ಕದ ಮಂದಿರವೇ ಆಗಬೇಕೆಂದೇನಿಲ್ಲ) ಕ್ರಮಿಸುವ ದೂರ 'ಯ' ಗಜಗಳಾಗಿರಲಿ. ಈ ಪ್ರಕ್ರಿಯೆಗೆ ಎಣೆಯಾಗಿ ಅದೇ ಸಮಯದಲ್ಲಿ 'ಖ' ಎಂಬ ಬೇರೊಬ್ಬ ಭಕ್ತ ತಾನಿರುವ ಮಂದಿರದಿಂದ 'ಕ' ಚಲಿಸಿದ ವಿರುದ್ಧ ದಿಕ್ಕಿನಲ್ಲಿ 'ಯ' ಗಜ ದೂರವನ್ನು ಕ್ರಮಿಸಿ ಮತ್ತೊಂದು ಮಂದಿರವನ್ನು ಸೇರುತ್ತಾನೆ. ಪ್ರತಿ ಭಕ್ತನ ಚಲನೆಗೆ ಎಣೆ ಎಣೆಯಾಗಿ ಮತ್ತೊಬ್ಬ ಭಕ್ತನ ಚಲನೆ ಮೇಲೆ ಹೇಳಿದಂತೆ ನಡೆಯುತ್ತಿರುತ್ತದೆ.

ಉದಾ : ಯಾವುದೋ ಒಂದು ನಿರ್ದಿಷ್ಟ ಮಂದಿರದಿಂದ ಹೊರಟ ಒಬ್ಬ ಭಕ್ತ ತಾನಿದ್ದ ಮಂದಿರದಿಂದ ಬಲಕ್ಕಿರುವ ಮೂರನೆಯ ಮಂದಿರವನ್ನು ಪ್ರವೇಶಿಸಿದರೆ ಅದೇ ಸಮಯದಲ್ಲಿ ಬೇರೊಂದು ಮಂದಿರದಲ್ಲಿದ್ದ ಭಕ್ತನು ತಾನಿದ್ದ ಮಂದಿರದ ಎಡಕ್ಕಿರುವ ಮೂರನೆ ಮಂದಿರವನ್ನು ಪ್ರವೇಶಿಸುತ್ತಾನೆ.

ಎಂಟು ಭಕ್ತರು ಈ ಪರಿಯಾಗಿ ದೇವಿ ದರ್ಶನವನ್ನು ಪಡೆಯುತ್ತಿರುವಾಗ ಯಾವುದಾದರೊಂದು ಸಂದರ್ಭದಲ್ಲಿ ಎಂಟು ಮಂದಿಯೂ ಒಂದೇ ಮಂದಿರವನ್ನು ಪ್ರವೇಶಿಸಿ, ಒಮ್ಮೆಲೇ ಎಂಟು ಮಂದಿಗೂ ವರ ನೀಡುವಂತೆ ಆ ಮಂದಿರದ ದೇವಿಯ ಮೇಲೆ ಒತ್ತಡ ತರಲು ಸಾಧ್ಯವೇ ?

**ಸ್ಪಷ್ಟನೆ** : ಸೆಪ್ಟೆಂಬರ್ ತಿಂಗಳ ವಿನೋದ ಗಣಿತದ ಅಂಕಣದಲ್ಲಿ ಆಗಸ್ಟ್ ತಿಂಗಳ ಪ್ರಶ್ನೆಗೆ ಉತ್ತರವಿದೆ. ಆದರೆ ಅದರಲ್ಲಿ ಮುದ್ರಣ ದೋಷ ಬಂದಿದೆ. ಆಗಸ್ಟ್ ತಿಂಗಳ ಪ್ರಶ್ನೆಗೆ **ಸರಿಯಾದ ಉತ್ತರ** : ೧, ೩, ೯, ೨೭ಗಳನ್ನುಳ್ಳ ಸಂಖ್ಯಾಗಣ.

ಈ ಉತ್ತರಕ್ಕೆ ವಿರುದ್ಧವಾದ ಅರ್ಥವಿರುವ ಉತ್ತರವನ್ನು ಮುದ್ರಿಸಲಾಗಿತ್ತು. ಈ ಉತ್ತರದ ನಂತರ ಬರುವ ಒಕ್ಕಣೆಯಲ್ಲಿ ನಾಲ್ಕಕ್ಕಿಂತ ಕಡಿಮೆ ಗಾತ್ರ (ಉದಾ : ಗಾತ್ರ ೩ ಇದ್ದರೆ) ಇರುವ ಸಂಖ್ಯಾ ಸಮೂಹದಿಂದ ಆಗಸ್ಟ್ ತಿಂಗಳ ಪ್ರಶ್ನೆಗೆ ಉತ್ತರ ದೊರಕುವುದಿಲ್ಲ ಎಂಬುದನ್ನು ವಿವರಿಸಲಾಗಿತ್ತು.

ಮೂಲ ತೆಲುಗು : ಪಿ. ಸತ್ಯವತಿ



# ದೇವರು

ನಮ್ಮ ಯಜಮಾನರು ಸದ್ಗುಣ ಸಂಪನ್ನರೆಂದೂ, ನನ್ನನ್ನು ಹೆಂಡತಿಯನ್ನಾಗಿ ಮಾತ್ರ ಪರಿಗಣಿಸದೆ, ಸ್ನೇಹಿತೆಯಂತೆ ನೋಡ್ಕೋತಾರೆಂದೂ, ನನ್ನೊಂದಿಗೆ ಎಲ್ಲ ವಿಧದಲ್ಲೂ ಸಹಕರಿಸ್ತಾರೆಂದೂ, ನಿಜವಾಗಿಯೂ ಆತ ನನ್ನ ಪಾಲಿನ 'ದೇವರು' ಎಂದೂ ನನ್ನ ಕೊಲೀಗ್ಸ್ ತುಂಬಾ ಮಂದಿ ಮಾತ್ರವಲ್ಲ, ನಮ್ಮ ನೆಂಟರೂ ಹೇಳ್ತಿರ್ತಾರೆ.

ಅವರು ಹಾಗಂದಾಗ ನಿಜವಾಗ್ಲೂ ನನಗೆ ಸ್ವಲ್ಪ ಗರ್ವ ಬರುತ್ತೆ, ಏಕೆಂದರೆ ನಿಜವಾಗ್ಲೂ ಕೃಷ್ಣಮೂರ್ತಿ ಒಳ್ಳೆಯವರು.

ಬಹಳ ಜನರಂತೆ ಕುಡಿಯೋದಿಲ್ಲ, ಸಿಗರೇಟ್ ಸೇದೋದಿಲ್ಲ, ಆಫೀಸಿನಿಂದ ಬರೋವಾಗ ತರಕಾರಿ, ಇತರೆ ಸಾಮಾನು ತರ್ತಾರೆ. ಮಗಳ ಕೈಲಿ ಹೋಂವರ್ಕ್ ಮಾಡಿಸ್ತಾರೆ. ಅಡಿಗೆ ಮಾಡಲು ನನಗೆ ಕೈಲಾಗದ ದಿನ ಉಪ್ಪಿನಕಾಯಿ-ಮೊಸರಿನೊಂದಿಗೆ ಅಡ್ಜಸ್ಟ್ ಮಾಡ್ಕೋತಾರೆ. ನನ್ನನ್ನು 'ಏನೇ' ಅಂತ ಸಂಬೋಧಿಸೋದಿಲ್ಲ. ನಾನು ಅವರನ್ನ ಹೆಸರು ಹಿಡಿದು ಕರೆದರೂ ಸುಮ್ನಿರ್ತಾರೆ. ಅವರ ಆಲೋಚನೆಗಳೂ ಅವರ ಯೋಜನೆಗಳೂ ನನಗೆ ತುಂಬಾ ಹಿಡಿಸುತ್ತೆ. ಕೊನೆಗೆ ನಾನು ಹೇಗೆ ಉದ್ಯೋಗ ಮಾಡ್ಬೇಕು ಅನ್ನೋದನ್ನ ಸಹಾ ಅವರೇ ಹೇಳ್ತಾರೆ. ಯಾರೊಂದಿಗೆ ಹೇಗೆ ಮಾತಾಡಬೇಕೋ, ಹೇಗೆ ನಡ್ಕೋಬೇಕೋ ಅವರೇ ನನಗೆ ಕಲಿಸಿದ್ದು. ಅವರು ಅದೆಲ್ಲವನ್ನೂ ನನಗೆ ಕಲಿಸದೇ ಹೋದರೆ ಅಮಾಯಕಳಾದ ನಾನು ಯಾವುದೋ ತೊಂದರೆಗೆ ಸಿಕ್ಕಿಹಾಕ್ಕೊಂಡುಬಿಡ್ತೀನಿ ಎಂದು ಅವರಿಗೆ ಭಯ. ನಿಜವಾಗ್ಲೂ ನಾನು ಆಲೋಚನೆ ಮಾಡಬೇಕಾದ ಅಗತ್ಯವೇ ಇಲ್ಲ. ನನ್ನ ಬದಲು ಅವರೇ ಆಲೋಚಿಸ್ತಾರೆ.

ಹೀಗೆ ನಮ್ಮ ಜೀವನ ಸುಖವಾಗಿ ಸಾಗಿ ಹೋಗ್ತಿರಬೇಕಾದರೆ, ಒಂದು ಸಂಜೆ ರಿಕ್ಷಾದಿಂದ ಇಳಿದಳು ನನ್ನ ಸ್ನೇಹಿತೆ ವಸಂತ ಅಕಸ್ಮಾತ್ತಾಗಿ. ವಸಂತಾನ ಗುರ್ತು ಹಿಡಿಯೋದು ಸ್ವಲ್ಪ ಕಷ್ಟವೇ ಆಯ್ತು. ದಪ್ಪಗಿದ್ದ ವಸಂತ ಸಣ್ಣಗಾಗಿಹೋದದ್ದರಿಂದ. ಬಹಳ ಕಾಲವಾದನಂತರ ಭೇಟಿಯಾದದ್ದಕ್ಕೆ ಸಂತೋಷಪಟ್ಟು ಆಕೆಯನ್ನು ನಮ್ಮೆಜಮಾನರಿಗೆ ಪರಿಚಯ ಮಾಡಿಸಿದೆ. ಚಿಕ್ಕಂದಿನಲ್ಲಿ ಇಬ್ಬರೂ ನಮ್ಮ ಊರಿನ ಜಿಲ್ಲಾ ಪರಿಷತ್ ಹೈಸ್ಕೂಲ್‌ನಲ್ಲೂ, ನಂತರ ಗುಂಟೂರು ವಿಮೆನ್ಸ್ ಕಾಲೇಜಿನಲ್ಲೂ ಒಟ್ಟಿಗೆ ಓದಿದ ವಿಷಯ ತಿಳಿಸ್ದೆ. ಬಹುಶಃ ತವರು ಮನೆಯಿಂದ ತನ್ನ ಮನೆಗೋ, ತನ್ನ ಮನೆಯಿಂದ ತೌರು ಮನೆಗೋ ಹೋಗುವ ದಾರಿಯಲ್ಲಿ ಇಲ್ಲಿ ಇಳಿದಿರಬೇಕೆಂದುಕೊಂಡೆ. ಏನಾದರಾಗಲೀ ಆಕೆ ಹೀಗೆ ಬಂದದ್ದು ನನಗೆ ತುಂಬಾ ಸಂತೋಷವಾಯಿತು. ನಾನು ಈ ಊರಿಗೆ ಬಂದು, ಒಂದು ಮನೆ ಮಾಡಿಕೊಂಡನಂತರ ನನ್ನ ಸ್ನೇಹಿತರು ಅಂತ ಯಾರೂ ಬಂದು ಎರಡು ದಿವಸಗಳಿರಲಿಲ್ಲ.

ಇಬ್ಬರೂ ಕಾಫಿ ಕುಡಿಯುತ್ತಾ ಮಾತನಾಡಲು ಪ್ರಾರಂಭಿಸಿದಾಗ ಕೇಳಿದೆ: ''ಎಲ್ಲಿಂದ ಎಲ್ಲಿಗೆ ಹೋಗ್ತಾ ಇಲ್ಲಿ ಇಳ್ದೆ ?''

''ನಮ್ಮ ತಂದೆಯವರ ಮನೆಯಿಂದ ಬರ್ತಿದ್ದೀನಿ. ಇಲ್ಲಿಗೇ ಬಂದೆ. ಯಾಕೆ ಇಷ್ಟು ದೊಡ್ಡ ಸೂಟ್‌ಕೇಸ್‌ನೊಂದಿಗೆ ಬಂದೆ ಅಂತಾ ?'' ಎಂದಳು.

ಸಾಧಾರಣವಾಗಿ ಎಲ್ಲರೂ ತೌರುಮನೆಯಿಂದ ಬರ್ತೀನಿ ಅಂತಾರೆ. ಹೀಗೆ ತಂದೆ ಮನೆಯಿಂದ ಅಂತ ಅನ್ನೋದಿಲ್ಲ.

''ನೀನು ಹತ್ತು ದಿವಸಗಳು ಇರ್ತೀನಿ ಅಂದ್ರೆ ಸಂತೋಷ ಅಲ್ವಾ ? ಹಾಗೆಲ್ಲಾ ಮಾತಾಡ್ಬೇಡ'' ಎಂದೆ. ಅವಳು ಬಂದಿದ್ದಾಳೆಂದು ನಾಲ್ಕು ದಿವಸ ರಜೆ ಹಾಕ್ದೆ. ವಸಂತ ಬಂದದ್ದು ನನಗೆ ತುಂಬಾ ಸಂತೋಷವಾಗಿತ್ತು ನಿಜವಾಗ್ಲೂ. ಕಳೆದ ದಿವಸಗಳು, ಆಗಿನ ಮಾತುಗಳು, ಕನಸುಗಳು, ಚೇಷ್ಟೆ ಎಲ್ಲಾ ಜ್ಞಾಪಕ ಬಂದು, ಹತ್ತು ವರ್ಷ ಚಿಕ್ಕವಳಾದಂತೆ ಅನ್ನಿಸಿತು. ಹೀಗೆ ಆಗಾಗ ಸ್ನೇಹಿತರ ಭೇಟಿಯಾಗದಿದ್ರೆ ಸಂಸಾರದಲ್ಲಿ ಸಿಕ್ಕಿ ಯಂತ್ರದಂತೆ ಬದುಕಿ ಬೇಗನೆ ಮುದುಕರಾಗಿಬಿಡ್ತೇವೆ ಅನ್ನಿಸಿತು. ಆದರೆ ವಸಂತ ಸಂತೋಷವಾಗಿರುವಂತೆ ಕಾಣಿಸಲಿಲ್ಲ. ಬಹಳ ಸೀರಿಯಸ್ಸಾಗಿ ನಗು ಮುಖವೇ ಇಲ್ಲದಂತಿದ್ದಳು. ಆಗಲೆಲ್ಲಾ ನಗನಗ್ತಾನೇ ಮಾತಾಡ್ತಿದ್ದವಳು ಈಗ ಹೀಗೇಕೆ ಎನ್ನಿಸಿತು.

ಅಂದು ರಾತ್ರಿ ಕೃಷ್ಣಮೂರ್ತಿ ಕೇಳಿದರು : ''ಏನು ನಿನ್ನ ಫ್ರೆಂಡ್ ಎಷ್ಟು ದಿವಸ ಇರ್ತಾಳೆ ? ಅಷ್ಟು ದೊಡ್ಡ ಸೂಟ್‌ಕೇಸ್ ತಂದಿದ್ದಾಳೆ.'' ಅವರು ಹಾಗೆ ಕೇಳಿದ್ದು ನನಗೆ ಬೇಸರವಾಗಿ ಮಾತನಾಡ್ದೆ ಸುಮ್ಮನಿದ್ದೆ. ಆ ದಿನ ಸಂಜೆನೇ ನಮ್ಮ ತಾಯಿ ಸಹಾ ಬಂದಿದ್ರು. ಅವರಿಗೆ ಮೈ ಸ್ವಾಸ್ಥ್ಯವಿದ್ದಂತಿರಲಿಲ್ಲ. ಜ್ವರ ಸಹ ಇತ್ತು. ಅಮ್ಮ ನಮ್ಮ ಊರಲ್ಲಿ ಒಬ್ರೇ ಇರ್ತಿದ್ರು. ಮನೆಯಲ್ಲಿನ ಎರಡು ಪೋರ್ಷನ್ ಬಾಡಿಗೆಗೆ ಕೊಟ್ಟಿದ್ದರು. ಆ ಬಾಡಿಗೆಯಿಂದ ತನ್ನ ಖರ್ಚು. ತಂದೆಯವರ ಪ್ರಾವಿಡೆಂಟ್ ಫಂಡ್ ಹಣ ಬ್ಯಾಂಕಿನಲ್ಲಿತ್ತು. ಅದಕ್ಕೆ ಬಡ್ಡಿ ಬರುತ್ತಿತ್ತು. ಆಕೆಗೆ ಯಾವ ರೀತಿಯ ಆರ್ಥಿಕ ತೊಂದರೆಯೂ ಇರಲಿಲ್ಲ. ಒಂಟಿಯಾಗಿರ್ತಿದ್ದು, ಎಂಬುದನ್ನು ಬಿಟ್ಟರೆ.

''ನಿಮ್ಮ ತಾಯಿ ನಿಮ್ಮ ಅಣ್ಣನ ಜೊತೆಯಲ್ಲಿರದೆ, ಹಾಗೆ ಒಬ್ಬರೇ ಯಾಕಿರ್ಬೇಕು ?'' ಎನ್ನುತ್ತಿದ್ದರು ಆಗಾಗ. ನಾನು

ಅದು ನಿಜವೇ ಅಂದ್ಕೋತಿದ್ದೆ. ಅಮ್ಮ ನಮ್ಮನೆಗೆ ಆಗಾಗ ಬರ್ತಾ ಇರ್ತಾರೆ. ಬರುವಾಗ ನನಗೆ ಪುಡಿಗಳು, ಉಪ್ಪಿನಕಾಯಿ, ಭಕ್ಷ್ಯಗಳನ್ನು ತರ್ತಾ ಇದ್ರು. ಮೊಮ್ಮಗಳನ್ನ ನೋಡದೆ ಇರಲು ಅವರಿಂದ ಆಗ್ತಿರಲಿಲ್ಲ. ನನ್ನ ಮಗಳಿಗೆ ಅಜ್ಜಿ ಮೇಲೆ ತುಂಬಾ ಪ್ರೀತಿ. ಹತ್ತು ದಿವಸಗಳು ಅಮ್ಮ ಇದ್ರೆ ಸಹ ಕೃಷ್ಣಮೂರ್ತಿಗೆ ಹಿಡಿಸ್ತಾ ಇರಲಿಲ್ಲ. ಅದರಿಂದ ಆಕೆ 'ಹೋಗ್ತೀನಿ' ಅಂದಾಗ ನಾನು ಬೇಡವೆನ್ನುತ್ತಿರಲಿಲ್ಲ.

ಯಾವ ತಾಯಿ ತನ್ನ ಮಗಳ ಮನೇಲಿರ್ತಾರೆ ! ತಾಯಿ-ತಂದೆ ಇರಬೇಕಾದ್ದು ಗಂಡು ಮಕ್ಕಳ ಹತ್ತಿರಾನೇ !

''ನೀನು ಆಫೀಸಿಗೆ ಹೋಗು ಸುಮತಿ ! ಅಮ್ಮ ನನ್ನ ಜೊತೆಗಿರ್ತಾರೆ. ನಾನು ಅವರಿಗೆ ಜೊತೆಯಾಗಿರ್ತೀನಿ'' ಎಂದಳು ವಸಂತ.

ನಾನು ಆಫೀಸಿನಿಂದ ಬರುವ ವೇಳೆಗೆ ಮನೆಯೆಲ್ಲವನ್ನೂ ಶುಭ್ರಪಡಿಸಿ ಓರಣವಾಗಿಟ್ಟಿದ್ದಳು. ಮಗೂಗೆ ಸ್ನಾನ ಮಾಡಿಸಿದ್ದಳು. ರಾತ್ರಿ ಅಡಿಗೆ ಸಿದ್ಧಪಡಿಸಿಟ್ಟಿದ್ದಳು.

''ಇವೆಲ್ಲಾ ಯಾಕೆ ಮಾಡ್ದೆ ವಸಂತಾ ! ನಾನು ಬಂದು ನೋಡ್ಕೋತಾ ಇದ್ದೆನಲ್ಲಾ !'' ಎಂದೆ.

''ಈ ಕೆಲಸವೆಲ್ಲಾ ನನಗೆ ಅಭ್ಯಾಸಾನೇ ! ಇನ್ನೂ ಹೆಚ್ಚು ಕೆಲಸ ಮಾಡ್ತೀನಿ ಅಲ್ಲಿ'' ಎಂದಳು.

'ಅಲ್ಲಿ' ಅಂದರೆ ತನ್ನ ಮನೇಲಿ ! ವಸಂತ ತಪ್ಪಿಯೂ ಸಹ ನನ್ನ ಮನೆ ಅನ್ನದೆ ಅಲ್ಲಿ ಅಂತಾಳೆ.

ಊಟ ಮುಗಿದ ನಂತರ, ಎಲ್ಲರೂ ಮಲಗಿದ ಮೇಲೆ, ನಾನು ವಸಂತಾ ವರಾಂಡಾದಲ್ಲಿ ಕುರ್ಚಿಗಳನ್ನು ಹಾಕಿಕೊಂಡು ಕುಳಿತೆವು. ಅವಳು ನನ್ನೊಂದಿಗೆ ಏನೋ ಹೇಳಬೇಕೆಂದು ಪ್ರಯತ್ನಿಸುತ್ತಿದ್ದಾಳೆಂದು ತಿಳಿದುಕೊಂಡು ಸಿದ್ಧವಾಗಿ ಕುಳಿತೆ.

ವಸಂತ ಹೇಳಲು ಪ್ರಾರಂಭಿಸಿದಳು. ಬಹಳ ಗಾಂಭೀರ್ಯದಿಂದ ಒಂದು ತೊಟ್ಟು ಕಣ್ಣೀರನ್ನೂ ಸುರಿಸದೆ ಹೇಳಿದಳು. ನಾನು ಕೇಳಿದೆ, ಕೇಳುತ್ತಿದ್ದಷ್ಟು ಹೊತ್ತು ಸೆರಗಿನ ಕೊನೆಯಿಂದ ಕಣ್ಣುಗಳನ್ನು ಒರೆಸಿಕೊಳ್ಳುತ್ತಲೇ ಇದ್ದೆ. ಹೇಳಿದ್ದು ಮಾತ್ರವಲ್ಲ, ಬೆನ್ನಿನ ಮೇಲಿನ ಬರೆಗಳು ಕಂದಿಹೋದದ್ದನ್ನೂ ತೋರಿಸಿದಳು. ನಿದ್ದೆ ಇಲ್ಲದ್ದರಿಂದ ಕಣ್ಣಿನ ಕೆಳಗೆ ಕಪ್ಪು ಬಣ್ಣ ಆಗಿದ್ದುದನ್ನೂ ತೋರಿಸಿದಳು. ಈ ಹಿಂಸೆ ಎಲ್ಲಾ ವರದಕ್ಷಿಣೆಗಾಗಿ ಅಲ್ಲ.

ಹೆಂಡತಿಯನ್ನು ಸ್ವಲ್ಪ ಹಿಂಸಿಸದೆ ಹೋದರೆ ಹೇಗೆ ಅನ್ನುವ, ಸ್ವಭಾವಸಿದ್ಧವಾದ ಹಿಂಸೆ. ಸ್ವಲ್ಪ ಆಕೆಯ ಮೇಲಿನ ಅನುಮಾನದಿಂದ ನಡೆಯುವ ಹಿಂಸೆ. ಅವಳ ಬಗ್ಗೆ ಎಳ್ಳಷ್ಟೂ ಪ್ರೇಮವಿಲ್ಲ. ಕಿಂಚಿತ್ ಕರುಣೆಯಿಲ್ಲ. ಸ್ನೇಹವಂತೂ ಇಲ್ಲವೇ ಇಲ್ಲ. ಹಾಗಿರುವಾಗ ಆಕೆಯ ಶರೀರದ ಅಗತ್ಯವಾದರೂ ಏನು ? ಆದರೆ, ಅವಳ ಮೇಲಿನ ಅಧಿಕಾರ ಸಾರಲು ಅವಳ ದೇಹ ಆತನದು. ಆತನಿಷ್ಟ. ಅಂತಹ ಅವಮಾನಗಳಿಂದ, ಅಸಹ್ಯದೊಳಗಿನಿಂದ, ಹಿಂಸೆಯಿಂದ ಇಬ್ಬರು ಮಕ್ಕಳು ಲೋಕಕ್ಕೆ ಬಂದರು. ಆದರೆ ಆ ಮಕ್ಕಳನ್ನು ಅವಳು ಎಷ್ಟು ಪ್ರೀತಿಸಿದರೂ, ಅವರನ್ನು ಅವಳ ಹತ್ತಿರ ಹೋಗದಂತೆ ತಡೆಯುತ್ತಾನೆ. ಅವಳ ಮೇಲೆ ಮಕ್ಕಳಿಗೆ ಅಸಹ್ಯ ಹುಟ್ಟುವಂತೆ ಮಾಡುತ್ತಾನೆ. ಬದುಕು 'ದಿನಗಂಡ'ವಾಯಿತು. ಅಲ್ಲಿರಲಾರೆನೆಂದು ತಾಯಿಯೊಂದಿಗೆ ಹೇಳಿದಳು. ಅಮ್ಮ ಅಪ್ಪನೊಂದಿಗೆ ಹೇಳಿದಳು. ಅಪ್ಪ 'ಬಾ' ಎನ್ನಲಿಲ್ಲ, ಒಳ್ಳೆಯ ಊಟ ಹಾಕಿ, ವಿನಯ-ವಿಧೇಯತೆ ಪ್ರದರ್ಶಿಸಿ, ಅಂದ-ಚಂದ ತೋರಿಸಿ ಗಂಡನನ್ನು ಬುಟ್ಟಿಯೊಳಗೆ ಹಾಕಿಕೊಳ್ಳಲಾಗದ ಬೆಪ್ಪಳು ಎಂದರು. ತಾನು ವಿನಯ ವಿಧೇಯತೆಯಿಂದ ಇಷ್ಟು ವರ್ಷಗಳು ಇರುವುದರಿಂದಲೇ ತನ್ನ ಮಕ್ಕಳು ಸುಖವಾಗಿರುವರೆಂದೂ, ವಿಚ್ಛೇದನ, ಗಂಡನ್ನ ಬಿಟ್ಟು ಹೋಗೋದು ಇವೆಲ್ಲಾ ನಮ್ಮ ವಂಶದಲ್ಲೇ ಇಲ್ಲವೆಂದೂ ಅಮ್ಮ ಅಂದರು. ಸಹನೆಯಿಂದ ಬದುಕು ಎಂದರು. ಶಿರಡಿ ಸಾಯಿಬಾಬಾ ವಿಭೂತಿ ಕೊಟ್ಟು, ದಿನಾ ರಾತ್ರಿ ಹಣೆಗೆ ಇಟ್ಕೋ ಎಂದು ಉಪದೇಶಿಸಿದರು.

ಕನಕದುರ್ಗ ಅಮ್ಮನವರ ಪೂಜೆಯ ಕುಂಕುಮ ಕೊಟ್ರು. ಪೂಜಾರಿಗೆ ಹೇಳಿ ರಕ್ಷೆ ಕಟ್ಟಿಸಿದರು. ಪ್ರತಿ ಶನಿವಾರ ತನಗಾಗಿ ಅಮ್ಮ ಉಪವಾಸವಿರ್ತೀನಿ ಅಂದ್ರು. ತನ್ನ ಸಂಸಾರ ನೆಟ್ಟಗಾದರೆ ಆ ಸ್ವಾಮಿಗೆ ಕಲ್ಯಾಣೋತ್ಸವ ಮಾಡಿಸ್ತೀನಿ, ಧೈರ್ಯವಾಗಿರು ಅಂದ್ರು. ಅಪ್ಪ ಸಾವಿರ ರೂಪಾಯಿ ಕೊಟ್ಟು ರೇಷ್ಮೆ ಸೀರೆ ತಂದ್ರು. ಅಣ್ಣ ಸಿನಿಮಾಗೆ ಕರ್ಕೊಂಡು ಹೋದ್ರು. ಅಮ್ಮ ಲಾಡು, ಕಜ್ಜಾಯ ಮಾಡಿಕೊಟ್ರು. ಅಣ್ಣ ಕರ್ಕೊಂಡು ಬಂದು ಬಿಟ್ಟುಹೋದ. ಅಮ್ಮ ಹೇಳಿದ ವಿನಯ, ವಿಧೇಯತೆ, ಅಂದ, ಊಟ, ಎಲ್ಲ ತನ್ನನ್ನು ಮತ್ತಷ್ಟು ಕೀಳಾಗಿಸಿತು. ಹಿಂಸೆ ಇನ್ನೂ ಹೆಚ್ಚಾಯಿತು. ಅನುಮಾನ ಭೂತದಂತಾಯಿತು. ಪುನಃ ಹೋದದ್ದು ತೌರುಮನೆಗಲ್ಲ, ತಂದೆಯ ಮನೆಗೆ. ಅದೇ ಬೋಧನೆ, ಪುನಃ ಅದೇ ಮಾತುಗಳು. ಈ ಬಾರಿ ತಂದೆ ಜೊತೆಯಲ್ಲಿ ಬಂದು ಬಿಟ್ಟುಬರುತ್ತೇನೆಂದರು. ''ಅಗತ್ಯವಿಲ್ಲ, ನಾನೇ ಹೋಗ್ತೀನಿ ಎಂದು ಹೇಳಿ ಇಲ್ಲಿ ಇಳಿದೆ.''

''ಕತ್ತೆಗೆ ತುಂಬಾ ಸಹನೆ ಅಂತಾರೆ. ನಾನು ಕತ್ತೆಗಿಂತ ಹೆಚ್ಚು ಸಹನೆ ವಹಿಸಿದೆ. ಕತ್ತೆಗಿಂತ ಹೀನವಾಗಿ ಬದುಕಿದೆ. ಆದರೆ ಇನ್ನು ನನ್ನಿಂದಾಗದು. ನಾನೇನು ತಪ್ಪು ಮಾಡ್ದೆ ಅಂತ ಹಾಗೆ ಶಿಕ್ಷೆ ಅನುಭವಿಸಬೇಕು ? ನನಗೆ ಸಾವೊಂದೇ ದಾರಿ ಇದರಿಂದ ತಪ್ಪಿಸಿಕೊಳ್ಳಲು ! ಆದರೆ ನನಗೆ ಸಾಯ ಬೇಕೆಂದಿಲ್ಲ. ನನ್ನ ಮಕ್ಕಳನ್ನು ಕರ್ಕೊಂಡು ಬಂದು ಯಾವುದಾದರೂ ಉದ್ಯೋಗ ಮಾಡಿ ಬದುಕ ಬೇಕೆಂದಿದೆ. ಅದಕ್ಕೆ ನೀನು ಸಹಾಯ ಮಾಡ್ತೀ ಅಂತ ಬಂದೆ'' ಎನ್ನುತ್ತಾ ತನ್ನ ಕಥೆ ಮುಗಿಸಿದಳು ವಸಂತ.

''ಅಯ್ಯೋ, ನಿನಗೆ ಸಹಾಯ ಮಾಡಬೇಕಾದದ್ದು ನನ್ನ ಕರ್ತವ್ಯ ವಸಂತ ! ಕೇಳೋದಕ್ಕೆ ಕಷ್ಟವಾಗಿದೆ. ನೀನು ಹೇಗೆ ಸಹಿಸ್ಕೊಂಡ್ಯೋ ಏನೋ !'' ಎಂದು ಅವಳನ್ನು ಸಮಾಧಾನಪಡಿಸಿದೆ.

''ನಮ್ಮ ಸ್ನೇಹಿತೆಯರೆಲ್ಲರಿಗಿಂತ ನೀನು ಒಳ್ಳೇ ಸ್ಥಿತೀಲಿದ್ದಿ. ನಿಮ್ಮ ಯಜಮಾನರ ಸಮಕ್ಕೆ ನೀನೂ ಸಂಪಾದಿಸ್ತಿದ್ದೀ. ಆತ ನಿನ್ನನ್ನು ಚೆನ್ನಾಗಿ ನೋಡ್ಕೋತಾ ಇದ್ದಾರೆ. ನೀನೇ ನನಗೊಂದು ದಾರಿ ತೋರಿಸ್ತೀಯಾ ಅನ್ನೋ ನಂಬಿಕೆಯಿಂದ ಬಂದಿದ್ದೀನಿ. ನನಗ್ಯಾವುದಾದರೂ ಸಣ್ಣ ಕೆಲಸ ಕೊಡಿಸು, ಮಕ್ಕಳನ್ನು ಕರ್ಕೊಂಡು ಬಂದು ಹೇಗೋ ಬದುಕ್ತೀನಿ'' ಎಂದಳು.

''ಖಂಡಿತವಾಗಿ ನೋಡೋಣ. ನಾಳೆ ಕೃಷ್ಣಮೂರ್ತಿಗೆ ಎಲ್ಲಾ ಹೇಳ್ತೀನಿ. ಆತನೂ ಏನಾದರೂ ದಾರಿ ಹುಡುಕ್ತಾರೆ. ನೀನು ಹಾಯಾಗಿರು. ಕೆಲಸ ಸಿಗುವವರೆಗೂ ಇದು ನಿನ್ನ ಮನೇನೇ ಅಂತ ತಿಳ್ಕೋ'' ಎಂದೆ.

ಮಾರನೆಯ ದಿವಸ ಅವಳ ಮುಖದಲ್ಲಿ ಸ್ವಲ್ಪ ಕಾಂತಿ ಕಂಡಿತು. ಬೇಕೆಂದೇ ಮನೆಯ ಕೆಲಸದ ಭಾರವನ್ನೆಲ್ಲಾ ತಾನೇ ಹೊತ್ತಳು ವಸಂತ, ನಾನು ಬೇಡವೆಂದರೂ.

ಅಂದು ಸಂಜೆ ವಸಂತಳ ಕಥೆ ಎಲ್ಲಾ ಕೃಷ್ಣಮೂರ್ತಿಗೆ ಹೇಳಿದೆ. ಅವಳು ನನಗೆ ಹೇಗೆ ಹೇಳಿದಳೋ ನಾನೂ ಅದೇ ರೀತಿ ಹೇಳಿದೆ. ಆದರೆ ಅವರು ನನ್ನಂತೆ ಕಣ್ಣುಗಳನ್ನು ಒರೆಸಿಕೊಳ್ಳಲೂ ಇಲ್ಲ, ವಿಚಲಿತರಾಗಲೂ ಇಲ್ಲ.

''ಆಕೆ ಬಂದದ್ದರ ಕಾರಣ ಅದೂ ಅನ್ನು. ಚೆನ್ನಾಗಿದೆ, ದಾರಿಯಲ್ಲಿ ಹೋಗೋ ಮಾರೀನ ಮನೆಗೆ ಆಹ್ವಾನಿಸಬೇಡ. ಇಂಥದ್ದೆಲ್ಲಾ ನಡೀತಾನೇ ಇರುತ್ತೆ, ಹೊಸದೇನಿದೆ ? ಆದರೂ ತಾಯಿ-ತಂದೆಗಿಲ್ಲದ ಸಂಕಟ ನಿನಗ್ಯಾಕೆ ? ಅದಕ್ಕೇ ನೀನು ಬರೀ ಅಮಾಯಕಳು ಅನ್ನೋದು. ಹೇಳಿದ್ದೆಲ್ಲಾ ನಂಬಿಬಿಟ್ಟೆ. ಎರಡು ಕೈಗಳೂ ಸೇರಿದರೇನೇ ಚಪ್ಪಾಳೆ. ಆತ ಅಷ್ಟು ಕ್ರೂರವಾಗಿ ವರ್ತಿಸಬೇಕಾದ್ರೆ, ಈಕೆ ಏನು ಮಾಡಿದ್ಲೋ. ನನ್ನ ಮಾತು ಕೇಳಿ ನಾಲ್ಕು ಒಳ್ಳೇ ಮಾತಾಡಿ, ನಿಮ್ಮ ತಾಯಿಯ ಜೊತೆ ಊರಿಗೆ ಕಳಿಸು. ಅವರ ಅಮ್ಮ-ಅಪ್ಪ ನೋಡ್ಕೋತಾರೆ'' ಎಂದರು.

ನನಗೆ ಆಶ್ಚರ್ಯವಾಯ್ತು. ನಾನು ಮೊದಲಬಾರಿಗೆ ಅವರ ಮಾತುಗಳಿಂದ ದಿಗ್ಭ್ರಾಂತಳಾದೆ. ಅವರ ಮಾತುಗಳು 'ಕಹಿ' ಅನಿಸಿತು. ನಾನು ಇಂದಿನವರೆಗೂ ಆತನಿಗೆ ಎದುರು ಜವಾಬು ಹೇಳಿರಲಿಲ್ಲ, ವಾದಿಸಿರಲಿಲ್ಲ. 'ಊಂ' ಎನ್ನುವುದು ಮಾತ್ರವೇ ನನಗೆ ಗೊತ್ತು. ಆತನಿಗೆ ಹೇಗೆ ಹೇಳಬೇಕೋ ನನಗೆ ಅರ್ಥವಾಗಲಿಲ್ಲ. ವಸಂತ ಹೇಳಿದ್ದೆಲ್ಲಾ ನಿಜ, ಸುಳ್ಳಲ್ಲ ಎಂದು ಆತನಿಗೂ ಗೊತ್ತು ಅನ್ನಿಸಿತು ನನಗೆ. ಆತ ಹೀಗೆ ಮಾತನಾಡಿದ್ದು ನನಗೆ ತುಂಬಾ ಅವಮಾನಕರವಾಗಿ ತೋಚಿತು. ಅಮ್ಮ ಅಂತಹ ಜ್ವರದಲ್ಲಿ ಬಂದಿದ್ದರು. ಆಕೆಯನ್ನು ಸಹ ಕಳಿಸು ಎನ್ನುತ್ತಿದ್ದಾರೆ. ನನ್ನ ಮನಸ್ಸಿಗೆ ಮುಳ್ಳು ಚುಚ್ಚಿದಂತಾಯಿತು.

ನನ್ನ ಲಾಯರ್ ಸ್ನೇಹಿತೆ ರಾಜೇಶ್ವರಿಯೊಂದಿಗೆ ವಸಂತಳ ವಿಷಯ ಹೇಳಿದೆ. ಆಕೆ ವಸಂತಳಿಗೆ ಎಲ್ಲಾದರೂ ಸಣ್ಣ ಕೆಲಸ ನೋಡಿ ಕೊಡಿಸುತ್ತೇನೆಂದು ವಾಗ್ದಾನ ಮಾಡಿದಳು. ನಾನು ಆಫೀಸಿಗೆ ಹೋಗುತ್ತಿದ್ದೆ. ವಸಂತ ಅಮ್ಮನ ಜೊತೆಯಲ್ಲಿ ಕಾಲಕಳೆಯುತ್ತಾ, ಮನೆಯ ಸಮಸ್ತ ಚಾಕರಿಯನ್ನೂ ತಲೆಯ ಮೇಲೆಳೆದುಕೊಂಡಳು.

ವಸಂತ ಬಂದು ಹತ್ತು ದಿನಗಳಾದುವು. ಕೃಷ್ಣಮೂರ್ತಿಯ ವರ್ತನೆಯಲ್ಲಿ ಸ್ಪಷ್ಟವಾದ ಬದಲಾವಣೆಗಳನ್ನು ನಾನು ಗಮನಿಸಿದೆ. ಆತ ಮಾತು ಮಾತಿಗೂ ಮಗುವಿನ ಮೇಲೆ, ನನ್ನ ಮೇಲೆ ಕೋಪಿಸಿಕೊಳ್ಳುತ್ತಿದ್ದುದನ್ನು ಗಮನಿಸಿದೆ. ವಸಂತಳನ್ನು ವಾಪಸ್ ಕಳುಹಿಸಲಿಲ್ಲವೆಂದು ಹಾಗೆ ವರ್ತಿಸುತ್ತಿದ್ದಾರೆಂಬುದನ್ನು ಅರ್ಥಮಾಡಿಕೊಂಡೆ. ನಾನು ವಸಂತಳನ್ನು ಕಳುಹಿಸಲಾರೆ.

ಅಂದು ರಾತ್ರಿ ಎಲ್ಲರೂ ಊಟ ಮಾಡುತ್ತಿದ್ದಾಗ ''ನಾನು ಮಾಡಿರೋ ಪಲ್ಯ ಹೇಗಿದೆ ಕೃಷ್ಣಮೂರ್ತಿಯವರೇ ? ಈರನಗೆರೆ ಬದನೆಕಾಯಿ ಅಂದ್ರೆ ನಿಮಗೆ ತುಂಬಾ ಇಷ್ಟ ಅಲ್ವಾ !'' ಪ್ರಶ್ನಿಸಿದಳು ವಸಂತ.

''ಚೆನ್ನಾಗಿದೆ'' ಎಂದರು ಭಾವನಾರಹಿತ ಮುಖ ಮಾಡಿ.

''ನಿಮ್ಮ ಮನೆಯಲ್ಲಿ ಅಡಿಗೆ ಕೆಲಸಕ್ಕೆ ಇಟ್ಕೊಳ್ಳಿ ನನ್ನನ್ನು. ಸಂಬಳ ಕೊಡದಿದ್ರೂ ಪರವಾಗಿಲ್ಲ. ಊಟ ಹಾಕಿ, ಇರಲು ಅವಕಾಶ ಸಾಕು'' ಎಂದಳು ಸ್ವಲ್ಪ ಹಾಸ್ಯದಿಂದ.

''ಅದೇನು ಮಾತು ಅಂತ !'' ಎಂದು ಅಮ್ಮ ಅನ್ನುತ್ತಿರುವಾಗಲೇ ''ನಮಗೆ ಅಡಿಗೆಯವರನ್ನ ಇಟ್ಟುಕೊಳ್ಳೋ ಅಷ್ಟು ಅನುಕೂಲ ಇಲ್ಲ, ಸ್ಥಿತೀನೂ ಇಲ್ಲ ! ಇಬ್ಬರೂ ಸಂಪಾದನೆ ಮಾಡ್ತಿದ್ದೀವಿ ಅನ್ನೋ ಮಾತೇ ಹೊರತು ಎಲ್ಲಾ ಸಾಲಗಳೇ,'' ಎಂದುಬಿಟ್ಟರು ಥಟ್ಟನೆ.

ನಾನು ವಸಂತಳ ಮುಖ ನೋಡಲಾರದಾದೆ. ಹೌದು ನಮಗೆಲ್ಲಾ ಸಾಲಗಳೇ.

ಚಿಟ್‌ಫಂಡ್ಸ್, ಷೇರುಗಳು, ಇನ್‌ಷ್ಯೂರೆನ್ಸ್‌ಗಳೂ ಇವೆಲ್ಲ ಅವರಿಗೆ ಸಾಲದ ಕೆಳಗೆ ಲೆಕ್ಕ. ಒಬ್ಬ ಸ್ನೇಹಿತೆ ಪ್ರಾಣ ಸಂಕಟದಲ್ಲಿದ್ದು ನನ್ನ ಬಳಿಗೆ ಬಂದು ಹತ್ತು ದಿವಸಗಳಿದ್ರೆ ಅವರಿಗೆ ಸಾಲವಾಗುತ್ತೆ. ಈತನೇನಾ ನನ್ನ ಪತಿ ದೇವರು ? ನನ್ನ ಕೊಲೀಗ್ಸ್‌ಗೆ, ನೆಂಟರಿಷ್ಟರಿಗೆಲ್ಲಾ ನನ್ನ ವಿಷಯದಲ್ಲಿ ಅಸೂಯೆ ಹುಟ್ಟಿಸಿದವರು ! ಇಷ್ಟು ದಿವಸಗಳೂ ನನ್ನ ಹೃದಯದಲ್ಲಿ ಅತ್ಯುನ್ನತ ಸ್ಥಾನವಿತ್ತು ಹೀರೋ ವರ್‌ಷಿಪ್ ಮಾಡಿಸಿಕೊಂಡವರು ಹೀಗೆ ಮಾತಾಡ್ತಿದ್ದಾರಲ್ಲಾ ಇವರು ! ನಾವಿಬ್ಬರೂ ಒಂದೇ ಎಂದವರು, ಇಬ್ಬರ ಹಣಾನೂ ಒಂದೇ ಅಂದವರು, ನನ್ನ ಸಂತೋಷ, ಆನಂದ, ಅಭಿವೃದ್ಧಿ, ಶ್ರೇಯಸ್ಸು ಕೋರುವ ಮೊದಲನೆಯ ವ್ಯಕ್ತಿಯಾದವರು, ನನಗೆ ಮಾತನಾಡುವುದನ್ನು, ಇತರರೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಕಲಿಸಿದವರು ಈತನೇ ! ಸಂದೇಹವಿಲ್ಲ. ನನ್ನ ಮನಸ್ಸಿನ ತುಂಬ ಮಳೆಗಾಲದ ಕಾರ್ಮೋಡಗಳು ತುಂಬಿಕೊಂಡುವು. ಅವು ವರ್ಷಿಸದಿದ್ದರೆ ಆ ಭಾರವನ್ನು ನಾನು ಹೊರಲಾರೆ ಎನ್ನಿಸಿತು. ನನಗೆ ಅಳಬೇಕೆನ್ನಿಸಿತು. ಊಟವಾದ ನಂತರ ಆತ ಪುನಃ ನನಗೆ ಹೇಳಿದರು : ''ವಸಂತಾನ ಕಳುಹಿಸಿಬಿಡು, ಆಕೆ ಇಲ್ಲಿರೋದು ಒಳ್ಳೇದಲ್ಲ. ನಾಳೆ ರಜೆ ಹಾಕಿ, ಸಿನಿಮಾ ತೋರಿಸಿ, ಒಂದು ಸೀರೆ ಕೊಟ್ಟು ನಿಮ್ಮ ಅಮ್ಮನ ಜೊತೆ ಕಳಿಸು.''




''ಅಮ್ಮನಿಗೆ ಜ್ವರ ಇನ್ನೂ ವಾಸಿಯಾಗಿಲ್ಲ. ಆಕೆ ಇಲ್ಲಿ ಸ್ವಲ್ಪ ದಿವಸ ಇರೋದಕ್ಕೆ ಬಂದಿದ್ದಾರೆ'' ಎಂದೆ ಧೈರ್ಯ ಕೂಡಿಸಿಕೊಂಡು.

''ಆಕೆ ನಿಮ್ಮ ಅಣ್ಣನ ಬಳಿಗೆ ಹೋಗಿ ಇರಬಹುದಲ್ಲಾ ! ಒಬ್ಬರೇ ಯಾಕಲ್ಲಿ ?'' ಎಂದರು ಕೋಪದಿಂದ.

ನಾನೇನೂ ಮಾತನಾಡಲಿಲ್ಲ.

ಬೆಳಿಗ್ಗೆ ಹಲ್ಲುಜ್ಜುತ್ತಾ ಯೋಚ್ನೆ ಮಾಡ್ತಿದ್ದೆ. ವಸಂತಳನ್ನೂ ಕಳಿಸೋದಿಲ್ಲ, ಅಮ್ಮನನ್ನೂ ಕಳಿಸೋದಿಲ್ಲ. ಕೃಷ್ಣಮೂರ್ತಿಯ ಕೋಪವನ್ನೂ ಭರಿಸಲಾರೆ. ಇಂದಿನವರೆಗೂ ಅವರ ಕೋಪವನ್ನು ನಾನು ಯಾವಾಗಲೂ ನೋಡಿರಲಿಲ್ಲ. ಕೋಪ ಬರೋದಕ್ಕೆ ಅವಕಾಶ ಎಲ್ಲಿದ್ದೆ ! ಆತನ ಇಷ್ಟ ಪ್ರಕಾರವೇ ನಡೀತಾ ಬಂದೆ. ನಾನು ಹಾಗೆ ಯೋಚನೆ ಮಾಡ್ತಿರೋವಾಗ ವರಾಂಡಾದಿಂದ ದಿನಪತ್ರಿಕೆ ಜೋರಾಗಿ ಬಂದು ನನ್ನ ಮುಖದ ಮೇಲೆ ಬಿತ್ತು. ಅಷ್ಟು ಜೋರಾಗಿ ಅದು ನನ್ನ ಮುಖದ ಮೇಲೆ ಬಿತ್ತು ಅಂದ್ರೆ ಅದರಲ್ಲೇನೋ ಸಂಚಲನವಿದೆ ಅಂತ ಅರ್ಥ ! ಹೌದು ಇದೆ.

ವಸಂತ ಎನ್ನುವ ಮುವತ್ತೈದು ವರ್ಷಗಳ ವಿವಾಹಿತೆ ಮನಸ್ಸು ಸ್ಥಿಮಿತ ತಪ್ಪಿ ಮನೆಬಿಟ್ಟು ಹೊರಟುಹೋಗಿದ್ದಾಳೆ. ಸಣ್ಣಗೆ, ಉದ್ದಕ್ಕಿದ್ದಾಳೆ. ಕೋಲು ಮುಖ, ದೊಡ್ಡ ಕಣ್ಣುಗಳು, ಕನ್ನಡ, ಇಂಗ್ಲಿಷ್ ಮಾತಾಡ್ತಾಳೆ. ಅವಳನ್ನು ಕಂಡವರು ಇಂತಹ ಅಡ್ರೆಸ್‌ಗೆ ತಿಳಿಸಬೇಕು. ಬಹುಮಾನವೇನೂ ಇಲ್ಲ. ವಸಂತಳ ಮದುವೆಯ ಫೋಟೋ ಇತ್ತು.

''ನಿನಗೆ ಮನಸ್ಸು ಸ್ಥಿಮಿತ ಇಲ್ಲವಂತಲ್ಲಾ !'' ಎಂದು ಆ ಪತ್ರಿಕೆಯನ್ನು ವಸಂತಳಿಗೆ ಕೊಟ್ಟೆ.

''ಹೌದು... ಮದುವೆಯಾದ ದಿವಸದಿಂದಲೇ ಇಲ್ಲ. ಈ ಒಂದು ಮಾತು ನಿಜ ಹೇಳಿದ್ದಾನೆ'' ಎಂದಳು ಒಂದು ನಿಮಿಷ ತಡೆದು.

''ನಾನಿಲ್ಲಿರುವುದಾಗಿ ಕಾಗದ ಬರೀಬೇಡಾಂತ ನಿಮ್ಮ ಯಜಮಾನರಿಗೆ ಹೇಳು. ಆತ ಬಂದು ರಗಳೆ ಮಾಡ್ತಾನೆ. ಆತನ ಮಾತು, ವರ್ತನೆ ನೀವು ಭರಿಸಲಾರಿರಿ.''

ನನ್ನ ಮನಸ್ಸು ಮತ್ತೆ ಮುದುಡಿತು. ವಸಂತಳಿಗೆ ಇಲ್ಲಿರುವ ಅವಕಾಶ ಕೊಟ್ಟದ್ದಕ್ಕೆ ರಗಳೆ ಆಗುತ್ತೆ ಅಂತ ಅಂದ್ಕೋತಿದ್ದಾರೆ ಹೊರತು, ವಸಂತಳನ್ನು ಗಂಡನ ಮನೆಗೆ ಕಳುಹಿಸಿಬಿಡೋ ಅಷ್ಟು ಕ್ರೂರಿಯಲ್ಲ ಕೃಷ್ಣಮೂರ್ತಿ ಎನ್ನಿಸಿತು. ನಾಲ್ಕು ದಿವಸಗಳಾದ ನಂತರ ರಾಜೇಶ್ವರಿ ವಸಂತಳಿಗೆ ಎಲ್ಲಾದರೂ ಕೆಲಸವನ್ನು ಕೊಡಿಸಿದರೆ, ಈ ಕೋಪವೆಲ್ಲಾ ಹೋಗುತ್ತೆ. ಕೃಷ್ಣಮೂರ್ತಿಯ ಬಗ್ಗೆ ವಸಂತ ಅಪಾರ್ಥ ಮಾಡಿಕೊಂಡಿದ್ದಾಳೆ ಅನಿಸಿತು. ಆದರೆ ಪತ್ರಿಕೆಯಲ್ಲಿ ಪ್ರಕಟಣೆ ಬಂದ ಮೇಲೆ, ಕೃಷ್ಣಮೂರ್ತಿ ನನ್ನೊಂದಿಗೆ ಮಾತಾಡುತ್ತಲೇ ಇರಲಿಲ್ಲ. ಈಗ ಆತನಿಗೆ ಮನೆಯಲ್ಲಿ ಏನೂ ಅಡಿಗೆ ಹಿಡಿಸುವುದಿಲ್ಲ, ಮೊದಲಿನ ಚೇಷ್ಟೆ ಹಿಡಿಸುವುದಿಲ್ಲ. ಮನೆಯಲ್ಲಿ ಪ್ರೈವೆಸಿ ಅನ್ನೋದು ಇಲ್ಲದೇ ಇರೋದು ಇಷ್ಟವಿಲ್ಲ. ಮನೆಯಲ್ಲಿ ಯಾರಷ್ಟಕ್ಕೆ ಆದರೂ ದೊಡ್ಡವರಾಗಿಬಿಟ್ಟಿದ್ದಾರೆಂದೂ, ಆತನ ಮಾತುಗಳನ್ನು ಯಾರೂ ಲಕ್ಷಿಸುವುದಿಲ್ಲವೆಂದೂ ಭಾವಿಸಲು ಪ್ರಾರಂಭಿಸಿದ್ದರು. ಇಷ್ಟು ದಿವಸಗಳೂ ನಾನೊಬ್ಬ ಅಮಾಯಕಳು ಎಂದೇ ತಿಳಿದಿದ್ದರು. ಈಗ ನಾನು ಬರಿಯ ಮೂರ್ಖಳೆಂದೂ, ಮೊಂಡೆಂದೂ ಗೊತ್ತಾಯಿತು ಆತನಿಗೆ.

ನನಗೆ ಮದುವೆಯಾದಾಗಲಿಂದ ನನ್ನ ಸಂಬಳ ತಂದು ಆತನ ಕೈಗೆ ಕೊಡುತ್ತಿದ್ದೆ. ಆತನ ಅನುಮತಿ ಪಡೆದೇ ಸೀರೆಗಳನ್ನೂ, ಒಡವೆಗಳನ್ನೂ ಕೊಂಡ್ಕೊಳ್ತಿದ್ದೆ. ಮನೆಗೆ ಏನು ಬೇಕಾದರೂ ಆತನೇ ತರುತ್ತಿದ್ದುದು. ನನಗೆ ಯಾವುದೂ ಕಮ್ಮಿ ಇಲ್ಲವೆಂದುಕೊಂಡೆ. ಹೋಗಲಿ ವಸಂತಳನ್ನು ಯಾವುದಾದರೂ ವುಮನ್ಸ್ ಹಾಸ್ಟೆಲ್‌ನಲ್ಲಿಡೋಣ ಎಂದರೂ ನನ್ನ ಬಳಿ ಹಣ ಇಲ್ಲ. ನಮಗಿಬ್ಬರಿಗೂ ಸಂಬಳಗಳು ಬರುತ್ತದಾಗಲೀ, ಒಬ್ಬರ ಸಂಬಳ ಚಿಟ್‌ಫಂಡ್‌ಗಳಿಗೆ, ಬೇರೆ ಸೇವಿಂಗ್ಸ್‌ಗೆ ಸರಿಹೋಗುತ್ತೆ. ಮಿಕ್ಕದ್ದರಲ್ಲಿ ಸಂಸಾರ ನಡೆಯಬೇಕು. ಅದಕ್ಕಾಗಿ ನನ್ನ ಬಸ್ ಚಾರ್ಜ್‌ಗೆ, ಸಣ್ಣ ಪುಟ್ಟ ಇತರೇ ಖರ್ಚುಗಳಿಗೆ ಮಾತ್ರ ನನ್ನ ಬಳಿ ಹಣ ಇರುತ್ತೆ. ಸ್ವಲ್ಪ ದಿವಸಗಳ ಹಿಂದೆ ನಾವು ಸೈಟ್ ಕೊಂಡುಕೊಂಡಾಗ ಹಣ ಸಾಲದೆ ಬರಲು ನನ್ನ ಒಡವೆಗಳನ್ನು ಬ್ಯಾಂಕ್‌ನಲ್ಲಿಟ್ಟು ಸಾಲ ತಂದ್ವಿ. ಈಗ ಒಡವೆಗಳೂ ನನ್ನ ಬಳಿ ಇಲ್ಲ. ನಾವಿಬ್ಬರೂ ಖರ್ಚು ಮಾಡುವ ಪ್ರತಿ ರೂಪಾಯಿಗೂ ಲೆಕ್ಕ ಬರೆಯಬೇಕೆನ್ನುತ್ತಾರೆ. ಹಾಗೆ ಒಂದು ನೂರು ರೂಪಾಯಿ ಮಾತ್ರವಿತ್ತು ನನ್ನ ಬಳಿ. ಮೂರು ದಿವಸಗಳು ಮೂರು ಯುಗಗಳಂತೆ ಕಳೆದುವು. ಬೆಳಗಾದೊಡನೆ ಬಾಗಿಲಿನ ಮುಂದೆ ನಿಂತ ಆಟೋದಿಂದ ಇಳಿದವರು ಸಾಕ್ಷಾತ್ ವಸಂತಳ ಗಂಡನೇ ! ನಾನು ವಸಂತಳ ಮುಖ ನೋಡಲಾಗದೆ ತಲೆ ಬಗ್ಗಿಸಿದೆ.

''ಹುಚ್ಚೀ ! ನಿನ್ನ ವೈವಾಹಿಕ ಜೀವನ ನಿನಗೇನೂ ಕಲಿಸಲಿಲ್ಲ. ನನ್ನ ವೈವಾಹಿಕ ಜೀವನ ಮನುಷ್ಯರನ್ನು ಅರ್ಥಮಾಡಿಕೊಳ್ಳುವುದನ್ನು ಕಲಿಸಿದೆ'' ಎಂಬಂತೆ ಸಮಾಧಾನ ಹೇಳುವಂತೆ, ನನ್ನ ಕಡೆ ನೋಡಿದಳು ವಸಂತ.

ಬಾ ಎಂದು ಆತ, ಬರುವುದಿಲ್ಲವೆಂದು ವಸಂತ.

ಕಳುಹಿಸಿಬಿಡು ಎಂದು ಕೃಷ್ಣಮೂರ್ತಿ, ನನ್ನಿಂದ ಸಾಧ್ಯವಿಲ್ಲವೆಂದು ನಾನು. ಕೂಗಾಟ, ಬಯ್ಗಳು, ಅರಚಾಟ.

''ನಾನು ಹೇಳ್ದೆ, ಆತ ರಗಳೆ ಮನುಷ್ಯ ಅಂತ'' ಎಂದಳು ವಸಂತ.

ವಸಂತಳನ್ನು ಕರೆದುಕೊಂಡು ಹೋಗಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿದು,

''ಏನು ? ನಿನ್ನ ಸ್ನೇಹಿತೆ ಗಂಡ ನಿನ್ನನ್ನೂ ಇಟ್ಕೋತೀನಿ ಅಂದ್ನಾ !'' ಎಂದ, ಕೋಪ-ಅಸಹ್ಯ ತುಂಬಿದ ಧ್ವನಿಯಲ್ಲಿ.

''ಮೊದಲು ಇಲ್ಲಿಂದ ಹೊರಡು. ಇಲ್ಲದಿದ್ದರೆ ಪೊಲೀಸ್ ಕರೀತೀನಿ, ರ್‍ಯಾಸ್ಕಲ್'' ಎಂದು ಆತನನ್ನು ಹೊರಗಟ್ಟಿದರು ಕೃಷ್ಣಮೂರ್ತಿ. ಅದಕ್ಕೆ ಸಂತೋಷಪಡ್ತಿರುವಾಗ ನನ್ನನ್ನು ಬಯ್ಯಲು ಪ್ರಾರಂಭಿಸಿದರು. ನನ್ನ ಮೊಂಡಾಟದಿಂದ ತನ್ನ ಮರ್ಯಾದೆಯನ್ನು ಕಳೆದೆನೆಂದರು. ನನ್ನ ಮೂರ್ಖತ್ವದಿಂದಾಗಿ ಆತನಿಗೆ ಅವಮಾನವಾಯಿತೆಂದರು. ಇನ್ನಾದರೂ ತನ್ನ ಮಾತು ಕೇಳದಿದ್ದರೆ ನನ್ನನ್ನು ಸಹ ಹೊರಟುಹೋಗುವಂತೆ ಹೇಳಿದರು. ಹಾಗೆ ಕೂಗಾಡಿ, ಕೂಗಾಡಿ ಸುಸ್ತಾಗಿ ಕುರ್ಚಿಯಲ್ಲಿ ಕುಳಿತರು.

ಇಷ್ಟರಲ್ಲಿ ವಸಂತ ತನ್ನ ಬಟ್ಟೆಗಳನ್ನು ಪ್ಯಾಕ್ ಮಾಡಲಾರಂಭಿಸಿದ್ದಳು. ''ನೀನೇನೋ ಉದ್ಯೋಗ ಮಾಡ್ತಾ ಸ್ವತಂತ್ರವಾಗಿ ಹಾಯಾಗಿದ್ದೀ ಅಂತ ನನಗೆ ಸಹಾಯ ಮಾಡ್ತೀಯ ಅಂದ್ಕೊಂಡೆ. ಇದೇನು ಹೀಗಾಯ್ತು ! ನನ್ನಿಂದ ನೀವಿಬ್ಬರೂ ಜಗಳ ಆಡ್ಬೇಡಿ'' ಎಂದಳು.

ವಸಂತ ನನ್ನ ಉದ್ಯೋಗ, ಸಂಪಾದನೆ ಮಾತ್ರವಲ್ಲದೆ ನನ್ನ ಅಹಂಭಾವವನ್ನೂ ಸುಳ್ಳಾಗಿಸಿದ್ದಳು.

ಈಗ ನನಗೆ ಕೃಷ್ಣಮೂರ್ತಿಯ ಮೇಲೆ ಕೋಪ ಬರಲಿಲ್ಲ. ನನ್ನ ಅಸಮರ್ಥತೆಯನ್ನು ನೆನೆಸಿಕೊಂಡು ಅಳು ಬರಲಿಲ್ಲ. ವಿಚಾರ ಹುಟ್ಟಲಿಲ್ಲ. ಇಷ್ಟು ಕಾಲದಿಂದ ನನಗೇನು ಬೇಕೆಂಬುದನ್ನು ತಿಳಿದುಕೊಳ್ಳಲಾರದುದಕ್ಕೆ, ಕಣ್ಣುಗಳನ್ನು ತೆರೆದು ಲೋಕವನ್ನು ನೋಡದಿದ್ದುದಕ್ಕೆ ಮನಸ್ಸಿಗೆ ಕಷ್ಟವಾಗಲಿಲ್ಲ. ನನಗೆ ನನ್ನ ಕರ್ತವ್ಯವೊಂದೇ ಹೊಳೆಯಿತು.

ವಸಂತಳ ಕೈ ಹಿಡಿದು ''ಸಂತೋಷ ಆಯ್ತು, ನೀನೆಲ್ಲಿಗೂ ಹೋಗೋದಿಲ್ಲ. ನಾನೂ ಎಲ್ಲಿಗೂ ಹೋಗೋದಿಲ್ಲ. ನಡೀ ಹೊತ್ತಾಯ್ತು... ಬೇಗ ಸ್ನಾನ ಮಾಡಿ ರಾಜೇಶ್ವರಿಯ ಬಳಿಗೆ ಹೋಗೋಣ. ನಿನ್ನನ್ನ ಕರ್‍ಕೊಂಡ್ಬಾ ಅಂತ ಹೇಳಿ ಕಳಿಸಿದ್ದಾಳೆ'' ಎಂದೆ.

ಅನುವಾದ : ಮಿಸ್. ಸಂಪತ್
ನಂ. ೫, 'ಕೃಪಾ' ೮ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-೫೬೦ ೦೨೦


ಅಮೆರಿಕಾದ ಪ್ರತಿಷ್ಠೆ


ಅದು ಪಾಕ್-
ಆಕ್ರಮಿತ-ಕಾಶ್ಮೀರ...
...ಇದು ಭಯೋತ್ಪಾದಕ-
ಆಕ್ರಮಿತ-ಕಾಶ್ಮೀರ...
.....


ರೀ ಮಿಸ್ಟರ್... ನನಗೂ ಒಂಚೂರು ನೀರು ಕೊಡ್ರೀ!


'ಮಾವಿನ ಗೊರಟು ಸ್ಪೆಷಲ್' ಮುಖ್ಯಮಂತ್ರಿಗಳೇ... ನಮ್ಮ ಪ್ರಜೆಗಳ ಮೆಚ್ಚಿನ ಆಹಾರ... ಬಹಳ ಪುಷ್ಟಿದಾಯಕವಂತೆ!
......
ಒರಿಸ್ಸಾ




# ತನ್ನಂತೆ ಪರರ ಬಗೆದೊಡೆ

ರುಕ್ಮಿಣಿ ಮಾಲಾ

"ಇನ್ನು ಮುಂದೆ ನೀವು ಊಟಕ್ಕೆ ಮೊಸರು ಮಜ್ಜಿಗೆ ಹಾಕಿಕೊಳ್ಳುವುದನ್ನು ಬಿಡುವುದು ಒಳ್ಳೆಯದು. ಮೊಸರು ಮಜ್ಜಿಗೆ ಸೇವಿಸುವುದು ಬಿಟ್ಟರೆ ಶೀತವೇ ಬರುವುದಿಲ್ಲ. ಇದರ ಸೇವನೆ ಬಿಟ್ಟರೆ ನಿಮ್ಮ ಆರೋಗ್ಯದ ದೃಷ್ಟಿಯಿಂದ ಬಹಳ ಒಳ್ಳೆಯದು."

ನನ್ನ ಅರ್ಧಾಂಗಿಯ ಈ ಹೇಳಿಕೆ ಕೇಳಿ ನಾನು ಮೂರ್ಛೆ ತಪ್ಪಿ ಬೀಳದಿದ್ದದ್ದು ನನ್ನ ಅಜ್ಜಿ ಪುಣ್ಯದಿಂದ. ಈ ಹೇಳಿಕೆಯ ಒಳಗುಟ್ಟು ಏನು ಗೊತ್ತೆ ? ಮೊಸರು ಮಜ್ಜಿಗೆ ಹೆಸರು ಕೇಳಿದರೆ ಮಾರು ದೂರ ಓಡುವ ಪಕ್ಷಕ್ಕೆ ಸೇರಿದವಳವಳು. ನಾನು ಮಜ್ಜಿಗೆ ಮೊಸರು ತಿನ್ನುವುದನ್ನು ಬಿಟ್ಟರೆ ಒಂದು ಕೆಲಸ ಕಡಿಮೆಯಾಗಲಿಲ್ಲವೇ ? ಅದೂ ಅವಳ ವೈರಿಯಂಥದ್ದು ಬೇರೆ ! ಅದಕ್ಕೆ ನನ್ನ ಆರೋಗ್ಯವನ್ನು ಮುಂದಿಟ್ಟು ಇಂಥ ಹೇಳಿಕೆಯನ್ನಿಟ್ಟಳು. ನಮ್ಮ ಮಗಳಿಗೆ ಅವಳ ಬಾಲ್ಯದಲ್ಲಿ ಅನ್ನಕ್ಕೆ ಬರೀ ತುಪ್ಪ ಉಪ್ಪು ಕಲಸಿ ಇಲ್ಲವೇ ಹಾಲು ಹಾಕಿ ಊಟ ಮಾಡಿಸುತ್ತಿದ್ದಳು. ಆದರೂ ಮಗಳು ಚೆನ್ನಾಗಿ ಮೊಸರು ತಿನ್ನಲು ಕಲಿತಳು. ಇವಳ ಪಕ್ಷ ಸೇರಲಿಲ್ಲ ! ಮಜ್ಜಿಗೆ ಮೊಸರು ಯಾರೆಲ್ಲ ತಿನ್ನುವುದಿಲ್ಲವೋ (ತಿನ್ನುವುದು ಬಿಡಿ, ಕೈಯಲ್ಲೂ ಮುಟ್ಟುವುದಿಲ್ಲವೋ ) ಅವರೆಲ್ಲರ ಪಟ್ಟಿ ನನ್ನ ಅರ್ಧಾಂಗಿಯ ಬಳಿ ಇದೆ. ಮಜ್ಜಿಗೆ ವಿರೋಧಿ ಸಂಘ ಕಟ್ಟುವ ಯೋಚನೆ ಏನಾದರೂ ಇರಬಹುದೆ ಎಂದು ದಿಗಿಲುಗೊಳ್ಳುತ್ತೇನೆ.

ಏನಾದರೂ ಈ ಮೊಸರಿನಿಂದಾಗಿ ನನ್ನ ಅರ್ಧಾಂಗಿಯು ಅವಳ ಬಾಲ್ಯದಲ್ಲಿ ಸೋಲುಂಡ ಕತೆ ಬಲು ಸ್ವಾರಸ್ಯವಾಗಿದೆ. ಅಕ್ಕ-ತಂಗಿಯರೊಡನೆ ಜಗಳವೇರ್ಪಟ್ಟರೆ ಆಗ ಅವರು ಕೈಯಲ್ಲಿ ಮೊಸರು ಹಿಡಿದುಕೊಳ್ಳುತ್ತಿದ್ದರಂತೆ. ಆ ಕೂಡಲೇ ಇವಳ ಹಾರಾಟ ಹೋರಾಟವೆಲ್ಲಾ ಅಲ್ಲೇ ನಿಲ್ಲುತ್ತಿತ್ತಂತೆ ! ಇವಳು ಹೆದರುತ್ತಿದ್ದದ್ದು ಮೊಸರು ಮಜ್ಜಿಗೆಗೆ ಮಾತ್ರವಂತೆ ! 'ಅವಳೆಂಥ ಪೆದ್ದು ಅಂದರೆ ನಾವು ಮೊಸರಿನ ಪಾತ್ರೆಯ ಹತ್ತಿರ ಹೋಗಿ ಕೈಯಲ್ಲಿ ಮುಟ್ಟಿದಂತೆ ಮಾಡುತ್ತಿದ್ದೆವು ಅಷ್ಟೆ. ಅವಳು ನಮ್ಮ ಕೈಯಲ್ಲಿ ಮೊಸರಿದೆ ಎಂದು ಊಹಿಸಿ ನಮ್ಮ ಬಳಿ ಸುಳಿಯುತ್ತಿರಲಿಲ್ಲ ! ಅವಳ ಕೈಯಿಂದ ಪಾರಾಗಲು ನಮಗೆ ಅದೊಂದೆ ಸುಲಭದ ಅಸ್ತ್ರವಿದ್ದದ್ದು. ಅದಕ್ಕೆ ಮಾತ್ರ ಅವಳು ಬಹಳ ಬೇಗ ಮಣಿಯುತ್ತಿದ್ದಳು' ಎಂದು ಅವಳ ಅಕ್ಕ-ತಂಗಿ ತಮಾಷೆ ಮಾಡುತ್ತಿದ್ದರು. ನಾನು ಅವಳ ವಾದಕ್ಕೆ ಮಣಿಯದೆ ಇದ್ದುದರಿಂದ, ಅವಳಂತೆ ನನ್ನ ಬಗೆಯದೆ ಇದ್ದುದರಿಂದ, ಮೊಸರಿನ ವಿಷಯ ಬಿಟ್ಟು ತೆಪ್ಪಗಾದಳು.

ತನ್ನಂತೆ ಪರರ ಬಗೆಯುವ ಗೀಳು ನನ್ನ ಅರ್ಧಾಂಗಿಗೆ ಅಂಟಿಕೊಂಡಿದೆ. ಉರಿಬಿಸಿಲಿನಲ್ಲಿ ಅಕ್ಕನ ಮನೆಗೆ ತೆರಳಿ 'ಬಾ, ಈಗ ನಿನಗೆ ಸೈಕಲ್ ಬಿಡಲು ಹೇಳಿಕೊಡುತ್ತೇನೆ' ಎಂದು ಅಕ್ಕನನ್ನು ಕರೆಯುತ್ತಿದ್ದಳಂತೆ. ಯಾರು ತಾನೆ ಆ ಹೊತ್ತಿನಲ್ಲಿ ಸೈಕಲ್ ಕಲಿಯಲು ಉತ್ಸಾಹ ತೋರಿಸಿಯಾರು ? ಇವಳು ಮಧ್ಯಾಹ್ನದ ಉರಿಬಿಸಿಲಿನಲ್ಲಿಯೇ ಸೈಕಲು ಬಿಡಲು ಕಲಿತದ್ದಂತೆ ! ತನ್ನಂತೆ ಪರರು ಎಂದು ತಿಳಿದು ಉರಿಬಿಸಿಲಲ್ಲೆ ಅಕ್ಕನಿಗೆ ಸೈಕಲು ತರಬೇತಿ ಕೊಡಲು ಮುಂದಾದ ನನ್ನ ಅರ್ಧಾಂಗಿಯ ಪರಿಗೆ ಏನನ್ನಬೇಕು ? ಅವಳಕ್ಕ ಬಿಸಲಲ್ಲಿ ಸೈಕಲ್ ಕಲಿಯಲು ಮನ ಮಾಡಲಿಲ್ಲ. ಸೈಕಲ್ ಕಲಿಯಲು ಬಿಸಿಲು ಮಳೆ ಚಳಿ ಎಂದು ಮೀನಮೇಷ ಎಣಿಸಬಾರದು, ಕಲಿಯಬೇಕು ಎಂಬ ಉತ್ಸಾಹವಿರಬೇಕು, ಎಂದು ಇವಳ ಅಂಬೋಣ.

ಮಧ್ಯಾಹ್ನದ ಊಟದೊಂದಿಗೆ ನನಗೆ ಏನಾದರೂ ಸಿಹಿತಿಂಡಿ ಇರಲೇಬೇಕು. ಇಲ್ಲದಿದ್ದರೆ ಊಟ ಮಾಡಿದ್ದು ತೃಪ್ತಿ ಎನಿಸುವುದಿಲ್ಲ. ನಾನು ಒಂದೆರಡು ತುಂಡು ಸಿಹಿತಿಂಡಿ ಹಾಕಿಕೊಂಡರೆ ಇವಳು ಕಣ್ಣರಳಿಸಿ 'ಸಾಕು. ಎಷ್ಟು ಹಾಕಿಕೊಳ್ಳುವುದು ? ಮತ್ತೆ ಹೊಟ್ಟೆ ಸರಿ ಇಲ್ಲ ಎನ್ನುವುದು' ಎಂದು ನುಡಿದು ಸಿಹಿತಿಂಡಿಯ ಪಾತ್ರೆಯನ್ನು ನನ್ನ ಬಳಿಯಿಂದ ದೂರವಿಟ್ಟುಬಿಡುತ್ತಾಳೆ. ಅವಳಿಗೆ ಸಿಹಿ ಅಂದರೆ ಅಷ್ಟಕಷ್ಟೆ. ನೆಂಟರು ಯಾರಾದರೂ ನಮ್ಮ ಮನೆಗೆ ಬಂದಾಗ, ಅವರು ಸಿಹಿಪ್ರಿಯರಾಗಿದ್ದು, ಸಂಕೋಚ ಪ್ರವೃತ್ತಿಯವರಾಗಿದ್ದರೆ ತನ್ನಂತೆ ಪರರು ಎಂದು ಇವಳು ಭಾವಿಸಿ ಸಿಹಿ ಬಡಿಸಿದರೆ ಪಾಪ ಅವರ ಸ್ಥಿತಿ ಗೋವಿಂದ ! ನಾನಾದರೆ ಸಂಕೋಚ ಬಿಟ್ಟು ಇನ್ನೆರಡು ಹಾಕು ಎನ್ನುತ್ತೇನೆ. ಅವರು ಹಾಗೆ ಹೇಳಿಯಾರೆ ? ನಮ್ಮಲ್ಲಿ ಉಪ್ಪಿಟ್ಟು ಮಾಡಿದಾಗ ಪ್ರತಿಸಲವೂ ಸಕ್ಕರೆ ಹಾಕು ಎಂದು ಹೇಳಬೇಕಾಗುತ್ತದೆ. 'ಇದೇನು ಇಷ್ಟು ರುಚಿಯಾದ ಉಪ್ಪಿಟ್ಟಿಗೆ ಸಕ್ಕರೆ ಹಾಕಿ ರುಚಿ ಕೆಡಿಸುವುದು ? ಸಕ್ಕರೆ ಹಾಕಿದರೆ ಕೇಸರಿಭಾತು ಆದೀತು. ಉಪ್ಪಿಟ್ಟು ಹೇಗಾಗುತ್ತದೆ' ಎನ್ನುತ್ತಾಳೆ.

"ಇವತ್ತು ಸಿನೆಮಾಕ್ಕೆ ಹೋಗೋಣವೇ ? ಒಳ್ಳೆ ಸಿನೆಮಾ ಬಂದಿದೆ" ಎಂದೊಮ್ಮೆ ಕೇಳಿದಳು.

ನಾನು ಸಿನೆಮಾಕ್ಕೆ ಬರುವುದಿಲ್ಲ. ಆ ಸಿನೆಮಾಗಳು ಎಲ್ಲಾ ಒಂದೇ ರೀತಿ ಇರುತ್ತವೆ. ನೀನು ಬೇಕಾದರೆ ನಿನ್ನ ಸ್ನೇಹಿತೆಯರೊಡನೆ ಹೋಗು, ನನ್ನ ಅಡ್ಡಿ ಇಲ್ಲ ಎಂದು ಜಾರಿಕೊಳ್ಳುತ್ತೇನೆ. ಮೂರು ಗಂಟೆ ಆ ಟಾಕೀಸಿನ ಒಳಗೆ ಕುಳಿತುಕೊಳ್ಳುವ ಶಿಕ್ಷೆ ಯಾವ ಶತ್ರುವಿಗೂ ಬೇಡ !

"ನನಗೂ ಎಲ್ಲ ಸಿನೆಮ ಇಷ್ಟವಾಗುವುದಿಲ್ಲ. ನೋಡುವಂಥದ್ದು ಬಂದರೆ ಮಾತ್ರ ಹೋಗುವುದು ನನಗೆ ಇಷ್ಟವಾಗುತ್ತೆ. ನಿಮಗೆ ಯಾಕೆ ಇಷ್ಟವಾಗುವುದಿಲ್ಲ ? ನಿಮಗೆ ಅಭಿರುಚಿಯಿರುವಂಥದಕ್ಕೆ ನಾನು ಬರುವುದಿಲ್ಲವೇ ? ಹಾಗೆ ನೀವೂ ನನಗೆ ಇಷ್ಟವಿರುವ ಕಾರ್ಯಕ್ರಮಗಳಿಗೆ ಬರಬೇಕು" ಎನ್ನುತ್ತಾ ವಿತಂಡವಾದಕ್ಕೆ ಇಳಿಯುತ್ತಾಳೆ.

"ನಿನಗೆ ಇಷ್ಟವಿಲ್ಲದಿದ್ದರೆ ನೀನು ಬರಬೇಡ. ನಾನೇನು ನಿನ್ನನ್ನು ಬಲವಂತ ಮಾಡಿ ಕರೆಯುವುದಿಲ್ಲ. ನಿನಗೆ ಆಸಕ್ತಿ ಇದ್ದರೆ ಮಾತ್ರ ಬಾ." - ಅವಳ ವಿತಂಡವಾದಕ್ಕೆ ಖಂಡತುಂಡವಾಗಿ ಉತ್ತರಿಸುತ್ತೇನೆ. ಮತ್ತೆ ಅವಳು ನನ್ನನ್ನು ಸಿನೆಮಾಕ್ಕೆ ಬರಲು ಒತ್ತಾಯಿಸುವುದಿಲ್ಲ. ಅವಳ ಸ್ನೇಹಿತೆಯರೊಂದಿಗೆ ಹೋಗುತ್ತಾಳೆ. ಸಿನೆಮಾ ನೋಡುವ ಯಾತನೆ ತಪ್ಪಿತಲ್ಲ ಎಂದು ನನ್ನ ಬೆನ್ನನ್ನು ನಾನೇ ತಟ್ಟಿಕೊಳ್ಳುತ್ತೇನೆ.

ಮಗಳು ಯಾವಾಗಲೂ ಶಾಲೆಗೆ ಸೈಕಲಲ್ಲೇ ಹೋಗುತ್ತಾಳೆ. ಕೆಲವೊಮ್ಮೆ ನಾನು ಮೋಟಾರುಗಾಡಿಯಲ್ಲಿ ಬಿಡುವುದುಂಟು. ಸಂಜೆ ಶಾಲೆಯಿಂದ ಕರೆತರಲು ಅವಳು ತನ್ನ ಅಮ್ಮನಿಗೆ ಹೇಳುತ್ತಾಳೆ. ನಡೆದುಕೊಂಡು ಬಾ ಎಂದು ತಾಯಿ, ಅಷ್ಟು ದೂರ ಈ ಬ್ಯಾಗ್ ಹೊತ್ತುಕೊಂಡು ನಡೆಯಲಾಗುವುದಿಲ್ಲ ಎಂದು ಮಗಳ ಪ್ರತಿವಾದ. ಒಂದು ಮೈಲಿ ನಡೆಯದೇನು ? ನಾವು ನಿನ್ನ ವಯಸ್ಸಿನಲ್ಲಿ ನಾಲ್ಕು ಮೈಲಿ ನಡೆದು ಶಾಲೆಗೆ ಹೋಗುತ್ತಿದ್ದೆವು, ನಿನಗೇನು ನಡೆಯದೆ ? ನನ್ನಂತೆ ಅಲ್ಲವೇ ನೀನು ? ಎಂದು ತಾಯಿಯ ಉಪದೇಶ. 'ಪಾಪ.

೨೫ನೇ ಪುಟಕ್ಕೆ

# ಬಾಗಿಲಿಗೆ ಬಂದವರು




ಅಂದು ಮಲಗಿದ್ದೆ. ಮಧ್ಯಾಹ್ನದ ಹೊತ್ತು ಊಟ ಮುಗಿಸಿದ ನಂತರ ಸಾಧಾರಣವಾಗಿ ೨ ರಿಂದ ೩ ಗಂಟೆಯವರೆಗೆ ಶಯನ, ಅದು ನನ್ನ ಜಾಯಮಾನ. ಇತ್ತೀಚಿಗಿನ ನಿವೃತ್ತ ಜೀವನಕ್ಕೆ ಒಂದಿಷ್ಟು ಆರಾಮ. ಆ ಹೊತ್ತು ಬೇರೇನು ಕಸುಬಿದೆ ಅಲ್ಲವೇ ? ಆಗಲೇ ಕರೆಗಂಟೆ ಬಾರಿಸಿದುದು. ಮನೆಯಲ್ಲಿದ್ದವನು ನಾನೊಬ್ಬನೇ. ಎದ್ದುಹೋಗಿ ಬಾಗಿಲು ತೆರೆಯಬೇಕು. "ಬಹಳ ದಿನಗಳಾದವು ಹೋಗದೇ, ಅಕ್ಕನ ಮನೆಗೆ ಹೋಗಿಬರ್ತೇನೆ" ಎಂದು ಹೇಳಿ ದಹಿಸರ್‌ಗೆ ಹೋಗಿದ್ದಳು ನನ್ನಾಕೆ. ಇಲ್ಲವಾದರೆ ಎಲ್ಲಾ ಅವಳೇ ನೋಡಿಕೊಳ್ಳುತ್ತಿದ್ದಳು. 'ಒಂದು ಗಳಿಗೆ ಹಾಯಾಗಿ ಮಲಗಿರಲೂ ಇಲ್ಲ' ಎಂದು ಗೊಣಗಿಕೊಂಡೇ ಎದ್ದುಹೋಗಿ ಬಾಗಿಲು ತೆರೆದೆ.

ಬಾಗಿಲಲ್ಲಿ ಪರಿಚಯದ ಹೆಣ್ಣೊಂದು ನಿಂತಿರುವುದು ಕಾಣಿಸಿತು. ಕನಸೋ ಏನು ಎಂದುಕೊಂಡು ಮೊದಲು ಕಣ್ಣುಜ್ಜಿಕೊಂಡೆ. ಅಲ್ಲವೆಂಬುದು ಖಾತ್ರಿಯಾಯಿತು. ಹೆಗಲಿಗೆ ತೂಗಿಬಿಟ್ಟ ಸಣ್ಣ ಬ್ಯಾಗ್. ಕೈಯಲ್ಲೊಂದು ಏನನ್ನೋ ತುಂಬಿಸಿಕೊಂಡಿರುವ ಚೀಲವನ್ನು ಹಿಡಿದುಕೊಂಡಿರುವ ಆಕೆ ತುಟಿಗಳ ಮೇಲೆ ನಗುವನ್ನು ಪಸರಿಸಿಕೊಳ್ಳುತ್ತಾ ವಿನಮ್ರವಾಗಿ ಕೇಳಿದ ಪ್ರಶ್ನೆ -

"ನಮಸ್ಕಾರ, ಮನೆಯಲ್ಲಿ ಹೆಂಗಸರಾರೂ ಇಲ್ವೇ ?"

ನನಗೆ ಆಚ್ಚರಿ ಎನಿಸಿತು. "ಇಲ್ಲದೇ ಏನು ? ಹೆಂಗಸರೂ ಇದ್ದಾರೆ. ಗಂಡಸರೂ ಇದ್ದಾರೆ. ಮಕ್ಕಳೂ ಇವೆ. ಅದರಿಂದ ನಿಮಗೇನಾಗಬೇಕು." - ನಾನಾಡಿದ ಮಾತು ಕಟುವಾಯಿತೇನೋ ! ನಿದ್ದೆಯ ಆತಂಕ ವ್ಯಕ್ತಪಡಿಸಿದ ಸಿಡಿಮಿಡಿ ಅದಾಗಿರಬಹುದು.

ಆದರೆ ನನ್ನ ಮಾತಿನಿಂದ ಆಕೆ ವಿಚಲಿತಳಾಗಲಿಲ್ಲ. ಮಾತು ಮುಂದುವರಿಸಿದಳು : "ಕ್ಷಮಿಸಿ, ತಪ್ಪು ತಿಳಿದುಕೊಳ್ಳಬೇಡಿ. ಒಳಗಿನಿಂದ ಯಾರಾದರೂ ಹೆಂಗಸನ್ನು ಸ್ವಲ್ಪ ಬರಹೇಳುತ್ತೀರಾ ?"

"ಏಕೆ ?"

"ಅವರೊಡನೆ ಸ್ವಲ್ಪ ಕೆಲಸವಿದೆ."

ಅಧಿಕ ಪ್ರಸಂಗಿ ! ಸಮಯ ಹಾಳು ಮಾಡುತ್ತಿದ್ದಾಳೆ ಎಂದುಕೊಂಡು ಉಸುರಿದೆ. "ನಾನು ಈ ಮನೆಯ ಯಜಮಾನ. ನಿಮ್ಮ ಕೆಲಸ ನನ್ನೊಡನೆ ನಡೆಯುವುದಿಲ್ಲವೇ ?"

ನನ್ನ ಪಿತ್ಥ ಇನ್ನೂ ಇಳಿದಿರಲಿಲ್ಲ.

ಏನೆನಿಸಿತೋ, ಆಕೆ ಪುನಃ ನಕ್ಕಳು, ನುಡಿದಳು -

"ಇಲ್ಲ, ನೋಡಿ, ಈಗ ನನ್ನ ಕೆಲಸವಿರುವುದು ಹೆಂಗಸರೊಡನೆಯೇ, ಪ್ಲೀಸ್ ಸ್ವಲ್ಪ ಬರಹೇಳಿರಲ್ಲಾ. ಕೇವಲ ಎರಡು ನಿಮಿಷ. ನಿಮ್ಮ ಹೆಚ್ಚಿನ ಸಮಯವನ್ನೇನೂ ನಾನು ಹಾಳುಮಾಡಲಾರೆ."

ಆಕೆ ಬಲು ಚಾಲಾಕಿ. ಈ ಹುಡುಗಿಯರೆಲ್ಲಾ ಹೀಗೇನೇ. ಆಕೆಯ ಅಂತಹ ಕೆಲಸವೇನು ಎಂಬುದು ಮಾತ್ರ ನನಗರ್ಥವಾಗಲಿಲ್ಲ. ಕೇಳಬೇಕೆಂದಿರುವಷ್ಟರಲ್ಲಿ ಆಕೆಯೇ ಸ್ಪಷ್ಟಪಡಿಸಿದ್ದಳು.

"ನೋಡಿ, ನನ್ನೊಡನೆ ಮಾರಲು ತಂದ ಕೆಲವು ವಸ್ತುಗಳಿವೆ. ಅವೆಲ್ಲಾ ಹೆಂಗಸರ ಉಪಯೋಗದವು, ನಿಸ್ಸಂಕೋಚವಾಗಿ ಹೇಳಬೇಕೆಂದರೆ, 'ಬ್ರಾ', ಒಳ ಉಡುಪು ಇತ್ಯಾದಿ. ಆದುದರಿಂದಲೇ ಕೇಳಿದೆ."

ಹಾಗನ್ನುವಾಗ ಆಕೆ ತುಸು ನಾಚಿದುದು ಕಂಡುಬಂತು.

"ಹೋ ! ಹಾಗೇನು ? ಹೆಂಗಸರಾರೂ ಈಗ ಮನೇಲಿ ಇಲ್ಲ. ಹೊರ ಹೋಗಿದ್ದಾರೆ," ಎಂದು ಹೇಳಿದಾಗ ಕಂಠಸ್ವರ ತನ್ನ ಗಡಸುತನವನ್ನು ಬಿಟ್ಟುಕೊಟ್ಟು ಸ್ವಲ್ಪ ಮೃದುವಾಗಿತ್ತು.

"ಸರಿ, ಮುಂದೆ ಎಂದಾದರೂ ಬಂದೇನು, ತೊಂದರೆ ಕೊಟ್ಟುದಕ್ಕಾಗಿ ಕ್ಷಮಿಸಿ" ಎಂದು ನುಡಿದು ಇಲಾಸ್ಟಿಕ್ ನಗು ನಕ್ಕು ಚಪ್ಪಲಿ ಸರಿಸಿದಳು ಆಕೆ.

ಹೌದು, ಮುಂಬಯಿಯಲ್ಲಿ ಹೆಚ್ಚಾಗಿ ಇಂತಹ ಚಿಲ್ಲರೆ ಮಾರಾಟಗಾರರು ಮನೆಗಳಿಗೆ ದಾಳಿ ಇಡುವುದು ಮಧ್ಯಾಹ್ನದ ಇದೇ ಹೊತ್ತಿನಲ್ಲಿ. ಗಂಡಸರು ಕೆಲಸಕ್ಕೆ ಹೋಗಿರುತ್ತಾರೆ. ಹೆಂಗಸರನ್ನು ಸುಲಭವಾಗಿ ಬನಾಯಿಸಿ ಬುಟ್ಟಿಗೆ ಹಾಕಿಕೊಳ್ಳಬಹುದು ಎಂಬುದು ಅವರ ಇರಾದೆ ಇರಬಹುದು. ಅದು ಅವರ ಹೊಟ್ಟೆ ತುಂಬಿಸಿಕೊಳ್ಳುವ ವೃತ್ತಿ. ಹೆಂಡತಿ ಇದ್ದಿದ್ದರೆ ಏನಾದರೂ ವ್ಯಾಪಾರ ಕುದುರುತ್ತಿತ್ತೋ ಏನೋ ಹೇಳಬರುವುದಿಲ್ಲ. ನನ್ನಾಕೆ ಹೀಗೆ ಮನೆ ಬಾಗಿಲಿಗೆ ಬಂದವರಿಂದ ಹೆಚ್ಚಾಗಿ ಕೊಂಡುದು 'ಬ್ಲೀಚಿಂಗ್ ಪೌಡರ್' ಮಾತ್ರ ಎಂದು ನನಗನಿಸುತ್ತದೆ !! ಹಾಗೆ ಎಣಿಸಿಕೊಳ್ಳಲು ಕಾರಣವುಂಟು. ಒಮ್ಮೆ, "ನೋಡಿ, ಬಚ್ಚಲು, ಕಕ್ಕಸು ಎಲ್ಲಾ ಕೆಟ್ಟ ನಾತ ಕೊಡುತ್ತದೆ. ಬಹಳ ದಿನಗಳಿಂದ ಸರಿಯಾಗಿ ತೊಳೆದೇ ಇಲ್ಲ. 'ಬ್ಲೀಚಿಂಗ್ ಪೌಡರ್' ಮುಗಿದಿತ್ತು. ಇಂದು ಬಾಗಿಲಿಗೆ ಬಂದಿದ್ದಳು ಒಬ್ಬಾಕೆ. ಅವಳಿಂದ ಕೊಂಡೆ. ರಾತ್ರಿ ಎರಡರಲ್ಲೂ ಪೌಡರ್

ಪ್ರಿಯತಮ

ಸಿಂಪಡಿಸಿ ಇಟ್ಟಿರುತ್ತೇನೆ. ಬೆಳಿಗ್ಗೆ ಎದ್ದವಳೇ ತೊಳೆದುಹಾಕುತ್ತೇನೆ. ರಾತ್ರಿಯ ವೇಳೆ ನೀವು ಮಾತ್ರ ಸ್ವಲ್ಪ ಜಾಗ್ರತೆ'' ಎಂದಿದ್ದಳು. ಆದರೂ ಆಕೆ ಕೊಟ್ಟ ಎಚ್ಚರಿಕೆಯನ್ನು ಮರೆತು ರಾತ್ರಿ ಜಾರಿ ಬಿದ್ದು ಕಾಲು ಮುರಿದುಕೊಂಡಿದ್ದೆ ನಾನು. ಎಂದೇ ಅದರ ನೆನಪು.

''ಸರಿ, ಮೊನ್ನೆ ಮಧ್ಯಾಹ್ನವೂ ಹೀಗೆಯೇ ಆಯಿತು. ಅಂದೂ ಹೆಂಡತಿ ಮನೆಯಲ್ಲಿರಲಿಲ್ಲ. ನಾನು ನಿದ್ದೆಗೆ ಜಾರುಹೋಗುತ್ತಿರುವಾಗಲೇ ಕರೆಗಂಟೆ ಬಾರಿಸಿತು. ಎದ್ದುಹೋಗಿ ಕದ ತೆರೆದ ನನಗೆ ಇದಿರಾದವನು ಒಬ್ಬ ತರುಣ. ಟಿಪ್‌ಟಾಪ್ ಆಗಿದ್ದ. ನೆಕ್ ಟೈ ಕಟ್ಟಿಕೊಂಡಿದ್ದ ಬೇರೆ. ಆತನ ಒಂದು ಕೈಯಲ್ಲಿ ರಟ್ಟಿನ ಒಂದು ಬಾಕ್ಸ್ ಇತ್ತು. ಮತ್ತೊಂದರಲ್ಲಿ ಒಂದು ಚೀಲ ನೇತಾಡುತ್ತಿತ್ತು.

''ನಮಸ್ಕಾರ ಸಾರ್'' ಎಂದ ಆತ.

ನಾನೂ ನಮಸ್ಕಾರ ಸಲ್ಲಿಸಿ ''ಏನು ಬೇಕಾಗಿತ್ತು ?'' ಎಂದು ವಿಚಾರಿಸಿದೆ.

''ನಿಮ್ಮಲ್ಲಿ ಯಾರಾದರೂ ಹೊಟ್ಟೆ ಬಂದ ಗಂಡಸರು ಇರುವರೇ ?''

ಹೊಟ್ಟೆ ಬಂದ ಗಂಡಸರು...? ನನಗೆ ವಿಚಿತ್ರವೆನಿಸಿತು. ಆಶ್ಚರ್ಯವೂ ಆಯಿತು. ಈಗ ಗಂಡಸರಿಗೂ ಹೊಟ್ಟೆ ಬರಲು ಪ್ರಾರಂಭವಾಯಿತೇ ? ಸರಿಹೋಯ್ತು. ಕಲಿಕಾಲ. ಇನ್ನೇನೇನು ನಡೆಯ ಲಿದೆಯೋ ? ಅಥವಾ ಇದು ನಿದ್ದೆಯ ಮಂಪರು ಅಲ್ಲ ತಾನೇ ? ಕಿವಿ ಸರಿಯಾಗಿ ಕೆಲಸ ಮಾಡುತ್ತದಲ್ಲವೇ ಎಂದುಕೊಂಡು ನನ್ನ ಕಿವಿಯನ್ನು ನಾನೇ ತುಸು ಕಿವುಚಿ ನೋಡಿದೆ. ಎಲ್ಲಾ ಸರಿಯಾಗಿತ್ತು.

ನಾನು ಆಶ್ಚರ್ಯಪಟ್ಟುಕೊಂಡು ಕಣ್ಣು ಬಾಯಿ ಬಿಡುತ್ತಿರುವುದನ್ನು ಕಂಡ ಆತನೆಂದ - ''ಕ್ಷಮಿಸಿ, ನನ್ನ ಮಾತಿನ ಅರ್ಥ ಹಾಗಲ್ಲ. ಡೊಳ್ಳು ಹೊಟ್ಟೆಯವರು ಎಂದು. ಅಂತಹವರು ಯಾರಾದರೂ ಇಲ್ಲಿ ನಿಮ್ಮಲ್ಲಿ ಇದ್ದಾರೆಯೇ ?''

ನನ್ನ ಬಳಿ ಹೊಟ್ಟೆ ಇತ್ತು. ಮೆಲ್ಲನೆ ಮುಟ್ಟಿ ನೋಡಿಕೊಳ್ಳುವಂತಾಯಿತು. ಖಂಡಿತ ಅಷ್ಟು ಡೊಳ್ಳಾಗಿರಲಿಲ್ಲ ಅದು !

''ಹೋ... ಹಾಗೋ ? ಯಾಕೆ, ಅವರ ಡೊಳ್ಳು ಹೊಟ್ಟೆಯಿಂದ ನಿಮಗೆ ಏನಾಗಬೇಕು ?''

''ಅಲ್ಲ, ಅವರ ಹೊಟ್ಟೆಯಿಂದ ನನಗೇನೂ ಆಗಬೇಕಾಗಿಲ್ಲ, ಎಲ್ಲಾ ಆಗಬೇಕಾಗಿರುವುದು ಅವರಿಗೇ. ಈಗ ನೋಡಿ, ದೊಡ್ಡ ಹೊಟ್ಟೆ ಅದು ಚಂದ ಕಾಣಿಸುತ್ತದೆಯೇ ? ಆ ಹೊಟ್ಟೆ ಸಣ್ಣಗಾಗಬೇಡವೇ ? ಅದಕ್ಕಾಗಿ ನನ್ನೊಡನೆ ಒಂದು ಉಪಕರಣವಿದೆ. ಅದರ ಸಹಾಯದಿಂದ ಅವರು ತಮ್ಮ ಹೊಟ್ಟೆಯನ್ನು ಕರಗಿಸಿಕೊಳ್ಳ ಬಹುದು ಮತ್ತು ಸುಂದರವಾಗಿ ಕಾಣಿಸಿಕೊಳ್ಳಬಹುದು. ಹೆಚ್ಚೇನೂ ಕಷ್ಟವಿಲ್ಲ, ದಿನಾ ಒಂದರ್ಧ ಗಂಟೆ ಈ ಉಪಕರಣ ಬಳಸಿ ವ್ಯಾಯಾಮ ಮಾಡಿದರಾಯಿತು. ಒಂದು ತಿಂಗಳೊಳಗೆ ಹೊಟ್ಟೆ ಪೂರ್ಣ ಇಳಿದುಹೋಗುವುದು. ಅದು ಗ್ಯಾರಂಟಿ.''

'ಮುಖ್ಯವಾಗಿ ಇದು ಹೆಂಗಸರಿಗೇ ಉಪಯೋಗಕ್ಕೆ ಬರುವಂತಹುದು. ಹೆಚ್ಚಾಗಿ ಹೊಟ್ಟೆ ಬರುವುದು ಅವರಿಗೇ ಅಲ್ವೇ ?'- ಎಂದು ಹೇಳಬೇಕೆನಿಸಿತು; ಹೇಳಲಾಗಲಿಲ್ಲ.

ಈ ಸೇಲ್ಸ್‌ಮನ್‌ಗಳೆಂದರೆ ಮಹಾ ಬುದ್ಧಿವಂತರು. ಗಿರಾಕಿಗಳನ್ನು ಹೇಗೆ ವಶಪಡಿಸಿಕೊಳ್ಳುವುದು ಎಂಬುದು ಅವರಿಗೆ ಚೆನ್ನಾಗಿ ಗೊತ್ತು.

ಆತ ತನ್ನ ಕೈಯಲ್ಲಿದ್ದ ರಟ್ಟಿನ ಬಾಕ್ಸನ್ನು ಕೆಳಗಿಟ್ಟು ಬಿಡಿಸಿ ತೋರುವುದರಲ್ಲಿದ್ದ.

''ತಾಳಿ, ಅದನ್ನು ಇಲ್ಲಿ ಬಿಡಿಸಬೇಡಿ, ಸದ್ಯ ನಮ್ಮಲ್ಲಿ ಎಲ್ಲರ ಹೊಟ್ಟೆಗಳೂ ಸರಿಯಾಗಿಯೇ ಇವೆ. ಅವು ಎಚ್ಚತ್ತರೆ ಆಮೇಲೆ ನೋಡೋಣ ! ನೋಡಿ ರಸ್ತೆಯ ಆಚೆ ಕಡೆ ಬಿಲ್ಡಿಂಗ್ ಇದೆಯಲ್ಲಾ, ಅದರ ಒಂದನೇ ಮಾಳಿಗೆಯಲ್ಲಿ ಒಬ್ಬರಿದ್ದಾರೆ. ರಾಮರಾಯರು ಅಂತ. ಸದಾ ಅವರು ತಮ್ಮ ದೊಡ್ಡ ಹೊಟ್ಟೆಯನ್ನು ಅಲುಗಾಡಿಸುತ್ತಾ ತಿರುಗಾಡುತ್ತಿರುವುದನ್ನು ನೋಡುವಾಗ ಪಾಪ ಅನಿಸುತ್ತೆ. ಅವರಲ್ಲಿಗೆ ಹೋದರೆ ನಿಮ್ಮ ಕೆಲಸ ಆದರೂ ಆಗಬಹುದು'' ಅಂದೆ.

ನನ್ನದು ಸ್ವಲ್ಪ ಹೆಚ್ಚೇ ಆಯಿತು. ಯಾಕೆ ಬೇಕಿತ್ತು ಅಧಿಕ ಪ್ರಸಂಗ, ಅಲ್ವೇ?

''ಥ್ಯಾಂಕ್ಸ್'' ಎಂದೆನ್ನುತ್ತಾ ಆತ ತನ್ನ ದಾರಿ ಹಿಡಿದ.

ನಾನು ಹಾಗೆಯೇ ಮಲಗಿದೆ. ಏಕೋ ನಿದ್ದೆ ಮಾತ್ರ ನನ್ನ ಬಳಿ ಸುಳಿಯಲಿಲ್ಲ.

ರಾತ್ರಿ ಹೆಂಡತಿಯೊಡನೆ ಈ ಪ್ರಸಂಗದ ಮಾತೆತ್ತಿದೆ.

''ಇಂದು ಮಧ್ಯಾಹ್ನ ಯಾರೋ ಬಂದಿದ್ದರು ನೋಡು. ಇಲ್ಲಿ ಹೊಟ್ಟೆ ಬಂದವರು ಯಾರಾದರೂ ಇರುವರೇ ಎಂದು ಕೇಳಿದರು''

''ಅವರು ಬಹುಶಃ ಮುನಿಸಿಪಾಲಿಟಿಯವರು ಇದ್ದಿರಬಹುದು. ನೀವೇನೆಂದಿರಿ ?'' ಎಂದು ಆಕೆ ಕೊಂಕು ನುಡಿದಂತೆ ನುಡಿದು ನಕ್ಕಳು. ಆದರೆ ನಾನು ಸುಮ್ಮನೆ ಬಿಡುವವನೇ !

''ಇಲ್ಲ, ಪ್ರಾಯ ಮೀರಿದೆ ಅಂದೆ.''

''ಥೂ ನಿಮ್ಮ...! ಹಾಗಂದಿರಾ ?''

''ಏಕೆ, ನಿನ್ನ ಪ್ರಾಯ ಮೀರಿಲ್ಲವೇ ?''

''ಸಾಕು ಸುಮ್ಮನಿರಿ'' ಎಂದಳಾಕೆ.

ನಂತರ ನಡೆದುದನ್ನೆಲ್ಲಾ ವಿವರಿಸಿ ಹೇಳಿದೆ. ಕೇಳಿದಳು, ನಂತರ ಅಂದಳು -

''ನಿಮಗೂ ಈಗ ಕೆಲಸವಿಲ್ಲದೆ ಬರಿಯೇ ಉಂಡು, ತಿಂದು, ಮಲಗಿ, ನಿದ್ರಿಸಿ ಹೊಟ್ಟೆ ಬರಲು ಪ್ರಾರಂಭಿಸಿದೆ. ಸ್ವಲ್ಪ ನೋಡಿಕೊಳ್ಳಿ.''

''ಬರಲಿ, ಅದಕ್ಕೇನಂತೆ ! ಹೆರಿಗೆಗೆ ಹೇಗೂ ನೀನಿರುವೆಯಲ್ಲಾ ?'' ಎಂದು ಚಟಾಕಿ ಹಾರಿಸಿದೆ.

''ಥೂ ! ಎಲ್ಲಾ ಬಿಟ್ಟವರು, ಒಂದಿಷ್ಟೂ ನಾಚಿಕೆ ಎಂಬುದಿಲ್ಲ ನಿಮಗೆ'' ಎಂದಳಾಕೆ.

ಕೊನೆಗೆ ''ಹೊಟ್ಟೆ ಬಂದರೆ ನಾಚಿಕೆ ಏಕೆ ? ನಾಚಿಕೆಪಟ್ಟುಕೊಂಡರೆ ಅದು ಬರುವುದು ನಿಲ್ಲುತ್ತದೆಯೇ ?'' ಎಂದ ನನ್ನ ಮಾತು ಆಕೆಗೆ ಕೇಳಿಸಲಿಲ್ಲ, ಕೇಳಿಸಿಕೊಳ್ಳಲು ಆಕೆ ಅಲ್ಲಿರಲಿಲ್ಲ. ಒಳ ತೆರಳಿದ್ದಳು.


ಪ್ರಿಯತಮ

ನಂ. ೧೭, ಉಪಾಕ್ರಮ್, ಲಿಬರ್ಟಿ ಗಾರ್ಡನ್

ಮಲಾಡ್ (ಪಶ್ಚಿಮ), ಮುಂಬಯಿ-೪೦೦ ೦೬೪


೨೩ನೇ ಪುಟದಿಂದ

ಅವಳು ಚೀಲ ಹೊತ್ತುಕೊಂಡು ನಡೆದು ಬರುವುದು ಕಷ್ಟ ಒಂದು ಸಲ ಹೋಗಿ ಕರೆದುಕೊಂಡು ಬಾ' ಎಂದು ಮಗಳಿಗೆ ಅಜ್ಜಿಯ ಒಗ್ಗರಣೆ. ಅಜ್ಜಿಯ ಒತ್ತಾಸೆ ಬೇರೆ ಇದ್ದುದ್ದರಿಂದ ಗೆಲ್ಲುತ್ತಿದ್ದುದ್ದು ಮಗಳೇ ಅನ್ನಿ !

* * *

''ಪೆಟ್ರೋಲ್ ಬೆಲೆ ವಿಪರೀತ ಏರಿದೆ. ನೋಡಿ, ಇವತ್ತಿನ ದಿನಪತ್ರಿಕೆಯಲ್ಲಿ ಬಂದಿದೆ. ಇನ್ನು ನೀವು ಕಾರಲ್ಲಿ ಕಚೇರಿಗೆ ಹೋಗಬೇಡಿ. ಬೈಕ್‌ನಲ್ಲಿ ಹೋದರಾಯಿತು. ಪೆಟ್ರೋಲ್ ಕಡಿಮೆ ಸಾಕು.'' - ಒಂದು ಬೆಳಗ್ಗೆ ನಾನು ಏಳುತ್ತಿದ್ದಂತೆಯೇ ಅಪ್ಪಣೆ ಕೊಟ್ಟಳು ಮನೆಯಾಕೆ.

ನನ್ನ ಕಾರಿನ ಮೇಲೆ ಇವಳ ಕಣ್ಣು ಬಿತ್ತಲ್ಲ. ಕಷ್ಟದಿಂದ ಸಾಲ ಮಾಡಿ ಘನತೆಗೋಸ್ಕರ ಕಾರು ಕೊಂಡದ್ದು ನಾನು. ಜುಮ್ಮೆಂದು ಕಾರಲ್ಲಿ ಹೋಗುವುದನ್ನು ತಪ್ಪಿಸುತ್ತಿದ್ದಾಳಲ್ಲ. ಸಹಾಯಕ್ಕಾಗಿ ಅಲ್ಲೇ ದಿನಪತ್ರಿಕೆ ತಿರುವುತ್ತಿದ್ದ ಮಗಳನ್ನು ನೋಡಿದೆ.

''ಅಪ್ಪ ನೀನು ಸದ್ಯ ಬಚಾವಾದೆ. ಬೈಕಿನಲ್ಲಿ ಹೋಗಲು ಅನುಮತಿ ಕೊಟ್ಟಿದ್ದಾಳೆ. ಸೈಕಲ್ ಸಾಕು, ಇಲ್ಲವೇ ಸಿಟಿ ಬಸ್ಸಲ್ಲಿ ಹೋಗಿ ಅನ್ನಲಿಲ್ಲವಲ್ಲ!'' ಎಂದು ಹೇಳಿ ಮಾಯವಾದಳು ಘಾಟಿ ಹುಡುಗಿ.

ಸಿಟಿ ಬಸ್ಸಿಗೆ ಗಂಟೆಗಟ್ಟಲೆ ಕಾಯುತ್ತ, ಆ ಬಸ್ಸಲ್ಲಿ ನೇಲುತ್ತ ತಡವಾಗಿ ಕಛೇರಿ ತಲಪಿದ್ದಕ್ಕೆ ಮೇಲಧಿಕಾರಿಯಿಂದ ಬೈಗಳು ತಿನ್ನುತ್ತಿರುವ ಕಲ್ಪನೆ ಮೂಡಿತು. ಕಲ್ಪನೆಯೇ ಭಯಂಕರ. ಅಬ್ಬ ! ಅಂಥ ಸ್ಥಿತಿ ನನಗೆ ಬರಲಿಲ್ಲವಲ್ಲ ಬಚಾವ್. ನನ್ನ ಅರ್ಧಾಂಗಿ ಸೈಕಲಲ್ಲಿ ಹೋಗಿ ಎನ್ನುವವಳೇ. ಏಕೆಂದರೆ ಅವಳು ಸೈಕಲಲ್ಲಿ ಎಲ್ಲಿಗೆ ಬೇಕಾದರೂ ಹೋಗುತ್ತಾಳೆ. ಅವಳ ಬಳಿ ಘನತೆಯ ಪ್ರಶ್ನೆ ಎಂದು ಹೇಳಿ ಬಚಾವಾಗುವಂತಿಲ್ಲ. ಒಮ್ಮೆ ಅವಳನ್ನು ಒಬ್ಬರು 'ನಿಮಗೆ ಸೈಕಲಲ್ಲಿ ಹೋಗಲು ನಾಚಿಕೆಯಾಗುವುದಿಲ್ಲವೇ ? ಕೀಳರಿಮೆ ಕಾಡುವು ದಿಲ್ಲವೇ ?' ಎಂದು ಕೇಳಿದರಂತೆ. ಅದಕ್ಕುತ್ತರವಾಗಿ ಇವಳು ''ಸೈಕಲ್ ಬಿಡಲು ನಾಚಿಕೆ ಏಕೆ ? ನಾನೇನು ಮಾಡಬಾರದ ಕೆಲಸ ಮಾಡುತ್ತಿದ್ದೇನೆಯೇ ? ಸೈಕಲ್ ಕದ್ದು ತಂದು ಬಿಡುತ್ತೇನೆಯೇ ? ಈ ಘನತೆಯಿಂದಾಗಿ ನಮ್ಮ ದೇಶದ ಜನ ಇಷ್ಟು ಹದೆಗೆಟ್ಟಿರುವುದು ! ನಮ್ಮ ಜನರಿಗೆ ಯಾವ ವಿಷಯದಲ್ಲಿ ಕೀಳರಿಮೆ ಇರಬೇಕೋ ಅಂಥ ವಿಷಯದಲ್ಲಿ ಇರುವುದಿಲ್ಲ. ಸೈಕಲ್‌ನಲ್ಲಿ ಹೋಗಲು ಕೀಳರಿಮೆ, ನಡೆದುಕೊಂಡು ಹೋಗಲು ಕೀಳರಿಮೆ'' ಇತ್ಯಾದಿ ಹೇಳಿ ಅವರ ಜನ್ಮ ಜಾಲಾಡಿಬಿಟ್ಟಳಂತೆ. ಯಾಕಪ್ಪ ಇವರನ್ನು ಈ ಪ್ರಶ್ನೆ ಕೇಳಲು ಹೋದೆ ಎಂದು ಅವರಿಗೆ ಅನಿಸಿರಬಹುದು.

''ತನ್ನಂತೆ ಪರರ ಬಗೆದೊಡೆ ಕೈಲಾಸವಕ್ಕು'' ಎಂದು ಸರ್ವಜ್ಞ ಬಹಳ ಹಿಂದೆಯೇ ಹೇಳಿದ್ದಾನೆ. ಈಗ ನನ್ನ ಹೆಂಡತಿಯನ್ನು ಸರ್ವಜ್ಞ ನೋಡಿದ್ದರೆ ಏನು ಬರೆಯುತ್ತಿದ್ದನೋ ? ತನ್ನಂತೆ ಪರರ ಬಗೆಯುವ ಇವಳ ಚಟವನ್ನು ಹೇಗೆ ಬಿಡಿಸುವುದು ಎಂದು ತಲೆ ತುರಿಸಿ ತುರಿಸಿ ನನ್ನ ತಲೆಯ ಅರ್ಧ ಭಾಗ ಕೂದಲು ಉದುರಿದೆ. ಇನ್ನೂ ಪರಿಹಾರ ಮಾತ್ರ ಸಿಕ್ಕಿಲ್ಲ. ಈಗ ಆ ವಿಷಯವನ್ನು ಬಿಟ್ಟು ತೆಪ್ಪಗಿದ್ದು, ಇರುವಷ್ಟು ಕೂದಲನ್ನು ಉಳಿಸಿಕೊಂಡಿದ್ದೇನೆ !


ರುಕ್ಮಿಣಿ ಮಾಲಾ

ಮನೆ ಸಂಖ್ಯೆ ೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ

ಸರಸ್ವತೀಪುರ, ಮೈಸೂರು - ೫೭೦೦೦೯

# ಪರಿಸರ – ಅಭಿವೃದ್ಧಿ ಅಂತರ್ ಸಂಘರ್ಷದಲ್ಲಿ ಕುದುರೆಮುಖ

*ಕುದುರೆಮುಖ ಗಣಿಗಾರಿಕೆ ವಿವಾದದಲ್ಲಿದೆ. ಗಣಿ ಮುಂದುವರಿಸಬೇಕೇ ಬೇಡವೇ ಎಂಬುದು ಕೇವಲ ಒಂದು ವಾದಕ್ಕೆ ಸೀಮಿತವಾಗಿಲ್ಲ. ಗಣಿ ಮುಂದುವರಿದರೆ ತುಂಗಾ ಭದ್ರಾ ನದಿ ಅವಲಂಬಿತ ಜನರ ಆತಂಕಗಳು ತೀವ್ರವಾಗುತ್ತವೆ. ಮುಚ್ಚಿದರೆ ಸುಮಾರು ಹತ್ತರಿಂದ ಹದಿನೈದು ಸಾವಿರ ಗಣಿ ಆಧಾರಿತ ಕುಟುಂಬಗಳು ಬೀದಿಪಾಲಾಗುತ್ತವೆ. ಇದೆಲ್ಲಕ್ಕಿಂತ ಮಹತ್ವವಾದದ್ದು ಪರಿಸರ ಮತ್ತು ಅಭಿವೃದ್ಧಿ ವೈರುಧ್ಯಗಳ ಬದಲಾಗಿ ಪರಸ್ಪರ ಪೂರಕವಾಗಿರಬೇಕು. ಅದು ಕುದುರೆಮುಖ ಗಣಿ ವಿಷಯದಲ್ಲಿ ಸಾಧ್ಯವೇ ಎಂಬುದನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಈ ಲೇಖನಕ್ಕೆ ಪ್ರತಿಯಾಗಿ, ಪೂರಕವಾಗಿ ಬರುವ ಅಭಿಪ್ರಾಯಗಳಿಗೆ ಸ್ವಾಗತ. ಬರಹಗಳು ಸಂಕ್ಷಿಪ್ತವಾಗಿರಬೇಕು.*

ಡಾ|| ಸಿದ್ದನಗೌಡ ಪಾಟೀಲ



*ಬೆಟ್ಟದಿಂದ ಬರುವ ಸಂರಕ್ಷಿತ ಅದಿರು ಗುಡಾಣ*

**'ತುಂಗಾ ಮೂಲ ಉಳಿಸಿ'** ಚಳುವಳಿ ಇತ್ತೀಚಿನ ದಿನಗಳಲ್ಲಿ ತೀವ್ರವಾಗುತ್ತಿದೆ. ಪರಿಸರ ಚಳುವಳಿಗಾರರು, ಪರಿಸರವಾದಿಗಳು, ಸ್ವಯಂಸೇವಾ ಸಂಘಟನೆಗಳವರು ದಿನನಿತ್ಯದ ಸುದ್ದಿಯಲ್ಲಿದ್ದಾರೆ. ಶೃಂಗೇರಿ ತಾಲ್ಲೂಕಿನ ಗಂಗಾ ಮೂಲ ಎಂಬಲ್ಲಿ ಹುಟ್ಟುವ ತುಂಗಾ-ಭದ್ರಾ ನದಿಗಳ ಉಗಮ ಸ್ಥಾನದಿಂದ ಶಿವಮೊಗ್ಗೆ ಜಿಲ್ಲೆಯ ಕೊನೆಯವರೆಗೂ (ತುಂಗ-ಭದ್ರಾ ಸಂಗಮದವರೆಗೂ) ಈ ಚಳುವಳಿ ತೀವ್ರವಾಗುತ್ತಿದೆ. ಚಳುವಳಿಗಾರರ ಅಭಿಪ್ರಾಯ ನಂತರ ಅವಲೋಕಿಸಬಹುದು. ಮೊದಲು ಅಲ್ಲಿನ ಸಾಮಾನ್ಯ ಜನರಲ್ಲಿ ಉದ್ಭವಿಸಿದ ಪ್ರಶ್ನೆ-ಆತಂಕಗಳನ್ನು ಗಮನಿಸುವುದು ಮಹತ್ವದ್ದು. ಕುದುರೆಮುಖ ಗಣಿಗಾರಿಕೆಯಿಂದಾಗಿ ಭದ್ರಾ ನದಿ ಮುಚ್ಚಿಹೋಗುತ್ತಿದೆ. ಗಣಿ ವಿಸ್ತರಣೆಯಾದರೆ ತುಂಗಾ ನದಿ ಬತ್ತಿಹೋಗುತ್ತದೆ. ಆ ಗಣಿಯಿಂದಾಗಿಯೇ ಭದ್ರಾ ನದಿ ಇಕ್ಕೆಲಗಳಲ್ಲಿ ಬೆಳೆಯ ಇಳುವರಿ ಕಡಿಮೆಯಾಗಿದೆ. ಮಳೆಗಾಲ ಕಡಿಮೆಯಾಗಿರುವುದಕ್ಕೆ ಆ ಗಣಿಯೇ ಕಾರಣ. ಗಣಿಯಿಂದಾಗಿಯೇ ಅರಣ್ಯ ಹಾಳಾಗಿದೆ. ಗಣಿಯಲ್ಲಿನ ಮಣ್ಣು ಹರಿದುಬಂದು ಭದ್ರಾ ನದಿ ತುಂಬಿಹೋಗಿದೆ. ಗಣಿಗಾರಿಕೆಯ ಕಾರಣಕ್ಕಾಗಿಯೇ ಎಂದೂ ಕಾಣದ ಸೂಕ್ಷ್ಮ ಭೂಕಂಪಗಳಾಗಿವೆ. – ಇಂಥ ಹಲವು ರೀತಿಯ ಪ್ರಚಾರ ದಿನನಿತ್ಯ ನಡೆದು ತುಂಗಾ-ಭದ್ರಾ ಜಲ ಫಲಾನುಭವಿಗಳು ಸಹಜವಾಗಿಯೇ ಆತಂಕಕ್ಕೊಳಗಾಗಿದ್ದಾರೆ. ಈ ಪ್ರಶ್ನೆಗಳನ್ನು ವಾಸ್ತವ ನೆಲೆಗಟ್ಟಿನ ಮೇಲೆ ಚರ್ಚಿಸುವುದೊಳಿತು. ಇಲ್ಲಿ ವಾಸ್ತವ ಭಾವುಕತೆ ಹಾಗೂ ತಾರ್ಕಿಕತೆಯ ಮಧ್ಯದಲ್ಲಿದೆ. ಅತಿ ತಾರ್ಕಿಕತೆ ಹಾಗೂ ಅತಿ ಭಾವುಕತೆ ವಾಸ್ತವವನ್ನು ಮುಚ್ಚಿಹಾಕಿ ಅನಾಹುತಗಳನ್ನುಂಟುಮಾಡುವ ಅಪಾಯವಿದೆ. ಈ ಮೇಲಿನ ಆತಂಕಕಾರಿ ಸುದ್ದಿಗಳಲ್ಲಿ ಕೆಲವು ವಾಸ್ತವಕ್ಕೆ ಹತ್ತಿರವಿದ್ದರೆ, ಇನ್ನೂ ಕೆಲವು ಉತ್ಪ್ರೇಕ್ಷೆ ಹಾಗೂ ಅತಿಭಾವುಕತೆಯಿಂದ ಕೂಡಿವೆ. ಇಂಥ ಸುದ್ದಿಗಳನ್ನು ಹರಡುವವರಲ್ಲಿ ಎರಡು ರೀತಿಯ ಜನರಿದ್ದಾರೆ. ಮೊದಲನೆಯವರು ಪರಿಸರದ ಹೆಸರಿನಲ್ಲಿ ಪ್ರಸಿದ್ಧಿ ಪಡೆವವರು ಹಾಗೂ ವಿದೇಶಗಳಿಂದ ವಿವಿಧೋದ್ದೇಶಕ್ಕಾಗಿ ಹಣ ಪಡೆದು ಪರಿಸರದ ಬಗ್ಗೆ ಮಾತನಾಡಿ ದಾಖಲೆಗಳನ್ನು ಸೃಷ್ಟಿಸಿ ಹೆಚ್ಚಿನ ಹಣಕ್ಕಾಗಿ ಮತ್ತೆ ವಿದೇಶಗಳಿಗೆ ಅರ್ಜಿ ಗುಜರಾಯಿಸುವ 'ಕೆಲವು' ಸ್ವಯಂ ಸೇವಾ ಸಂಸ್ಥೆಗಳು. ಎರಡನೆಯ ಗುಂಪು ೬೦ರ ದಶಕದ ಆರಂಭದಿಂದಲೂ ವ್ಯವಸ್ಥಿತವಾದ ಸಾಹಿತ್ಯ ಸಂಗ್ರಹಣೆಯ ಮೂಲಕ ಚಳುವಳಿಯನ್ನಾರಂಭಿಸಿದ ಕರ್ನಾಟಕ ವಿಮೋಚನಾ ರಂಗದವರು. ಇವರ ಅಭಿಪ್ರಾಯಗಳ ಬಗ್ಗೆ ಭಿನ್ನಾಭಿಪ್ರಾಯ ಹೊಂದಬಹುದು. ಆದರೆ ಆಶಯಗಳ ಜೊತೆಗಲ್ಲ. ಈ ಎರಡನೇ ಗುಂಪಿನವರ ಜೊತೆ ಚರ್ಚಿಗಿಳಿಯಬಹುದು. ಆದರೆ ಮೊದಲನೆ ವರ್ಗದ ಪ್ರತಿಷ್ಠಿತರು, ಪರಿಸರವ್ಯಾಧಿಗಳ ಜೊತೆ ಚರ್ಚೆ ಅಸಾಧ್ಯ. ಕೇವಲ ಭಾವ ಪ್ರಚೋದನೆ ನೆಲೆಯಲ್ಲಿ ಮಾತನಾಡುವ ಅವರ ವಾದ ಹೀಗಿದೆ : ನಿಸರ್ಗ ಮಾನವ ನಿರ್ಮಿತವಲ್ಲ. ಅದನ್ನು ಹಾಳುಮಾಡುವ ಹಕ್ಕು ಅವನಿಗಿಲ್ಲ. ಕಾಡು ಹಾಳಾದರೆ ಮಳೆ ಇಲ್ಲ. ಗುಬ್ಬಿ ಕಾಗೆಗಳಿಗೆ ತೊಂದರೆಯಾಗುತ್ತದೆ. ನದಿಗಳು ಬತ್ತಿಹೋಗುತ್ತವೆ. ಬೆಳೆ ನಾಶ. ಇವೆಲ್ಲ ಅಂಶಗಳು ನಿಜವಿರಬಹುದು. ಆದರೆ ಕುದುರೆಮುಖ ಗಣಿಗಾರಿಕೆಯಿಂದ ಇವೆಲ್ಲ ಆಗಿವೆಯೇ ಎಂಬ ಪ್ರಶ್ನೆಗೆ ವಾಸ್ತವ ಉತ್ತರ ಸಿಗುವುದು ಕಡಿಮೆ. ನಿಸರ್ಗ ಮಡಿಲಿನ ಉತ್ಪನ್ನಗಳಿಂದಲೇ ಬದುಕುವ ಇವರ ನಿಸರ್ಗ ಪ್ರಿಯತೆ ಪ್ರಶ್ನಾರ್ಹ. ನಮಗೆ ಕಾರು ಬೇಕು, ರೈಲು ಬೇಕು, ಸ್ಕೂಟರ್ ಬೇಕು, ಬಸ್ ಬೇಕು, ವಿಮಾನ ಬೇಕು, ಎಲ್ಲ ಬೇಕು. ಆದರೆ ಅದಕ್ಕೆ ಬೇಕಾಗುವ ಕಚ್ಚಾ ವಸ್ತು ಮಾತ್ರ ಹಾಗೇ ಇರಬೇಕು. ಇದರರ್ಥ ನಿಸರ್ಗಕ್ಕೆ ಬೆಲೆಯೇ ಇಲ್ಲವೆಂದಲ್ಲ. ನಿರ್ದಿಷ್ಟ ಸಂದರ್ಭದಲ್ಲಿ ವಾಸ್ತವಾಂಶಗಳನ್ನು ಗಮನಿಸಬೇಕು.

ವಾಸ್ತವವಾಗಿ **ತುಂಗಾ ಮೂಲ ಉಳಿಸಿ** ಹೋರಾಟದ ಇವತ್ತಿನ ಸ್ಥಿತಿ ಎಂದರೆ, ತುಂಗಾ ಮೂಲವಾದ ಗಂಗಡಿಕಲ್ಲು ಗಣಿಗಾರಿಕೆಗೆ ವಿರೋಧ. ಈ ಹೋರಾಟಕ್ಕೆ ಖ್ಯಾತ ಸಾಹಿತಿ ಶ್ರೀ ಯು. ಆರ್. ಅನಂತಮೂರ್ತಿ ಇಳಿದಿದ್ದಾರೆ. ಇವರು ಚಳುವಳಿಗೆ ಇಳಿದದ್ದು ಜುಲೈ ತಿಂಗಳಲ್ಲಿ. ಆ ತನಕ ಈ ಹೋರಾಟವನ್ನು ಕವಿರಂನವರು ನಡೆಸಿದ್ದರು. ಆದರೆ ಜೂನ್ ತಿಂಗಳಲ್ಲಿಯೇ ರಾಷ್ಟ್ರೀಯ ಉದ್ಯಾನವನಕ್ಕಾಗಿ ತುಂಗಾ ಮೂಲದ ಗಂಗಡಿಕಲ್ಲನ್ನು ಸೇರಿಸಿ (ನೋಟಿಫೈಡ್) ಕೊಳ್ಳಲಾಗಿದೆ. ಆ ಪ್ರಕಾರ ಗಂಗಡಿಕಲ್ಲಿನ ಬೆಟ್ಟಗಳಲ್ಲಿ ಗಣಿಗಾರಿಕೆ ಸಾಧ್ಯವಿಲ್ಲ. ಈ ತೀರ್ಮಾನ ಬಂದಮೇಲೂ ಅನಂತಮೂರ್ತಿಯವರ ಹೋರಾಟ ಮುಂದುವರೆದದ್ದು ಸಂಶಯಕ್ಕೆಡೆಮಾಡಿಕೊಡುತ್ತದೆ. ಇದರರ್ಥ ನಮ್ಮ ಸರಕಾರ ಈ ವಲಯವನ್ನು ಉದ್ಯಾನವನದಿಂದ ಹಿಂತೆಗೆದು ಕೊಳ್ಳಲಾರದೆಂಬ ಭರವಸೆ ಏನೂ ಇಲ್ಲ. ಅದರ ಹಿಂದೆ ಬಹುರಾಷ್ಟ್ರೀಯ ಕಂಪನಿಗಳ ಒತ್ತಡವೂ ಇದೆ. ಆದರೆ ಪರಿಸರವಾದಿಗಳು, ಶ್ರೀ ಅನಂತಮೂರ್ತಿಯವರು ಈ ವಿಷಯವನ್ನು ಸ್ಪಷ್ಟಪಡಿಸಿ ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಹೋರಾಡಲು ಧ್ವನಿ ಎತ್ತಲು ಸಿದ್ಧರಿದ್ದಾರೆಯೇ ಎಂಬ ಪ್ರಶ್ನೆ ಮೂಡುತ್ತಿದೆ.

ಇನ್ನು ಜನರ ಆತಂಕದ ದೃಷ್ಟಿಯಿಂದ ಕೆಲವು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲೇಬೇಕಾಗಿದೆ. ಗಂಗಾಮೂಲವೆಂದು ಹೆಸರಿಸಲಾದ ತುಂಗಾ-ಭದ್ರಾ-ನೇತ್ರಾವತಿ ನದಿಗಳ ಉಗಮಸ್ಥಾನದಲ್ಲಿ ಗಣಿಗಾರಿಕೆಯ ವಿಸ್ತರಣೆಯನ್ನು ವಿರೋಧಿಸಬೇಕು. ಇಂದು ರಾಷ್ಟ್ರೀಯ ಉದ್ಯಾನವನದ ಕಾರಣಕ್ಕಾಗಿ ಅದನ್ನು ನೋಟಿಫೈಡ್ ಏರಿಯಾ ಎಂದು ಸಾರಿ ಗಣಿಗಾರಿಕೆಯ ವಿಸ್ತರಣೆಗೆ ನಿರಾಕರಿಸಲಾಗಿದೆ. ಆದರೆ ಬಹುರಾಷ್ಟ್ರೀಯ ಕಂಪನಿಗಳ ಒತ್ತಡದಿಂದ ಈ ವಲಯವನ್ನು ಮತ್ತೆ ಡೀನೋಟಿಫೈ ಮಾಡುವ ಯೋಚನೆಗೆ ಸರಕಾರ ಇಳಿದರೆ ಆಗ ತೀವ್ರ ಹೋರಾಟ ಅಗತ್ಯ. ಅದು ಒಂದರ್ಥದಲ್ಲಿ ಜಾಗತೀಕರಣದ ವಿರೋಧಿ ಹೋರಾಟವೇ ಆಗುತ್ತದೆ. ಇನ್ನು ಈಗಿರುವ ಗಣಿಗಾರಿಕೆ ಬಗ್ಗೆ ಇರುವ ಆತಂಕಗಳನ್ನು ಗಮನಿಸಬೇಕು. ಪರಿಸರವಾದಿಗಳು ಹಾಗೂ ಅಭಿವೃದ್ಧಿವಾದಿಗಳು ಹೀಗೆ ಎರಡೂ ಗುಂಪಿನ ಪ್ರಶ್ನೆಗಳ ಹಿನ್ನೆಲೆಯಲ್ಲಿ ಸಾಮಾನ್ಯ ಜನ ಉತ್ತರ ಕಂಡುಕೊಳ್ಳಬೇಕು. ಮೊದಲನೆಯದಾಗಿ ಅರಣ್ಯನಾಶದ ಪ್ರಶ್ನೆ. ವಿಶಾಲವಾದ ಪಶ್ಚಿಮಘಟ್ಟದ ಲಕ್ಷಾಂತರ ಬೆಟ್ಟಗಳಲ್ಲಿ ಎರಡು ಬೆಟ್ಟಗಳನ್ನು ಗಣಿಗಾಗಿ ಅಗೆಯಲಾಗಿದೆ. ಖಂಡಿತವಾಗಿ ಈ ಬೆಟ್ಟದ ಮೇಲೆ ನಿಂತಾಗ ಬಿದ್ದ ಕಲ್ಲು ಮಣ್ಣಿನ ರಾಶಿ ನೋಡಿ ಆತಂಕವಾಗುತ್ತದೆ. ಈ ಆತಂಕ ಭಾವುಕ ನೆಲೆಯಿಂದ ಬರುವಂಥದು. ಆದರೆ ಈ ಎರಡು ಬೆಟ್ಟ ಅಗೆತದಿಂದ ಪರಿಸರ ನಾಶವಾಗಿದೆಯೇ ? ಇಡೀ ಬೆಟ್ಟಗಳಲ್ಲಿ ಕಾಫಿ, ಟೀ, ಎಸ್ಟೇಟ್ ಹೆಸರಿನಲ್ಲಿ ಎಸ್ಟೇಟ್ ಮಾಲೀಕರು ಬೆಟ್ಟಗಳನ್ನು ಅನಧಿಕೃತವಾಗಿ ಅತಿಕ್ರಮಣ

ಮಾಡಿ ಕಾಡು ನಾಶ ಮಾಡಿಲ್ಲವೇ? ಹಾಗಂತ ಈ ಗಣಿಗಾರಿಕೆಯಿಂದಲೇ ಮಳೆ ಕಡಿಮೆಯಾಗಿದೆಯೇ? ಕುದುರೆಮುಖ ಗಣಿ ಆರಂಭಕ್ಕಿಂತ ಮುಂಚಿನಿಂದ ಅಂಕಿ ಅಂಶಗಳನ್ನು ನೋಡಿದರೆ ಆ ಪ್ರದೇಶದಲ್ಲಿ ಮಳೆ ಪ್ರಮಾಣ ಅಂಥ ಕಡಿಮೆಯೇನಾಗಿಲ್ಲ. ೧೯೭೮ರಲ್ಲಿ ಮಳೆ ಪ್ರಮಾಣ ೬೦೬೮.೬ ಎಂ.ಎಂ. ಇದ್ದರೆ ೧೯೯೯ರಲ್ಲಿ ೬೮೮೮.೦ ಎಂ.ಎಂ. ಇದೆ. ಈ ಮಧ್ಯೆ ೧೯೮೪-೯೨ ಹಾಗೂ ೯೭ರಲ್ಲಿ ೭ ಸಾವಿರ ಎಂ.ಎಂ.ಗಿಂತ ಹೆಚ್ಚಿಗೆ ಬಿದ್ದಿದೆ. ೧೯೯೪ರಲ್ಲಿ ೧೦೧೮೮.೦ ಎಂ.ಎಂ. ಅತಿ ಹೆಚ್ಚು ಮಳೆ ಬಿದ್ದಿದೆ. ಅತೀ ಕಡಿಮೆ ಎಂದರೆ ೧೯೬೬ರಲ್ಲಿ ಗಣಿ ಆರಂಭಕ್ಕಿಂತ ಮುಂಚೆ ೪೩೨೩.೪ ಎಂ.ಎಂ. ಮಳೆಯಾಗಿದೆ. ಇದನ್ನು ಗಮನಿಸಿದರೆ ನದೀ ದಡದ ಹಳ್ಳಿಗಳಲ್ಲಿ ಮಳೆ ಕಡಿಮೆ ಎಂದು ಮಾಡಿದ ಪ್ರಚಾರ ಸಂಶಯಾಸ್ಪದವಾಗಿ ಕಾಣಿಸುತ್ತದೆ. ಪ್ರತಿಯಾಗಿ ಕಂಪನಿಯವರು ಪರಿಸರ ರಕ್ಷಣೆಗೆ ದೊಡ್ಡ ಪ್ರಮಾಣದ ಗಿಡ ನೆಟ್ಟಿದ್ದೇವೆಂದು ಅಂಕಿ ಸಂಖ್ಯೆ ಕೊಡುತ್ತಾರೆ. ಆದರೆ ಅವರು ಬೆಳೆದದ್ದೆಲ್ಲಾ ಆಕೇಶಿಯಾ ಮರಗಳನ್ನೇ. ಸ್ಥಳೀಯ ಮರಗಿಡಗಳನ್ನು ಬೆಳೆಸಲು ಅವರೂ ಪ್ರಯತ್ನ ಮಾಡಿಲ್ಲ. ಇನ್ನು ಭದ್ರ ಡ್ಯಾಂನಲ್ಲಿ ಹೂಳು ತುಂಬಿದೆ ಎನ್ನುವುದು. ಆ ಹೂಳು ಎಲ್ಲ ಕುದುರೆಮುಖದಿಂದಲೇ ಹೋದದ್ದು ಅಲ್ಲ, ಸ್ವಲ್ಪ ಅಂಶ ಹೋಗಿರಬಹುದು. ಹಾಗಾದರೆ ಗಣಿಗಳಿಲ್ಲದ ಭಾಗದಲ್ಲಿಯೂ ಕೆರೆಕಟ್ಟೆ-ಡ್ಯಾಂಗಳಲ್ಲಿ ಹೂಳು ಬರುತ್ತದಲ್ಲಾ : ಅದರ ಹಾಗೂ ಭದ್ರಾ ಡ್ಯಾಂನ ಹೂಳಿಗೂ ವ್ಯತ್ಯಾಸ ಏನಾದರೂ ಇದೆಯೋ ? ಸರಕಾರ ಹೆಚ್ಚಿನ ಅಧ್ಯಯನ ಮಾಡಿ ಈ ವಿಷಯ ತಿಳಿಸಬೇಕು. ಆದರೂ ಗಣಿ ಪ್ರದೇಶದ ಮೇಲಿನಿಂದ ದೊಡ್ಡ ಪ್ರಮಾಣದ ಮಳೆಯಾದಾಗ ಅಲ್ಲಿರುವ ಚೆಕ್ ಡ್ಯಾಂ ಸಾಕಾಗುತ್ತದೆಯೋ ಎಂಬುದನ್ನು ಖಚಿತಪಡಿಸಬೇಕು. ಭದ್ರಾ ನದಿ ಇಕ್ಕೆಲಗಳಲ್ಲಿ ಇಳುವರಿ ಕಡಿಮೆಯಾಗಿದೆ ಎಂಬ ಸುದ್ದಿ ಹಾಗೂ ಅದು ಕುದುರೆಮುಖದ ಕಬ್ಬಿಣದ ಅದಿರಿನಿಂದಲೇ ಆಗಿದೆ ಎಂಬುದಕ್ಕೆ ಸಾಕಷ್ಟು ಪುರಾವೆಗಳಿಲ್ಲ. ಇನ್ನು ಎಲ್ಲಕ್ಕಿಂತ ಮಹತ್ವವಾದದ್ದು ಭೂಕಂಪವಾಗುತ್ತದೆಂಬ ವಿಷಯ. ಈ ಕುರಿತು ವಿವರವಾದ ಅಧ್ಯಯನ ನಡೆಯಬೇಕು. ಭೂಕಂಪಗಳಾಗುತ್ತಿದ್ದುದೇ ನಿಜವಾದರೆ ಈಗಿರುವ ಸ್ಥಳದಲ್ಲಿ ಇನ್ನೈದು ವರ್ಷ ವಿಸ್ತರಿಸಿದರೆ ಆದಾದ ನಂತರ ಬರುವುದು ಗಟ್ಟಿಕಲ್ಲಿನ ಆದುರು. ಅದನ್ನು ಸ್ಫೋಟಕಗಳ ಮೂಲಕ ಸಿಡಿಸಿದರೆ ಆಗುವ ಪರಿಣಾಮಗಳೇನೆಂಬ ಬಗ್ಗೆ ಕಾಳಜಿ ವಹಿಸಬೇಕು.



*ಬೆಟ್ಟದ ತುದಿಯಿಂದ ಕಬ್ಬಿಣ ಅದಿರು ತೆಗೆಯುತ್ತಿರುವ ಯಂತ್ರಗಳು*

ಈ ಮೇಲಿನ ಎಲ್ಲ ಪ್ರಶ್ನೆಗಳನ್ನು ಚರ್ಚಿಸುವಾಗ ಯಾವುದೇ ರೀತಿಯ ಕೈಗಾರಿಕೆಯಿಂದ ರಿಸ್ಕ್ ಇದ್ದೇ ಇರುತ್ತದೆ. ಅದರಿಂದ ಉಂಟಾಗುವ ಆತಂಕಗಳನ್ನು ಸರಕಾರ ಕಾಲಕಾಲಕ್ಕೆ ಪರಿಹರಿಸಬೇಕು. ಇಂಥ ಆತಂಕಗಳು ಇಲ್ಲಿಯೂ ಇವೆ. ಆದರೆ ಮೇಲ್ನೋಟಕ್ಕೆ ಬಹುತೇಕ ಆತಂಕಗಳು ಪರಿಸರ ಹಾಗೂ ಗಣಿಗಾರಿಕೆ ಎರಡನ್ನೂ ಗಮನದಲ್ಲಿಟ್ಟುಕೊಂಡು ನಿರ್ವಹಿಸಿದರೆ ನಿವಾರಣೆಯಾಗುತ್ತವೆ. ಆದರೆ ದೇಶದ ರಕ್ಷಣಾ ಖಾತೆಯಲ್ಲಿಯೇ ಹಗರಣವೆಸಗಿ ತೆಹಲ್ಕಾ ಮೂಲಕ ಸಿಕ್ಕಿಬಿದ್ದ ರಾಜಕಾರಣಿಗಳು ಹಾಗೂ ಅಧಿಕಾರಿಗಳನ್ನು ನೋಡಿದರೆ ಕುದುರೆಮುಖದಲ್ಲಿನ ಪರಿಸರ ಇಲಾಖೆ ಹಾಗೂ ಸರಕಾರದ ಈ ಕುರಿತ ಅಂಕಿಅಂಶಗಳನ್ನು ಜನ ಸಂಶಯದಿಂದಲೇ ನೋಡುತ್ತಾರೆ. ಪರಿಸರವಾದಿ ಹಾಗೂ ಸ್ವಯಂ ಸೇವಾ ಸಂಘಟನೆಗಳಿಗಿಂತ ಭಿನ್ನವಾಗಿ ಈ ಸಮಸ್ಯೆಯನ್ನು ನೋಡುವ ಕವಿರಂನವರು ಮಹತ್ವದ ಪ್ರಶ್ನೆ ಎತ್ತಿದ್ದಾರೆ. ಈಗಾಗಲೇ ಇಲ್ಲಿ ತಯಾರಾಗುವ ಕಬ್ಬಿಣ ಜೆ. ಪಿ. ಬಹುರಾಷ್ಟ್ರೀಯ ಕಂಪೆನಿಯ ಜೇಬು ತುಂಬಿಸುತ್ತಿದೆ ಎಂದು. ಆದರೆ ಈಗಾಗಲೇ ಕುದುರೆಮುಖ ಕಂಪನಿಯ ಶೇ. ೭೪ ಶೇರುಗಳನ್ನು ಸರಕಾರ ಹಿಂತೆಗೆದುಕೊಂಡು ನಿಪ್ಪಾನ್ ಕಂಪನಿಗೆ ಮಾರಾಟ ಮಾಡುವ ಹುನ್ನಾರ ನಡೆಸಿದೆ. ಕೇಂದ್ರ ಸರಕಾರ ಈಗಾಗಲೇ ಈ ಕಂಪನಿ ಮಾರಿಕೊಳ್ಳಲು ತೀರ್ಮಾನ ಮಾಡಿದೆ. ಆದರೆ ಜಪಾನ್ ಮೂಲದ ಈ ನಿಪ್ಪಾನ್ ಕಂಪನಿ ಗಂಗಾಮೂಲದ ಗಂಗಡಿಕಲ್ಲು ಹಾಗೂ ಭದ್ರಾ ದಡದ ನೆಲ್ಲಿಬೀಡು ಪ್ರದೇಶಕ್ಕೆ ವಿಸ್ತರಣೆ ಮಾಡಿದರೆ ಮಾತ್ರ ಇದನ್ನು ಖರೀದಿಸುತ್ತದೆ. ಕೇಂದ್ರ ಸರಕಾರ ಈಗಾಗಲೇ ಬಾಲ್ಕೋ ಮತ್ತಿತರ ಸಾರ್ವಜನಿಕ ಉದ್ದಿಮೆಗಳಲ್ಲಿ ನಡೆದುಕೊಂಡ ರೀತಿ ನೋಡಿದರೆ ದೇಶದ ಹಿತಾಸಕ್ತಿಯನ್ನು ಬಲಿಕೊಟ್ಟಾದರೂ ಜಪಾನ್‌ನ ನಿಪ್ಪಾನ್ ಕಂಪನಿಗೆ ಈ ಕೈಗಾರಿಕೆಯನ್ನು ಮಾರಿದರೆ ಆಶ್ಚರ್ಯವೇನಿಲ್ಲ. ಕೇಂದ್ರದ ಬಿ.ಜೆ.ಪಿ. ಸರಕಾರ ಸಾರ್ವಜನಿಕ ಸಂಪತ್ತನ್ನು ವಿಸರ್ಜಿಸಿ ಮಾರಾಟ ಮಾಡಲಿಕ್ಕಾಗಿಯೇ ಒಂದು ಖಾತೆಯನ್ನು ಹಾಗೂ ಅದಕ್ಕೊಬ್ಬ ಅರುಣ್ ಶೌರಿ ಎಂಬ ಉನ್ನತ ದರ್ಜೆಯ ಮಂತ್ರಿಯನ್ನು ನೇಮಿಸಿದೆ.

ಬಹುಶಃ ಬರುವ ದಿನಗಳಲ್ಲಿ ಕುದುರೆಮುಖ ಕಂಪನಿ ಪರವಾಗಿ ವಿರೋಧವಾಗಿ ಈಗ ಚಳುವಳಿಗಿಳಿದವರೆಲ್ಲರೂ ಸೇರಿ ಮುಂದೆ ಕೇಂದ್ರ ಸರಕಾರದ ಮಾರಾಟ ನೀತಿಯ ವಿರುದ್ಧ ಹೋರಾಡಬೇಕಾದ ಅನಿವಾರ್ಯತೆ ಬರುತ್ತದೆ. ಇಲ್ಲಿ ಪರಿಸರ ಮುಖ್ಯವೋ- ಅಭಿವೃದ್ಧಿ ಮುಖ್ಯವೋ ಎಂಬ ಪ್ರಶ್ನೆ ಮಹತ್ವದ್ದಲ್ಲ. ಪರಿಸರ ಮತ್ತು ಅಭಿವೃದ್ಧಿ ಮಾನವ ಬದುಕಿನ ಅವಶ್ಯಕ ಮೂಲಗಳಾಗಿದ್ದರಿಂದ ಈ ವಿಷಯದಲ್ಲಿ ಹೆಚ್ಚಿನ ಭಾವುಕತೆಯಾಗಲೀ ಅಥವಾ ನಮ್ಮ ಅಪ್ರಾಮಾಣಿಕ ಸರಕಾರ ಹಾಗೂ ಅಧಿಕಾರಿ ಗಣವನ್ನು ನಂಬಿ ವಾಸ್ತವತೆಗೆ ಅಂಜಿಕೊಂಡು, ಮೋಸ ಹೋಗುವುದೂ ಎರಡೂ ಅಪಾಯಕಾರಿ. ಈ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಹಲವು ಮೂಲಭೂತ ಪ್ರಶ್ನೆಗಳನ್ನೆತ್ತಲಾಗಿದೆ. ಈ ಲೇಖನಕ್ಕೆ ಪ್ರತಿಯಾಗಿ, ಪೂರಕವಾಗಿ ಬರುವ ಅಭಿಪ್ರಾಯಗಳಿಗೆ ಸ್ವಾಗತ. ಸರಕಾರ ಪರ-ವಿರೋಧಿಗಳನ್ನೆಲ್ಲಾ ಸೇರಿಸಿ ಒಂದು ಸಮಿತಿ ರಚಿಸಿ ಉಭಯ ವಲಯಗಳ ಪ್ರಾಮಾಣಿಕ ಅನಿಸಿಕೆ, ಅಭಿಪ್ರಾಯಗಳನ್ನು ಕ್ರೋಢೀಕರಿಸಿ ನಿರ್ದಿಷ್ಟ ನಿಲುವು ತೆಗೆದುಕೊಳ್ಳಬೇಕೆಂಬುದು ಈ ಲೇಖಕನ ಆಶಯ.



*ಗಣಿಗಾರಿಕೆಯ ಸ್ಥಳದಾಟಿ ಹೊರಟ ಭದ್ರಾನದಿ ಸ್ಥಳ : ನೆಲ್ಲಿ ಬೀಡು*

# ಏನಿದು ಕುದುರೆಮುಖ ?

ಕುದುರೆಮುಖ ಗಣಿಗಾರಿಕೆ ವಿವಾದದಲ್ಲಿದೆ. ಗಣಿ ಮುಂದುವರಿಸಬೇಕೇ ಬೇಡವೇ ಎಂಬುದು ಕೇವಲ ಒಂದು ವಾದಕ್ಕೆ ಸೀಮಿತವಾಗಿಲ್ಲ. ಗಣಿ ಮುಂದುವರಿದರೆ ತುಂಗಾ ಭದ್ರಾ ನದಿ ಅವಲಂಬಿತ ಜನರ ಆತಂಕಗಳು ತೀವ್ರವಾಗುತ್ತವೆ. ಮುಚ್ಚಿದರೆ ಸುಮಾರು ಹತ್ತರಿಂದ ಹದಿನೈದು ಸಾವಿರ ಗಣಿ ಆಧಾರಿತ ಕುಟುಂಬಗಳು ಬೀದಿಪಾಲಾಗುತ್ತವೆ. ಇದೆಲ್ಲಕ್ಕಿಂತ ಮಹತ್ವವಾದದ್ದು ಪರಿಸರ ಮತ್ತು ಅಭಿವೃದ್ಧಿ ವೈರುಧ್ಯಗಳ ಬದಲಾಗಿ ಪರಸ್ಪರ ಪೂರಕವಾಗಿರಬೇಕು. ಅದು ಕುದುರೆಮುಖ ಗಣಿ ವಿಷಯದಲ್ಲಿ ಸಾಧ್ಯವೇ ಎಂಬುದನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಈ ಲೇಖನಕ್ಕೆ ಪ್ರತಿಯಾಗಿ, ಪೂರಕವಾಗಿ ಬರುವ ಅಭಿಪ್ರಾಯಗಳಿಗೆ ಸ್ವಾಗತ. ಬರಹಗಳು ಸಂಕ್ಷಿಪ್ತವಾಗಿರಬೇಕು.

ವಿಶ್ವದ ಅತಿ ಹೆಚ್ಚು ಕಬ್ಬಿಣದ ಅಂಶವನ್ನೊಳಗೊಂಡ ಕೆಲವೇ ಸಂಪನ್ಮೂಲಗಳಲ್ಲಿ ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖ, ನೆಲ್ಲೀಬೀಡು, ಗಂಗಡಿಕಲ್ಲು, ಬಾಬಾಬುಡನ್ ಬೆಟ್ಟಗಳೂ ಸೇರಿವೆ. ಪಶ್ಚಿಮ ಘಟ್ಟದ ಬೆಟ್ಟ ಸರಣಿಯಲ್ಲಿ ಅರೋಲಿ (ಅರಾವಲಿ) ಗಂಗಾ ಮೂಲ ಬೆಟ್ಟಗಳೆಂದೇ ಪ್ರಸಿದ್ಧವಾದ ದಟ್ಟವಾದ, ಸುಂದರವಾದ ಕಾಡಿನ ಮಧ್ಯದಲ್ಲಿರುವ ಈ ಬೆಟ್ಟಗಳ ಗರ್ಭದಲ್ಲಿ ಸುಮಾರು ೬೩೦ ಮಿಲಿಯನ್ ಟನ್ ಕಬ್ಬಿಣದ ಅದಿರಿದೆ. ಈಗ ಗಣಿಗಾರಿಕೆ ನಡೆಯುತ್ತಿರುವ ಕುದುರೆಮುಖವನ್ನು ಒಳಗೊಂಡು ಗಂಗಡಿಕಲ್ಲು, ನೆಲ್ಲೀಬೀಡು, ಬಾಬಾಬುಡನ್ ಬೆಟ್ಟಗಳನ್ನೆಲ್ಲ ಸೇರಿಸಿದರೆ ಒಟ್ಟು ೩೦೦೦ ಮಿಲಿಯನ್ ಟನ್‌ಗಳಷ್ಟು ಕಬ್ಬಿಣ ಅದಿರಿನ ನಿಕ್ಷೇಪಗಳ ಸಂಪತ್ತು ಇಲ್ಲಿದೆ. ಮಂಗಳೂರು, ಉಡುಪಿ ಜಿಲ್ಲೆಯ ಗಡಿಗೆ ಹತ್ತಿಕೊಂಡೇ ಇರುವ ಮೂಡಿಗೆರೆ ತಾಲೂಕಿನ ಕುದುರೆಮುಖ ಗಣಿ ಕೈಗಾರಿಕೆ ಇಂದು ತೀವ್ರವಾದ ವಿವಾದದಲ್ಲಿ ಸಿಲುಕಿದೆ.

೧೯೧೩ರಲ್ಲಿಯೇ ಮೈಸೂರು ಸಂಸ್ಥಾನದ ಭೂಗರ್ಭ ಶಾಸ್ತ್ರಜ್ಞರಾಗಿದ್ದ ಸಂಪತ್ ರಾವ್ ಅಯ್ಯಂಗಾರ್ ಎನ್ನುವವರು ಈ ಅರೋಲಿ ಗಂಗಾಮೂಲ ವಲಯದಲ್ಲಿನ ಬೆಟ್ಟಗಳಲ್ಲಿ ಅಪಾರ ಕಬ್ಬಿಣದ ಅದಿರಿರುವ ಅಂಶವನ್ನು ಕಂಡುಹಿಡಿದರು. ಮುಂದೆ ೧೯೬೦ರಲ್ಲಿ ಎನ್. ಎಂ. ಡಿ.ಸಿ. (ನ್ಯಾಶನಲ್ ಮಿನರಲ್ ಡೆವಲಪ್‌ಮೆಂಟ್ ಕಾರ್ಪೋರೇಷನ್)ಯಿಂದ ಹೆಚ್ಚಿನ ಸಂಶೋಧನೆ ನಡೆಸಿ ಕುದುರೆಮುಖ ವಲಯದಲ್ಲಿ ೬೩೦ ಮಿಲಿಯನ್ ಟನ್ ಕಬ್ಬಿಣದ ಅದಿರಿರುವ ವಲಯವನ್ನು ಗುರ್ತಿಸಿ ಆಗ ೫೬೧೮ ಹೆಕ್ಟೇರ್‌ನಷ್ಟು ಸ್ಥಳವನ್ನು ಈ ಗಣಿಗಾರಿಕೆಗಾಗಿ ವಶಪಡಿಸಿಕೊಂಡರು. ಆದರೆ ಅಂದಿನ ಕೇಂದ್ರ ಸರ್ಕಾರಕ್ಕೆ ಸ್ವತಃ ಅಲ್ಲಿ ಗಣಿ ಕೈಗಾರಿಕೆ ಆರಂಭಿಸಲು ಸಾಧ್ಯವಾಗದೆ ಅಮೆರಿಕಾ ಹಾಗೂ ಜಪಾನ್ ಕೈಗಾರಿಕಾ ಕಂಪೆನಿಗಳಿಗೆ ಕೇಳಿಕೊಂಡರು. ಆ ಕಂಪೆನಿಗಳು ಆರಂಭದಲ್ಲಿ ಆಸಕ್ತಿ ವಹಿಸಿದರೂ ಗಣಿಗಾರಿಕೆಗೆ ಮುಂದಾಗಲಿಲ್ಲ. ನಂತರ ೧೯೭೪ರಲ್ಲಿ ಇರಾನ್ ದೇಶದ ಸಹಕಾರದಿಂದ ಈ ಯೋಜನೆ ಸ್ಪಷ್ಟರೂಪ ಪಡೆಯಿತು. ಆದರೆ ಇರಾನ್‌ನಲ್ಲಿ ನಡೆದ ರಾಜಕೀಯ ಸ್ಥಿತ್ಯಂತರಗಳಿಂದಾಗಿ ಇರಾನ್ ಸಹ ಹಿಂದೆ ಸರಿಯಿತು. ನಂತರ ರುಮೇನಿಯಾ ಹಾಗೂ ಜಪಾನ್‌ಗಳಲ್ಲಿ ಮಾರುಕಟ್ಟೆಯನ್ನು ಕಂಡುಕೊಂಡು ಇವತ್ತಿಗೂ ಮುಂದುವರಿದ ಈ ಕಬ್ಬಿಣ ಅದಿರಿನ ಕೈಗಾರಿಕೆ ಈಗ ಅಳಿವು ಉಳಿವಿನ ಸ್ಥಿತಿ ತಲುಪಿದೆ.

೧೯೭೬ರಲ್ಲಿ ಭಾರತ ಕೇಂದ್ರ ಸರ್ಕಾರದ ಯೋಜನೆಯಾಗಿ ಹುಟ್ಟಿಕೊಂಡ ಈ ಕುದುರೆಮುಖ ಕಬ್ಬಿಣ ಅದಿರು ಕಂಪೆನಿ (ಕುದುರೆಮುಖ ಐರನ್ ಓರ್ ಕಂಪೆನಿ ಲಿಮಿಟೆಡ್ - ಕೆ.ಐ.ಓ.ಸಿ.ಎಲ್.)ಗೆ ೧೯೭೯ರಿಂದ ೧೯೯೯ರವರೆಗೆ ಅಲ್ಲಿ ಭೂಗರ್ಭದಿಂದ ಕಬ್ಬಿಣದ ಅದಿರು ತೆಗೆಯಲು ಅನುಮತಿ ನೀಡಲಾಗಿತ್ತು. ಪ್ರತಿವರ್ಷ ೨೨ ಮಿಲಿಯನ್ ಟನ್ ಕಚ್ಚಾ ಕಬ್ಬಿಣದ ಅದಿರನ್ನು ತೆಗೆವ ಶಕ್ತಿ ಹೊಂದಿದ ಈ ಪ್ಲಾಂಟ್ ಇಂಡಿಯಾದಲ್ಲೇ ದೊಡ್ಡದು. ಸಾಮಾನ್ಯ ಭಾಷೆಯಲ್ಲಿ ಹೇಳಬೇಕೆಂದರೆ ಎರಡು ದೊಡ್ಡ ಬೆಟ್ಟಗಳ ಆಳದಿಂದ ಈ ಅದಿರನ್ನು ತೆಗೆಯಲಾಗುತ್ತಿದೆ. ಗಣಿ ಎಂದರೆ ಸಹಜವಾಗಿ ಎಲ್ಲರ ಕಲ್ಪನೆಗೆ ಬರುವುದು ಭೂಮಿಯ ಆಳದಲ್ಲಿದ್ದು ಅದಿರು ಶೇಖರಿಸುವುದು ಎಂದು. ಆದರೆ ಇದು ಓಪನ್ ಮೈನಿಂಗ್. ಇಲ್ಲಿ ಬೆಟ್ಟವನ್ನು ಮೇಲಿನಿಂದ ಕೆತ್ತುತ್ತ ಹೋಗುತ್ತಾರೆ. ಕೊನೆಗೊಂದು ದಿನ ಈ ಬೆಟ್ಟ ನೆಲಸಮವಾಗಿ ಹೋಗಬಹುದು. ಕುದುರೆಮುಖ ಗಣಿಯ ವಿಶೇಷವೆಂದರೆ ಇಡೀ ಪ್ಲಾಂಟ್‌ನಲ್ಲಿ ಎಲ್ಲೂ ರಾಸಾಯನಿಕಗಳ ಕಾಟವಿಲ್ಲ. ಕಬ್ಬಿಣ ಅದಿರಿನಂಶವಿರುವ ಮಣ್ಣು ಮತ್ತು ನೀರು ಈ ಉದ್ದಿಮೆಯ ಮೂಲ ಸರಕುಗಳು. ಅಂದರೆ ಬೆಟ್ಟದಿಂದ ತರಲಾದ ಕಬ್ಬಿಣ ಅದಿರಿನ ಮಣ್ಣನ್ನು ಕಲ್ಲುಗಳನ್ನು ಕುಟ್ಟಿ ಹರಳುಗಳನ್ನಾಗಿಸಿ, ನಂತರ ನೀರಿನೊಡನೆ ಎರಡು ಹಂತದಲ್ಲಿ ಪುಡಿಮಾಡಿ (ಗ್ರೈಂಡರ್‌ಗಳ ಮೂಲಕ) ಮೆಗ್ನೆಟಿಕ್ ಸಹಾಯದಿಂದ ನೀರು ಹಾಗೂ ಮಣ್ಣಿನಿಂದ ಕಬ್ಬಿಣದ ಪುಡಿಯನ್ನು ಬೇರ್ಪಡಿಸಲಾಗುವುದು. ನಂತರ ಕಬ್ಬಿಣದ ಪುಡಿಯನ್ನು ಪೈಪುಗಳ ಮೂಲಕ ೬೭ ಕಿ. ಮೀ. ದೂರದ ಮಂಗಳೂರಿನ ಕಾರ್ಖಾನೆಗೆ ರವಾನಿಸಲಾಗುವುದು. ಈ ಪೈಪುಗಳ ಮೂಲಕ ಕಬ್ಬಿಣದ ಪುಡಿ ಕಳಿಸುವಾಗ ಅದರಲ್ಲಿ ನೀರು, ಕೋಬಾಲ್ಟ್ ಸಲ್ಫೇಟ್, ಸೋಡಿಯಂ ಸಲ್ಫೇಟ್, ಸುಣ್ಣವನ್ನು ಕೂಡಿಸಲಾಗುವುದು. ಇನ್ನು ಕಬ್ಬಿಣಾಂಶವನ್ನು ತೆಗೆದುಕೊಂಡ ಮೇಲೆ ಅದಕ್ಕೆ ಬಳಸಲಾದ ಪುಡಿ, ಮಣ್ಣು ಮತ್ತು ನೀರಿನ ಮಿಶ್ರಣ ತ್ಯಾಜ್ಯವಾಗಿ ಉಳಿಯುತ್ತವೆ. ಈ ವೇಸ್ಟ್ ಸಂಗ್ರಹಣೆಗಾಗಿಯೇ ನಿರ್ಮಿಸಲಾದ ಲಕ್ಯಾ ಡ್ಯಾಂನಲ್ಲಿ ಅದನ್ನು ಸುರಿಯಲಾಗುವುದು.

ಪ್ಲಾಂಟ್‌ನಿಂದ ಸುಮಾರು ೨.೫ ಕಿ.ಮೀ. ದೂರದಲ್ಲಿರುವ ಲಕ್ಯಾ ಡ್ಯಾಂ ಈ ಗಣಿಗೆ ನೀರು ಒದಗಿಸಲು ಹಾಗೂ ಕೊನೆಗೆ ಸಿಲ್ಟ್ (ಅದಿರು ತೆಗೆದ ಮೇಲಿನ ನೀರು ಮಿಶ್ರಿತ ಕೆಸರು) ಶೇಖರಿಸಲು ಉಪಯೋಗವಾಗುತ್ತಿದೆ. ಲಕ್ಯಾ ಎಂಬ ಭದ್ರಾ ನದಿಯ ಉಪನದಿಗೆ ಅಣೆಕಟ್ಟು ಕಟ್ಟಲಾಗಿದೆ.

೧೦೦ ಮೀಟರ್ ಎತ್ತರದ ಈ ಲಕ್ಯಾ ಡ್ಯಾಂ ಇಪ್ಪತ್ತು ವರ್ಷದಿಂದ ಸುರಿಯಲಾದ ಸುಮಾರು ೭೦ರಿಂದ ೮೦ ಮೀಟರ್‌ನಷ್ಟು ಎತ್ತರಕ್ಕೆ ತ್ಯಾಜ್ಯ (ವೇಸ್ಟ್)ವನ್ನು ತನ್ನ ಮಡಿಲಿನಲ್ಲಿರಿಸಿಕೊಂಡಿದೆ. ಈಗ ಈ ಡ್ಯಾಂನಲ್ಲಿ ಶೇಖರವಾದ ಸಿಲ್ಟ್ ಸುಮಾರು ೧೬೦ರಿಂದ ೧೭೦ ಮಿಲಿಯನ್ ಟನ್‌ನಷ್ಟಿದೆ. ಈ ಬೃಹತ್ ಗಾತ್ರದ ಮಣ್ಣಿನ ಗುಡ್ಡೆಯನ್ನು ಏನು ಮಾಡಬೇಕೆಂಬ ನಿರ್ದಿಷ್ಟ ಯೋಜನೆ ಇಲ್ಲ. ಇದರಿಂದ ಸುಮಾರು ೮೫ ಮಿಲಿಯನ್ ಟನ್‌ಗಿಂತ ಹೆಚ್ಚು ಕಬ್ಬಿಣ ಅದಿರನ್ನು ಉತ್ಪಾದಿಸಲಾಗಿದೆ.

ಪಶ್ಚಿಮ ಘಟ್ಟಗಳ ಮಹತ್ವದ ಸ್ಥಳವಾದ ಈ ವಲಯ ಅತಿ ಹೆಚ್ಚು ಮಳೆ ಬೀಳುವ ಪ್ರದೇಶ. ಪ್ರತಿ ವರ್ಷ ಜೂನ್‌ನಿಂದ ಸೆಪ್ಟೆಂಬರ್‌ವರೆಗಿನ ಮಳೆಗಾಲದಲ್ಲಿ ಸುಮಾರು ೭೦೦೦ ಎಂ. ಎಂ. ನಷ್ಟು ಮಳೆ ಇಲ್ಲಿ ಸುರಿಯುತ್ತದೆ. ಇಂಥ ಮಳೆಗಾಲದ ಸಂದರ್ಭದಲ್ಲಿ ಬೆಟ್ಟದ ಮೇಲೆ ಅದಿರು ತೆಗೆದ ಸ್ಥಳದಿಂದ ಅದಿರು ಮಿಶ್ರಿತ ಮಣ್ಣು ನೀರಿನೊಡನೆ ಹರಿದು ಬಂದು ಭದ್ರಾ ನದಿ ಸೇರುವ ಅಪಾಯವಿರುವುದರಿಂದ ಆ ಬೆಟ್ಟದ ಬುಡದಲ್ಲಿ ಹರಿದು ಬರುವ ನೀರಿಗೆ ಅಡ್ಡಲಾಗಿ ಎರಡು ಚೆಕ್ ಡ್ಯಾಂಗಳನ್ನು ಕಟ್ಟಲಾಗಿದೆ. ಅದರಲ್ಲಿ ಕಬ್ಬಿಣ ಅದಿರಿನ ಅಂಶವೂ ಇರುವುದರಿಂದ ಅದನ್ನು ಮತ್ತೆ ಪ್ಲಾಂಟ್‌ಗೆ ತೆಗೆದುಕೊಂಡು ಅದರಲ್ಲಿನ ಕಬ್ಬಿಣದ ಅಂಶ ಬೇರ್ಪಡಿಸಿ ನೀರು ಮಿಶ್ರಿತ ಮಣ್ಣನ್ನು ಲಕ್ಯಾ ಡ್ಯಾಂಗೆ ರವಾನಿಸಲಾಗುವುದು. ಇದಿಷ್ಟು ಅದಿರು ಶೇಖರಣೆಯ ಪ್ರಕ್ರಿಯೆ.

ಕುದುರೆಮುಖ ಗಣಿಯಲ್ಲಿ ಇಂದು ೨೫೦೦ ಕಾರ್ಮಿಕರು ಕಾರ್ಯನಿರತರಾಗಿದ್ದಾರೆ. ಇನ್ನು ಮಂಗಳೂರು ಕಾರ್ಖಾನೆ ಹಾಗೂ ಇತರ ಪರೋಕ್ಷ ಮೂಲಗಳನ್ನು ಗಮನಿಸಿದರೆ ಒಟ್ಟು ಸುಮಾರು ೧೦೦೦೦ ಜನ ಈ ಉದ್ದಿಮೆಯ ಒಟ್ಟು ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾರೆ.

ಕುದುರೆಮುಖ ಗಣಿಗಾರಿಕೆಗಾಗಿ ನೀಡಿದ ಇಪ್ಪತ್ತು ವರ್ಷಗಳ ಅವಧಿ ೧೯೯೯ಕ್ಕೆ ಮುಗಿದುಹೋಗಿದೆ. ಹೆಚ್ಚಿನ ಅವಧಿ ಹಾಗೂ ಸ್ಥಳ ವಿಸ್ತರಣೆಗಾಗಿ ಕಂಪೆನಿ ಸರಕಾರಗಳನ್ನು (ಕೇಂದ್ರ - ರಾಜ್ಯ) ಕೇಳಿಕೊಂಡಿದೆ. ಸದ್ಯ ಇವತ್ತಿನವರೆಗೆ ಗಣಿಗಾರಿಕೆಗೆ ಅವಧಿ ವಿಸ್ತರಣೆ ಸಿಕ್ಕಿದೆ. ಆದರೆ ಮುಂದಿನ ಅವಧಿ ಕುರಿತು ತೀರ್ಮಾನವಾಗಬೇಕಿದೆ. ಲೀಸ್ ಅವಧಿ ಮುಗಿದ ಪ್ರಯುಕ್ತ ಹಾಗೂ ಪರಿಸರ ಚಳುವಳಿಗಳನ್ನು ಗಮನಿಸಿ ಈ ಗಣಿಗಾರಿಕೆಗೆ ಅವಧಿ ವಿಸ್ತರಣೆ ನಿರ್ಧಾರ ಡೋಲಾಯಮಾನವಾಗಿದೆ. ಇಲ್ಲಿ ವಿಸ್ತರಣೆಗೆ ಸಂಬಂಧಿಸಿದಂತೆ ಇನ್ನೊಂದು ವಿಷಯ ಗಮನಿಸಬೇಕು. ಒಂದು 'ಅವಧಿ' ವಿಸ್ತರಣೆಯಾದರೆ ಇನ್ನೊಂದು 'ವಲಯ' ವಿಸ್ತರಣೆ. ೧೯೯೩ರಲ್ಲಿಯೆ ಕಂಪೆನಿ ಈಗಿರುವ ಸ್ಥಳದಿಂದ ೧೫ ಕಿ.ಮೀ. ದೂರದಲ್ಲಿರುವ ಗಂಗಡಿಕಲ್ಲು ವಲಯದ ಸುಮಾರು ೯೧೪ ಹೆಕ್ಟೇರ್ ಹಾಗೂ ಮೂರು ಕಿ. ಮೀ. ದೂರದಲ್ಲಿರುವ ನೆಲ್ಲೀಬೀಡು ವಲಯದ ಸುಮಾರು ೩೦೦ ಹೆಕ್ಟೇರ್ ಭೂಮಿಯನ್ನು ಗಣಿಗಾರಿಕೆಗಾಗಿ ಕೇಳಿದೆ. ಆದರೆ ತುಂಗ ಭದ್ರಾ ಹಾಗೂ ನೇತ್ರಾವತಿ ನದಿಗಳ ಉಗಮ ಸ್ಥಾನವಾದ ಗಂಗಾಮೂಲ ವಲಯದಲ್ಲಿ ಬರುವ ಗಂಗಡಿಕಲ್ಲು ಈಗ ಉದ್ದೇಶಿತ ರಾಷ್ಟ್ರೀಯ ಉದ್ಯಾನವನದ ಭಾಗವಾಗಿ ಘೋಷಣೆಯಾಗಿರುವುದರಿಂದ ಆ ಭಾಗದಲ್ಲಿ ಗಣಿಗಾರಿಕೆಯ ವಿಸ್ತರಣೆ ಸಾಧ್ಯವಿಲ್ಲ. ಈ ಎಲ್ಲ ಗೊಂದಲದ ಮಧ್ಯೆ ಕಂಪೆನಿ ಈಗ ಇರುವ ಸ್ಥಳದಲ್ಲಿಯೇ ಅವಧಿ ವಿಸ್ತರಣೆಯನ್ನು ಕೇಳಿದೆ. ಈಗಿರುವ ಕುದುರೆಮುಖದಲ್ಲಿಯೇ ಇನ್ನೂ ಐದಾರು ವರ್ಷ ಮೃದುವಲಯ ಪದರಿನಲ್ಲಿಯೇ ಇರುವ ೯೦ರಿಂದ ೧೦೦ ಮಿಲಿಯನ್ ಟನ್‌ನಷ್ಟು ಅದಿರು ತೆಗೆಯಬಹುದು. ಅದಾದ ಮೇಲೆ ಬರುವ ಬಿರುಸು ವಲಯ (ಹಾರ್ಡ್‌ವೆದರ್ ಓರ್)ದಲ್ಲಿರುವ ಸುಮಾರು ೩೮೦ ಮಿಲಿಯನ್ ಟನ್ ಅದಿರನ್ನು ಇಪ್ಪತ್ತು ವರ್ಷದವರೆಗೂ ತೆಗೆಯಬಹುದು ಎಂಬುದು ಕಂಪೆನಿಯವರ ಅಂದಾಜು. ಅವಧಿ ಹಾಗೂ ಸ್ಥಳ ವಿಸ್ತರಣೆ ಆಗಬೇಕೇ ಬೇಡವೇ ಎಂಬುದು ಪರಿಸರ, ಸಾಮಾಜಿಕ, ರಾಜಕೀಯ ಹಾಗೂ ವಾಣಿಜ್ಯ ವಿಷಯಗಳನ್ನಾಧರಿಸಿ ನಿಂತಿದೆ.

**ಡಾ।। ಸಿದ್ಧನಗೌಡ ಪಾಟೀಲ**
ಪಟ್ಟಣಶೆಟ್ಟಿ ಬಿಲ್ಡಿಂಗ್, ಶ್ರೀನಗರ, ಧಾರವಾಡ - ೫೮೦ ೦೦೩.

# ಕರ್ನಾಟಕವು ಕೈಗಾರಿಕಾ ರಾಜ್ಯವಾಗಿ ಹೊರಹೊಮ್ಮಬಹುದೇ ?

**ದೇವಿದಾಸ ಎಸ್. ಪ್ರಭು**

**ಕ**ರ್ನಾಟಕವು ಇಡೀ ರಾಷ್ಟ್ರದಲ್ಲಿಯೇ ಪ್ರಮುಖ ಕೈಗಾರಿಕಾ ರಾಜ್ಯವಾಗಿ ಹೊರ ಹೊಮ್ಮುತ್ತಿದೆ, ಹೂಡಿಕೆದಾರರ ಸ್ವರ್ಗವಾಗಿದೆ, ಮಾಹಿತಿ ತಂತ್ರಜ್ಞಾನದ ಕೇಂದ್ರವಾಗಿದೆ ಎಂಬಿತ್ಯಾದಿಯಾಗಿ ಕರ್ನಾಟಕದಾದ್ಯಂತ ಪ್ರಚಾರ ನಡೆಸಲಾಗುತ್ತಿದೆ. ಕಳೆದ ವರ್ಷದ ಜೂನ್ ತಿಂಗಳ ಜಾಗತಿಕ ಬಂಡವಾಳ ಹೂಡಿಕೆದಾರರ ಸಮ್ಮೇಳನದಲ್ಲಿ ೨೭,೦೦೦ ಕೋಟಿ ರೂ. ಹೂಡಿಕೆಯ ಪ್ರಸ್ತಾವನೆಗಳು ಬಂದಿರುವುದನ್ನು ನೋಡಿದರೆ ಕರ್ನಾಟಕವು ರಾಷ್ಟ್ರದ ಮುಂಚೂಣಿಯಲ್ಲಿರುವ ಕೈಗಾರಿಕಾ ರಾಜ್ಯ ಎನ್ನುವ ಭಾವನೆಯೇನೋ ಮೂಡುತ್ತದೆ. ಮಾನ್ಯ ಮುಖ್ಯಮಂತ್ರಿಗಳು ಮತ್ತು ಭಾರಿ ಉದ್ದಿಮೆ ಸಚಿವರಾದ ಮಾನ್ಯ ಆರ್. ವಿ. ದೇಶಪಾಂಡೆಯವರೂ ಇದೇ ಧಾಟಿಯಲ್ಲಿ ಮಾತನಾಡುತ್ತಿದ್ದಾರೆ. ಆದರೆ ರಾಷ್ಟ್ರದಲ್ಲಿ ಕರ್ನಾಟಕದ ಸ್ಥಾನಮಾನವನ್ನು ಗಮನಿಸಿದರೆ ವಸ್ತುಸ್ಥಿತಿ ಇದಕ್ಕಿಂತ ಸಾಕಷ್ಟು ಭಿನ್ನವಾಗಿದೆಯೆಂಬುದು ತಿಳಿದುಬರುತ್ತದೆ.

ಕರ್ನಾಟಕದ ಸಂಪೂರ್ಣ ಔದ್ಯಮಿಕ ಪ್ರಗತಿಯ ಚಿತ್ರಣವನ್ನು ಗಮನಿಸಿದಾಗ ಹಾಗೂ ಅದನ್ನು ದೇಶದ ಇತರ ಪ್ರಮುಖ ರಾಜ್ಯಗಳೊಂದಿಗೆ ಹೋಲಿಸಿ ನೋಡಿದಾಗ ಕರ್ನಾಟಕವು ಕೈಗಾರಿಕಾ ಕ್ಷೇತ್ರದಲ್ಲಿ ಹಿಂದುಳಿದ ರಾಜ್ಯ ಎನ್ನುವುದು ಸ್ಪಷ್ಟವಾಗಿ ತಿಳಿದುಬರುವ ಸಂಗತಿ. ಕರ್ನಾಟಕದ ಸುಪುತ್ರ ಡಾ|| ಎಂ. ವಿಶ್ವೇಶ್ವರಯ್ಯನವರು ಕೈಗಾರಿಕೀಕರಣ ಮಾಡಿ ಇಲ್ಲವೇ ಹಾಳಾಗಿರಿ ಎನ್ನುವ ಘೋಷಣೆಯನ್ನು ನೀಡಿದ್ದರು. ಆ ಕಾಲದಲ್ಲಿಯೇ ಅವರು ಅಂದಿನ ಮೈಸೂರು ಸಂಸ್ಥಾನದ ಅನೇಕ ಉದ್ದಿಮೆಗಳ ಸ್ಥಾಪನೆಗೆ ನಾಂದಿ ಹಾಡಿದ್ದರು. ಸ್ವಾತಂತ್ರ್ಯಾನಂತರ ಏಕೀಕೃತ ಕರ್ನಾಟಕವು ಪ್ರಮುಖ ಕೈಗಾರಿಕಾ ರಾಜ್ಯವಾಗಿ ಹೊರಹೊಮ್ಮಬೇಕಾಗಿತ್ತು. ಆದರೆ ಹಾಗಾಗದೆ ನೆರೆಯ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ರಾಜ್ಯಗಳು ಕರ್ನಾಟಕಕ್ಕಿಂತ ಕೈಗಾರಿಕಾಭಿವೃದ್ಧಿಯಲ್ಲಿ ಸಾಕಷ್ಟು ಮುಂದುವರಿದಿವೆ ಎಂಬುದನ್ನು ಈ ಅಂಕಿ ಅಂಶಗಳು ಸ್ಪಷ್ಟೀಕರಿಸುತ್ತವೆ.

**೧೯೯೪-೯೫ರಲ್ಲಿ ಪ್ರಮುಖ ರಾಜ್ಯಗಳ ಕೈಗಾರಿಕಾ ಸ್ಥಾನಮಾನ**

| ರಾಜ್ಯಗಳು | ಕಾರ್ಖಾನೆಗಳ ಸಂಖ್ಯೆ | ದೇಶದ ಪ್ರತಿಶತ | ತೊಡಗಿಸಿದ ಬಂಡವಾಳ (ಕೋಟಿ ರೂ.ಗಳಲ್ಲಿ) | ದೇಶದ ಪ್ರತಿಶತ | ಕೈಗಾರಿಕಾ ಉದ್ಯೋಗಿಗಳ ಸಂಖ್ಯೆ | ದೇಶದ ಪ್ರತಿಶತ |
|---|---|---|---|---|---|---|
| ಮಹಾರಾಷ್ಟ್ರ | ೧೭,೭೬೩ | ೧೪.೪ | ೬೬,೮೩೭ | ೧೭.೨ | ೧೩,೩೧,೮೭೦ | ೧೪.೫ |
| ತಮಿಳುನಾಡು | ೧೮,೭೫೫ | ೧೫.೨ | ೪೦,೦೦೫ | ೧೦.೩ | ೧೧,೬೬,೩೩೦ | ೧೨.೬ |
| ಗುಜರಾತ್ | ೧೨,೦೩೪ | ೯.೮ | ೩೮,೫೭೮ | ೧೦.೦ | ೭,೮೨,೯೦೮ | ೮.೫ |
| ಆಂಧ್ರಪ್ರದೇಶ | ೧೬,೬೧೬ | ೧೩.೫ | ೩೩,೪೮೯ | ೮.೬ | ೧೦,೭೦,೭೬೨ | ೧೧.೫ |
| ಕರ್ನಾಟಕ | ೬,೧೮೪ | ೫.೦ | ೧೫,೬೩೩ | ೪.೦ | ೪,೭೩,೧೩೪ | ೫.೧ |

**೧೯೯೪-೯೫ರಲ್ಲಿ ಪ್ರಮುಖ ರಾಜ್ಯಗಳ ಕೈಗಾರಿಕಾ ಬಂಡವಾಳದ ಪ್ರಮಾಣ**




ಭಾರತದ ಕೈಗಾರಿಕಾ ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಶೇ. ೫ಕ್ಕಿಂತ ಕಡಿಮೆ ಇದೆ. ೧೯೯೪-೯೫ರಲ್ಲಿ ಕರ್ನಾಟಕವು ರಾಷ್ಟ್ರದ ಒಟ್ಟು ಕೈಗಾರಿಕೆಗಳಲ್ಲಿ ಶೇ. ೫ ರಷ್ಟು ಕಾರ್ಖಾನೆಗಳನ್ನು, ಒಟ್ಟು ಕೈಗಾರಿಕಾ ಬಂಡವಾಳದ ಶೇ. ೪ರಷ್ಟು ಬಂಡವಾಳವನ್ನು, ಒಟ್ಟು ಕೈಗಾರಿಕಾ ಉದ್ಯೋಗಿಗಳಲ್ಲಿ ಶೇ. ೫.೧ರಷ್ಟು ಕೈಗಾರಿಕಾ ಉದ್ಯೋಗಿಗಳನ್ನು ಹೊಂದಿತ್ತು. ಇದು ೧೯೮೦-೮೧ರ ಪ್ರತಿಶತ ಪ್ರಮಾಣಕ್ಕಿಂತ ಕಡಿಮೆ ಇದೆ. ೧೯೮೦-೮೧ರಲ್ಲಿ ಕರ್ನಾಟಕವು ದೇಶದ ಒಟ್ಟು ಕಾರ್ಖಾನೆಗಳಲ್ಲಿ ಶೇ. ೫.೬ರಷ್ಟನ್ನು, ಒಟ್ಟು ಕೈಗಾರಿಕಾ ಬಂಡವಾಳದ ಶೇ. ೪.೪ರಷ್ಟನ್ನು ಹಾಗೂ ಒಟ್ಟು ಕೈಗಾರಿಕಾ ಉದ್ಯೋಗಗಳಲ್ಲಿ ಶೇ. ೫.೧ರಷ್ಟನ್ನು ಹೊಂದಿತ್ತು. ನೆರೆಯ ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ ರಾಜ್ಯಗಳು ಕರ್ನಾಟಕಕ್ಕಿಂತ ೨ರಿಂದ ೩ ಪಟ್ಟು ಹೆಚ್ಚಿನ ಪ್ರಗತಿಯನ್ನು ಕೈಗಾರಿಕಾ ಪ್ರಮಾಣದಲ್ಲಿ ಸಾಧಿಸಿವೆ. ತಮಿಳುನಾಡು ಮತ್ತು ಆಂಧ್ರಪ್ರದೇಶ ರಾಜ್ಯಗಳು ೧೯೮೦-೮೧ರ ನಂತರ ದೇಶದಲ್ಲಿ ತಮ್ಮ ಕೈಗಾರಿಕಾ ಸ್ಥಾನಮಾನವನ್ನು ಮತ್ತಷ್ಟು ಸುಧಾರಿಸಿಕೊಂಡಿವೆ. ಆದರೆ ಕರ್ನಾಟಕದ ಕೈಗಾರಿಕಾ ಸ್ಥಾನಮಾನವು ೧೯೮೦-೮೧ರ ನಂತರ ಕಡಿಮೆಯಾಗಿದೆ.

**೧೯೯೬-೯೭ರಲ್ಲಿ ರಾಜ್ಯಗಳ ಒಟ್ಟು ವಾರ್ಷಿಕ ಆದಾಯ.**
**ರಾಜ್ಯಗಳ ಒಟ್ಟು ಆಂತರಿಕ ಆರ್ಥಿಕ ಉತ್ಪಾದನೆ ಜಿ.ಡಿ.ಪಿ.**

| ರಾಜ್ಯ | ರಾಜ್ಯದ ವಾರ್ಷಿಕ ಆದಾಯ ಕೋಟಿ ರೂ.ಗಳಲ್ಲಿ |
|---|---|
| ಮಹಾರಾಷ್ಟ್ರ | ೧,೫೨,೧೦೦ |
| ಆಂಧ್ರಪ್ರದೇಶ | ೭೨,೩೦೦ |
| ತಮಿಳುನಾಡು | ೬೯,೦೦೦ |
| ಗುಜರಾತ್ | ೬೩,೫೦೦ |
| ಕರ್ನಾಟಕ | ೫೦,೩೦೦ |

**ರಾಜ್ಯ ಉತ್ಪಾದನೆಯಲ್ಲಿ ಕೃಷಿ ಮತ್ತು ಕೈಗಾರಿಕೆಗಳ ಪಾಲು (೧೯೯೫-೯೬ರಲ್ಲಿ)**

| ರಾಜ್ಯ | ಕೃಷಿ ಆದಾಯದ ಪಾಲು (ಪ್ರತಿಶತ) | ಕೈಗಾರಿಕಾ ಆದಾಯದ ಪಾಲು (ಪ್ರತಿಶತ) |
|---|---|---|
| ಕರ್ನಾಟಕ | ೩೬.೦೫ | ೨೨.೬ |
| ಮಹಾರಾಷ್ಟ್ರ | ೧೮.೬೭ | ೩೪.೯೩ |
| ತಮಿಳುನಾಡು | ೨೨.೮೬ | ೩೦.೭೭ |
| ಗುಜರಾತ್ | ೨೨.೧೧ | ೩೯.೪೦ |
| ಭಾರತ | ೨೬.೧ | ೩೧.೦ |

ಕರ್ನಾಟಕವು ಕೈಗಾರಿಕಾ ಕ್ಷೇತ್ರದಲ್ಲಿ ಹಿಂದುಳಿದಿದೆ ಎಂಬುದನ್ನು ಅಳೆಯುವ ಇನ್ನೊಂದು ಮಾನದಂಡವೆಂದರೆ ಕರ್ನಾಟಕದ ಒಟ್ಟು ರಾಜ್ಯದ ಆದಾಯದಲ್ಲಿ ಕೈಗಾರಿಕಾ ಆದಾಯದ ಪಾಲು ಎಷ್ಟಿದೆಯೆಂದು ತಿಳಿಯುವುದರ ಮೂಲಕ. ೧೯೯೫-೯೬ರಲ್ಲಿ ಕರ್ನಾಟಕದ ಒಟ್ಟು ಉತ್ಪನ್ನದಲ್ಲಿ ಕೈಗಾರಿಕೆಗಳ ಪಾಲು ಶೇ. ೨೨.೬ರಷ್ಟಿದ್ದರೆ, ಮಹಾರಾಷ್ಟ್ರದಲ್ಲಿ

> *ಇಡೀ ಭಾರತದಲ್ಲಿಯೇ ಕರ್ನಾಟಕ ರಾಜ್ಯವು ಕೈಗಾರಿಕೀಕರಣದ ನಿಟ್ಟಿನಲ್ಲಿ ದಾಪುಗಾಲು ಹಾಕುತ್ತಿದೆ, ಬಂಡವಾಳ ಹೂಡಿಕೆದಾರರ ಸ್ವರ್ಗವಾಗುತ್ತಿದೆ. ಬೆಂಗಳೂರು ಮಾಹಿತಿ ತಂತ್ರಜ್ಞಾನದ ಕೇಂದ್ರವಾಗಿ ಬೆಳೆಯುತ್ತಿದೆ ಎಂಬುದು ದಿನನಿತ್ಯ ಮಾಧ್ಯಮಗಳಲ್ಲಿ ನಮ್ಮ ಕಿವಿಗಳಿಗೆ ಅಪ್ಪಳಿಸುತ್ತಿರುವ ಸುದ್ದಿ ವಿಶೇಷಗಳು. ಮಾಧ್ಯಮಗಳು ಏನು ಬೇಕಾದರೂ ಮಾಡಬಲ್ಲವು. ವಾಸ್ತವಕ್ಕೆ ದೂರವಾದ ಚಿತ್ರಗಳನ್ನು ರೂಪಿಸಬಲ್ಲವು. ಈ ನಿಟ್ಟಿನಲ್ಲಿ ಇಡೀ ರಾಷ್ಟ್ರದ ಹಿನ್ನೆಲೆಯಲ್ಲಿ ಕರ್ನಾಟದಲ್ಲಿನ ವಸ್ತುಸ್ಥಿತಿಯಾದರೂ ಏನು ? ನಮಗಿರಬೇಕಾದ ಮುನ್ನೋಟವೇನು ಎಂಬುದನ್ನು ಅಂಕಿಅಂಶಗಳ ಮೂಲಕ ಇಲ್ಲಿ ವಿವರಿಸಲಾಗಿದೆ.*

ಶೇ. ೩೪.೯೩ರಷ್ಟು, ತಮಿಳುನಾಡಿನಲ್ಲಿ ೩೦.೭೭ರಷ್ಟು, ಗುಜರಾತಿನಲ್ಲಿ ೩೯.೪೦ರಷ್ಟಿತ್ತು. ಇದೇ ಅವಧಿಯಲ್ಲಿ ಭಾರತದ ಒಟ್ಟು ಆಂತರಿಕ ಉತ್ಪನ್ನದಲ್ಲಿ (ಜಿ.ಡಿ.ಪಿ.) ಕೈಗಾರಿಕಾ ಉತ್ಪಾದನೆಯ ಪಾಲು ಶೇ. ೩೧ರಷ್ಟಿತ್ತು. ಎಂದರೆ ಭಾರತದ ಸರಾಸರಿ ಕೈಗಾರಿಕಾ ಪ್ರಗತಿಗಿಂತ ಕರ್ನಾಟಕದ ಕೈಗಾರಿಕಾ ಪ್ರಗತಿಯು ಕಡಿಮೆ ಇದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಭಾರತವು ಇಂದು ರಾಷ್ಟ್ರೀಯ ಆದಾಯದ ಕೊಡುಗೆಯ ಆಧಾರದಲ್ಲಿ ಕೃಷಿ ಪ್ರಧಾನ ದೇಶವಾಗೇ ಉಳಿದಿಲ್ಲ. ಭಾರತದ ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ಶೇ. ೨೬.೧ರಷ್ಟಕ್ಕೆ ಕಡಿಮೆಯಾಗಿದೆ. ಭಾರತ ಕೃಷಿ ಪ್ರಧಾನ ರಾಷ್ಟ್ರ, ಹಳ್ಳಿಗಳ ನಾಡು ಎಂದೆಲ್ಲಾ ನಾವು ಹೆಮ್ಮೆಯಿಂದ ಹೇಳಿಕೊಳ್ಳುವ ವಿಷಯವಾಗಿ ಇನ್ನು ಉಳಿದಿಲ್ಲ. ಇವು ದೇಶದ ಆರ್ಥಿಕ ಹಿಂದುಳಿದಿರುವಿಕೆಯನ್ನು ಸೂಚಿಸುವ ಲಕ್ಷಣಗಳೇ ಆಗಿವೆ. ಯಾವ ರಾಷ್ಟ್ರ ಕೃಷಿ ಪ್ರಧಾನ ಹಾಗೂ ಹಳ್ಳಿಗಳ ಪ್ರದೇಶವಾಗಿರಲಿಲ್ಲ ? ಒಂದು ಕಾಲದಲ್ಲಿ ವಿಶ್ವದ ಎಲ್ಲ ದೇಶಗಳೂ ಕೃಷಿ ಪ್ರಧಾನ ದೇಶಗಳೇ ಆಗಿದ್ದವು. ಬಹುಸಂಖ್ಯಾತ ಜನರು ಹಳ್ಳಿಗಳಲ್ಲಿಯೇ ವಾಸಿಸುತ್ತಿದ್ದರು. ಕೈಗಾರಿಕೆಗಳು ಮತ್ತು ವ್ಯಾಪಾರ ವಾಣಿಜ್ಯಗಳ ಬೆಳವಣಿಗೆಯ ಮೂಲಕವೇ ಪಾಶ್ಚಿಮಾತ್ಯ ದೇಶಗಳು ಮುಂದುವರೆದ ದೇಶಗಳು, ಶ್ರೀಮಂತ ದೇಶಗಳು ಎನಿಸಿಕೊಂಡಿವೆ ಹಾಗೂ ಬಹುಸಂಖ್ಯಾತ ಜನರು ಅಲ್ಲಿ ನಗರಗಳಲ್ಲಿ ವಾಸಿಸುತ್ತಿದ್ದಾರೆ. ಹಿಂದುಳಿದ ದೇಶವು ಕೃಷಿ ಪ್ರಾಧಾನ್ಯತೆಯಿಂದ ಕೈಗಾರಿಕಾ ಪ್ರಧಾನ ದೇಶವಾಗೇ ಪರಿವರ್ತನೆಗೊಳ್ಳುವುದೂ ಆರ್ಥಿಕ ಅಭಿವೃದ್ಧಿಯ ಒಂದು ಮುಖ. ಅಭಿವೃದ್ಧಿ ಹೊಂದಿದ ದೇಶಗಳ ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ತೀರ ಕಡಿಮೆಯಿದೆ. ಉದಾಹರಣೆಗೆ, ಅಮೆರಿಕಾ, ಇಂಗ್ಲೆಂಡ್, ಜರ್ಮನಿ ದೇಶಗಳ ರಾಷ್ಟ್ರೀಯ ಆದಾಯದಲ್ಲಿ ಕೃಷಿ ಉತ್ಪಾದನೆಯ ಪಾಲು ಶೇ. ೨ರಷ್ಟು ಮಾತ್ರ ಇದೆ. ಸ್ವಾತಂತ್ರ್ಯಾನಂತರ ಭಾರತವು ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುತ್ತಿರುವುದರಿಂದ ದೇಶದ ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ನಿರಂತರ ಕಡಿಮೆಯಾಗುತ್ತಿದೆ. ೧೯೫೦-೫೧ರಲ್ಲಿ ಅದು ಶೇ. ೫೫.೩ರಷ್ಟಿದ್ದರೆ ಅದು ೧೯೯೬-೯೭ರಲ್ಲಿ ಶೇ. ೨೬.೧ರಷ್ಟಕ್ಕೆ ಕಡಿಮೆಯಾಗಿತ್ತು. ಆದರೆ ಕರ್ನಾಟಕದ ಒಟ್ಟು ಆದಾಯದಲ್ಲಿ ಕೃಷಿಯ ಕೊಡುಗೆ ಶೇ. ೩೬ರಷ್ಟಿರುವುದು ಹಾಗೂ ಕೈಗಾರಿಕಾ ಉತ್ಪಾದನೆಯ ಪಾಲು ಶೇ. ೨೨.೬ರಷ್ಟಿರುವುದು ಕರ್ನಾಟಕವು ಆರ್ಥಿಕವಾಗಿ ಹಿಂದುಳಿದಿದೆ ಎನ್ನುವುದನ್ನೇ ಸೂಚಿಸುತ್ತದೆ.

ಆಗಸ್ಟ್ ೧೯೯೧ರಿಂದ ಮಾರ್ಚ್ ೨೦೦೦ದವರೆಗೆ ವಿವಿಧ ರಾಜ್ಯಗಳು ಪಡೆದ ಕೈಗಾರಿಕಾ ಬಂಡವಾಳ ಹೂಡಿಕೆಯ ಪ್ರಸ್ತಾವನೆಗಳು : (IEM+LOI Industrial Proposals)

| ರಾಜ್ಯ | ಕೈಗಾರಿಕಾ ಪ್ರಸ್ತಾವನೆಗಳ ಸಂಖ್ಯೆ | ಬಂಡವಾಳದ ಪ್ರಮಾಣ (ಕೋಟಿ ರೂ.ಗಳಲ್ಲಿ) | ಕೈಗಾರಿಕಾ ಉದ್ಯೋಗದ ಪ್ರಮಾಣ |
|---|---|---|---|
| ಮಹಾರಾಷ್ಟ್ರ | ೮೨೯೯ | ೧,೯೭,೨೦೩ | ೧೪,೯೮,೨೧೨ |
| ಗುಜರಾತ್ | ೫೬೬೮ | ೧,೫೭,೪೧೯ | ೯,೧೬,೫೩೧ |
| ಉತ್ತರ ಪ್ರದೇಶ | ೪೧೪೪ | ೭೭,೦೭೧ | ೭,೧೯,೮೫೭ |
| ತಮಿಳುನಾಡು | ೪೦೫೯ | ೬೧,೭೬೫ | ೬,೬೮,೬೭೨ |
| ಆಂಧ್ರಪ್ರದೇಶ | ೨೯೦೯ | ೬೭,೯೪೩ | ೪,೯೫,೧೯೬ |
| ಹರಿಯಾಣ | ೨೫೭೮ | ೩೦,೭೬೧ | ೪,೨೧,೦೧೮ |
| ಮಧ್ಯಪ್ರದೇಶ | ೨೩೪೪ | ೬೫,೪೧೬ | ೪,೯೫,೭೦೦ |
| ರಾಜಾಸ್ತಾನ | ೨೦೪೬ | ೩೪,೨೦೪ | ೩,೯೪,೦೬೬ |
| ಪಂಜಾಬ್ | ೧೯೯೪ | ೩೯,೬೩೯ | ೪,೯೩,೯೧೭ |
| ಪಶ್ಚಿಮ ಬಂಗಾಲ | ೧೭೯೨ | ೩೨,೦೬೮ | ೨,೯೫,೦೯೧ |
| ಕರ್ನಾಟಕ | ೧೬೨೩ | ೪೬,೫೧೨ | ೩,೦೨,೧೯೨ |
| ಒಟ್ಟು ಭಾರತ | ೪೨೩[illegible] | ೯,೦೮,೮೮೮ | ೭೪,೪೧,೧೧೯ |

೧೯೯೧ರ ಆರ್ಥಿಕ ಉದಾರೀಕರಣ ಜಾರಿಗೆ ಬಂದನಂತರ ಕರ್ನಾಟಕವು ಹೂಡಿಕೆದಾರರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿಲ್ಲ. ಆಗಸ್ಟ್ ೧೯೯೧ರಿಂದ ಮಾರ್ಚ್ ೨೦೦೦ದವರೆಗೆ ಕರ್ನಾಟಕವು ಒಟ್ಟು ೧೬೨೩ ಕೈಗಾರಿಕಾ ಪ್ರಸ್ತಾವನೆಗಳನ್ನು ಪಡೆದಿದ್ದು, ಅದರಲ್ಲಿ ಒಟ್ಟು ೪೬,೫೧೨ ಕೋಟಿ ರೂ. ಬಂಡವಾಳ ತೊಡಗಿಸುವ ಹಾಗೂ ೩,೦೨,೧೯೨ ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸುವ ಪ್ರಸ್ತಾವನೆಗಳನ್ನು ಪಡೆದಿದೆ. ಅಂದರೆ ದೇಶದ ಒಟ್ಟು ಕೈಗಾರಿಕಾ ಪ್ರಸ್ತಾವನೆಗಳ ಶೇ. ೩.೮೩ರಷ್ಟನ್ನು, ಶೇ. ೫.೧೧ರಷ್ಟು ಬಂಡವಾಳವನ್ನು ಹಾಗೂ ಶೇ. ೪.೦೬ರಷ್ಟು ಉದ್ಯೋಗ ಒದಗಿಸುವ ಪ್ರಸ್ತಾವನೆಗಳನ್ನು ಕರ್ನಾಟಕವು ಪಡೆದಿದೆ. ಇದೇ ಅವಧಿಯಲ್ಲಿ ಮಹಾರಾಷ್ಟ್ರ, ಗುಜರಾತ್, ಉತ್ತರ ಪ್ರದೇಶ, ತಮಿಳುನಾಡು, ಆಂಧ್ರಪ್ರದೇಶ, ಮಧ್ಯಪ್ರದೇಶ ರಾಜ್ಯಗಳು ಸಾಕಷ್ಟು ಹೆಚ್ಚಿನ ಕೈಗಾರಿಕಾ ಪ್ರಸ್ತಾವನೆಗಳನ್ನು ಪಡೆದಿದ್ದು ಇವುಗಳಿಗೆ ಹೋಲಿಸಿದರೆ ಕರ್ನಾಟಕವು ತೀರಾ ಕಡಿಮೆ ಕೈಗಾರಿಕಾ ಹೂಡಿಕೆಗಳನ್ನು ಪಡೆದಿದೆ. ೧೯೯೧ರ ನಂತರದ ಆರ್ಥಿಕ ಉದಾರೀಕರಣದ ಪ್ರಯೋಜನಗಳನ್ನು ಪಡೆಯುವಲ್ಲಿ ಕರ್ನಾಟಕವು ವಿಫಲವಾಗಿದೆ. ೧೯೯೧ರಿಂದ ೨೦೦೦ನೇ ವರ್ಷದ ಅವಧಿಯಲ್ಲಿ ಭಾರತದ ವಾರ್ಷಿಕ ಕೈಗಾರಿಕಾ ಪ್ರಗತಿಯ ದರವು ಶೇ. ೮.೫ರಷ್ಟಿದ್ದರೆ ಇದೇ ಅವಧಿಯಲ್ಲಿ ಕರ್ನಾಟಕ ರಾಜ್ಯದ ಕೈಗಾರಿಕಾ ಪ್ರಗತಿಯ ದರವು ಶೇ. ೬ರಷ್ಟು ಮಾತ್ರವಿತ್ತು. ಕಳೆದ ವರ್ಷದ ಜೂನ್ ತಿಂಗಳಿನಲ್ಲಿ ವಿಶ್ವ ಹೂಡಿಕೆದಾರರ ಸಮ್ಮೇಳನದಲ್ಲಿ ಕರ್ನಾಟಕವು ೨೭,೦೦೦ ಕೋಟಿ ರೂ. ಬಂಡವಾಳದ ಪ್ರಸ್ತಾವನೆಯನ್ನು



ಆಗಸ್ಟ್ ೧೯೯೧ ರಿಂದ ಮಾರ್ಚ್ ೨೦೦೦ದ ವರೆಗೆ ಪ್ರಮುಖ ರಾಜ್ಯಗಳು ಪಡೆದ ಕೈಗಾರಿಕಾ ಬಂಡವಾಳ ಮತ್ತು ಉದ್ಯೋಗದ ಪ್ರತಿಶತ ಪ್ರಮಾಣ

(ಎಲ್ಲವೂ ಕೈಗಾರಿಕಾ ಬಂಡವಾಳವಲ್ಲ) ಪಡೆದಿದ್ದರೂ ಅದು ದೇಶದ ಒಟ್ಟು ಬಂಡವಾಳ ಹೂಡಿಕೆಯ ಸಣ್ಣ ಪಾಲು ಮಾತ್ರ. ಇತ್ತೀಚೆಗೆ ಆಂಧ್ರಪ್ರದೇಶ ಸರಕಾರವು ಹೂಡಿಕೆದಾರರ ಸಮ್ಮೇಳನದಲ್ಲಿ ೩೬,೦೦೦ ಕೋಟಿ ರೂ. ಬಂಡವಾಳದ ಪ್ರಸ್ತಾವನೆಗಳನ್ನು ಪಡೆದಿದೆ.

ದೇಶದ ಒಟ್ಟು ಕೈಗಾರಿಕಾ ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಶೇ. ೫ಕ್ಕಿಂತ ಕಡಿಮೆ ಇದ್ದರೂ ಮಾಹಿತಿ ತಂತ್ರಜ್ಞಾನ ಉದ್ದಿಮೆಯಲ್ಲಿ ಕರ್ನಾಟಕವು ಮುಂಚೂಣಿಯಲ್ಲಿರುವುದು ಸಮಾಧಾನಕರ ಸಂಗತಿ. ದೇಶದ ಕಂಪ್ಯೂಟರ್ ತಂತ್ರಾಂಶ (ಸಾಫ್ಟ್‌ವೇರ್)ದ ರಫ್ತಿನಲ್ಲಿ ಕರ್ನಾಟಕದ ಪಾಲು ಶೇ. ೨೫ರಿಂದ ೩೦ರಷ್ಟಿದೆ. ಬೆಂಗಳೂರು ದೇಶದ ಮಾಹಿತಿ ತಂತ್ರಜ್ಞಾನದ ಕೇಂದ್ರವಾಗಿದೆ. ಆದರೆ ಇತ್ತೀಚೆಗೆ ಇತರ ರಾಜ್ಯಗಳಿಂದ ಪೈಪೋಟಿ ಪ್ರಾರಂಭವಾದನಂತರ ಕರ್ನಾಟಕ ತನ್ನ ಮುನ್ನಡೆಯನ್ನು ಕಾಯ್ದುಕೊಳ್ಳುವುದು ಅನುಮಾನವೇ ಆಗಿದೆ. ೧೯೯೮-೯೯ರಲ್ಲಿನ ದೇಶದ ಒಟ್ಟು ೧೨,೦೦೦ ಕೋಟಿ ರೂ. ಕಂಪ್ಯೂಟರ್ ತಂತ್ರಾಂಶ ರಫ್ತಿನಲ್ಲಿ ಕರ್ನಾಟಕದ ಪಾಲು ೩೫೦೦ ಕೋಟಿ ರೂ.ಗಳಿದ್ದರೆ ಆಂಧ್ರಪ್ರದೇಶದ ಪಾಲು ಕೇವಲ ೬೫೦ ಕೋಟಿ ರೂ.ಗಳಷ್ಟಿತ್ತು. ೧೯೯೯-೨೦೦೦ನೇ ವರ್ಷದಲ್ಲಿ ಭಾರತದ ಕಂಪ್ಯೂಟರ್ ತಂತ್ರಾಂಶ ರಫ್ತಿನ ಪ್ರಮಾಣವು ೧೭,೦೦೦ ಕೋಟಿ ರೂ.ಗಳಿಗೆ ಕರ್ನಾಟಕದ ಪಾಲು ೪,೨೦೦ ಕೋಟಿ ರೂ.ಗಳಿಗೂ, ಆಂಧ್ರಪ್ರದೇಶದ ಪಾಲು ೧,೨೦೦ ಕೋಟಿ ರೂ.ಗಳಿಗೂ ಹೆಚ್ಚಾಗಿದೆ. ಆದರೆ ಒಂದು ವರ್ಷದ ಅವಧಿಯಲ್ಲಿ ಕರ್ನಾಟಕದ ರಫ್ತಿನಲ್ಲಿ ಶೇ. ೨೦ರಷ್ಟು ಪ್ರಗತಿಯಾಗಿದ್ದರೆ ಆಂಧ್ರಪ್ರದೇಶದ ರಫ್ತಿನಲ್ಲಿ ಶೇ. ೮೧ರಷ್ಟು ಪ್ರಗತಿಯಾಗಿದೆ. ಮಾಹಿತಿ ತಂತ್ರಜ್ಞಾನ – ಉದ್ದಿಮೆಗಳಿಗೆ ಬೆಂಗಳೂರು ಸೂಕ್ತ ವಾತಾವರಣವನ್ನು ಹೊಂದಿರುವುದರಿಂದ ಕಂಪ್ಯೂಟರ್ ತಂತ್ರಾಂಶ ಉದ್ದಿಮೆಗಳು ಬೆಂಗಳೂರನ್ನು ಆಯ್ದುಕೊಂಡಿವೆ. ಇದರಲ್ಲಿ ಸರಕಾರದ ವಿಶೇಷ ಪ್ರಯತ್ನವೇನೂ ಇಲ್ಲ. ಆದರೆ ನೆರೆಯ ಹೈದರಾಬಾದ್ ನಗರವು ಮಾಹಿತಿ ತಂತ್ರಜ್ಞಾನ ಉದ್ದಿಮೆಗಳಿಗೆ ಸೂಕ್ತ ವಾತಾವರಣ ಹೊಂದಿರದೇ ಇದ್ದರೂ ಅದು ಮಾಹಿತಿ ತಂತ್ರಜ್ಞಾನ ಕೇಂದ್ರವಾಗಿ ಹೊರಹೊಮ್ಮಲು ಆಂಧ್ರಪ್ರದೇಶ ಸರಕಾರದ ವಿಶೇಷ ಪ್ರಯತ್ನವೇ ಕಾರಣ.

ಕರ್ನಾಟಕವು ಕೈಗಾರಿಕೆಗಳಲ್ಲಿ ಹಿಂದುಳಿದಿರಲು ಕಾರಣಗಳೇನು ? ಮಹಾರಾಷ್ಟ್ರ,

ಗುಜರಾತ್, ತಮಿಳುನಾಡು, ಆಂಧ್ರಪ್ರದೇಶ ರಾಜ್ಯಗಳು ಕರ್ನಾಟಕಕ್ಕಿಂತ ಕೈಗಾರಿಕೆಗಳ ಸ್ಥಾಪನೆಗೆ ಸೂಕ್ತ ಪ್ರದೇಶಗಳಾಗಿರಲು ಕಾರಣಗಳೇನು ? ಇವುಗಳಿಗೆ ಉತ್ತರವನ್ನು ಹುಡುಕಬೇಕಾಗುತ್ತದೆ. ಮುಖ್ಯವಾಗಿ ಕರ್ನಾಟಕದ ಆಡಳಿತ ವ್ಯವಸ್ಥೆ ರಾಜ್ಯದಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಸೂಕ್ತ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ವಿಫಲವಾಗಿದೆ. ಕೈಗಾರಿಕೆಗಳ ಸ್ಥಾಪನೆಗೆ ಮೂಲಭೂತ ಅವಶ್ಯಕತೆಯಾದ ವಿದ್ಯುತ್‌ಶಕ್ತಿಯ ಕೊರತೆಯು ಕರ್ನಾಟಕದಲ್ಲಿ ಯಾವತ್ತೂ ಕಂಡುಬರುತ್ತಿದೆ. ರಾಜ್ಯದ ಅನೇಕ ಪ್ರದೇಶಗಳಲ್ಲಿ ಸಮರ್ಪಕ ರಸ್ತೆಗಳಾಗಲಿ, ರೈಲುಮಾರ್ಗಗಳಾಗಲಿ ಅಭಿವೃದ್ಧಿ ಹೊಂದಿಲ್ಲ. ವಿಶಾಲ ಕರಾವಳಿ ಪ್ರದೇಶವಿದ್ದರೂ ಅಭಿವೃದ್ಧಿ ಹೊಂದಿದ ಬಂದರುಗಳಿಲ್ಲ. ಒಟ್ಟಿನಲ್ಲಿ ವಿದ್ಯುತ್ ಕಡಿತ, ಹೆಚ್ಚಿನ ಬೆಲೆಯಲ್ಲಿ ವಿದ್ಯುತ್ ಪೂರೈಕೆ, ರಸ್ತೆ ಮತ್ತು ರೈಲು ಮಾರ್ಗಗಳ ದುರವಸ್ಥೆ, ಪ್ರಮುಖ ಬಂದರು – ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಇಲ್ಲದಿರುವುದು, ರಾಜಕೀಯ ಇಚ್ಛಾಶಕ್ತಿಯ ಕೊರತೆ ಇತ್ಯಾದಿಗಳು ಕರ್ನಾಟಕವು ಕೈಗಾರಿಕೆಗಳನ್ನು ಆಕರ್ಷಿಸುವಲ್ಲಿ ವಿಫಲವಾಗಿರುವುದಕ್ಕೆ ಮುಖ್ಯ ಕಾರಣಗಳಾಗಿವೆ.

೧೯೯೧ರ ನಂತರ ಕರ್ನಾಟಕವು ದಕ್ಷಿಣದ ನಾಲ್ಕು ರಾಜ್ಯಗಳಲ್ಲಿಯೇ ತೀರ ಮಂದಗಾಮಿ ಹೆಜ್ಜೆ ಇಡುತ್ತಿರುವ ರಾಜ್ಯ. ನಾವು ಕರ್ನಾಟಕವನ್ನು ಬಿಹಾರ, ಒರಿಸ್ಸಾ, ರಾಜಾಸ್ಥಾನದಂತಹ ರಾಜ್ಯಗಳಿಗೆ ಹೋಲಿಸಿ ತೃಪ್ತಿ ಪಡಬಾರದು. ಮಹಾರಾಷ್ಟ್ರ, ಗುಜರಾತ್, ತಮಿಳುನಾಡುಗಳಂತಹ ರಾಜ್ಯಗಳೊಂದಿಗೆ ಹೋಲಿಸಿ ಕೊಳ್ಳುವುದು ಸೂಕ್ತ. ಎಸ್.ಎಂ. ಕೃಷ್ಣ ನೇತೃತ್ವದ ಸರಕಾರ ಅಸ್ತಿತ್ವಕ್ಕೆ ಬಂದ ನಂತರ ಕರ್ನಾಟಕವು ಬಂಡವಾಳದಾರರನ್ನು ಆಕರ್ಷಿಸುವಲ್ಲಿ ಸಾಕಷ್ಟು ಯಶಸ್ವಿಯಾದಂತೆ ಮೇಲ್ನೋಟಕ್ಕೆ ಕಾಣಿಸುತ್ತಿದೆ. ವಿಶ್ವಬ್ಯಾಂಕಿನ ನೆರವಿನೊಂದಿಗೆ ವಿದ್ಯುತ್‌ಶಕ್ತಿಯ ವಿತರಣಾ ವ್ಯವಸ್ಥೆಯನ್ನು ಸುಧಾರಿಸಲಾಗುತ್ತಿದೆ. ಹೆದ್ದಾರಿಗಳು ನಿರ್ಮಾಣಗೊಳ್ಳುತ್ತಿವೆ. ರೈಲು ಮಾರ್ಗಗಳನ್ನು ಸುಧಾರಿಸಲಾಗುತ್ತಿದೆ. ಬಂದರುಗಳ ಅಭಿವೃದ್ಧಿಗೂ ಆದ್ಯತೆ ನೀಡಲಾಗುತ್ತಿದೆ. ಇವೆಲ್ಲ ಮೂಲಭೂತ ಸೌಕರ್ಯಗಳು ಅಭಿವೃದ್ಧಿ ಹೊಂದಿದರೆ ಬರುವ ದಿನಗಳಲ್ಲಿ ಕರ್ನಾಟಕವು ಹೆಚ್ಚಿನ ಉದ್ದಿಮೆ ಸಂಸ್ಥೆಗಳನ್ನು ಆಕರ್ಷಿಸುವುದರ ಮೂಲಕ ದೇಶದ ಪ್ರಮುಖ ಕೈಗಾರಿಕಾ ರಾಜ್ಯವಾಗಿ ಹೊರಹೊಮ್ಮ ಬಹುದು. ಇದಕ್ಕೆಲ್ಲ ರಾಜಕೀಯ ಇಚ್ಛಾಶಕ್ತಿಯ ಅವಶ್ಯಕತೆ ಇದೆ.




**ದೇವಿದಾಸ ಎಸ್. ಪ್ರಭು**
ಅರ್ಥಶಾಸ್ತ್ರ ಉಪನ್ಯಾಸಕರು
ಪಿ.ಎಂ. ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ
ಅಂಕೋಲಾ-೫೮೧೩೧೪
ಉತ್ತರ ಕನ್ನಡ ಜಿಲ್ಲೆ

# ಕೊಡುಗೆ ಅಗಾಧವಲ್ಲ - ಆದರೆ ಪರಸ್ಪರ



ಜಿ. ರಾಮಕೃಷ್ಣ : ಶ್ರೀಪ್ರಕಾಶ್ ಅವರೇ, ನೀವು ನನಗೆ ಬಹಳ ಆತ್ಮೀಯರು, ಹತ್ತಿರದವರು. ಆದ್ದರಿಂದ ಔಪಚಾರಿಕ ಸಂದರ್ಶನವೆಂದರೆ ನಿಮಗೆ ಸ್ವಲ್ಪ ಸಂಕೋಚವೆನಿಸಬಹುದು. ಜೊತೆಗೆ ಈಗ ನಾವೆಲ್ಲಾ ನಿಮ್ಮ ಅತಿಥಿಗಳು ಬೇರೆ. ನೀವು, ನಿಮ್ಮ ಪತ್ನಿ ಸಿದ್ಧಾ ಮತ್ತು ನಿಮ್ಮ ಮಕ್ಕಳು ನಮ್ಮ ಮನೆಗೆ ಭೇಟಿ ನೀಡಿ ಎಷ್ಟೋ ವರ್ಷಗಳು ಕಳೆದಿವೆ. ನಮ್ಮ ಪತ್ರಿಕೆಯ ಓದುಗರಿಗೆ ನಿಮ್ಮಂಥವರ ಪರಿಚಯವಾಗಲೆಂಬ ಆಶಯದಿಂದ ಕೆಲವು ಪ್ರಶ್ನೆಗಳನ್ನು ಕೇಳುವವನಿದ್ದೇನೆ. ಮೊದಲಿಗೆ ನಿಮ್ಮ ಬಗ್ಗೆ ನಾಲ್ಕು ಮಾತು ಹೇಳುವಿರಾ ?

**ಶ್ರೀಪ್ರಕಾಶ್** : ಬೇರೆ ಯಾರಿಗಾದರೂ ಆಗಿದ್ದರೆ ಹೇಳುವುದು ಸುಲಭವಿರುತ್ತಿತ್ತು. ನಿಮಗೆ ಎಲ್ಲಾ ತಿಳಿದಿರುವುದೇ ಆದ್ದರಿಂದ ಏನು ಮತ್ತು ಹೇಗೆ ಹೇಳಲಿ ಎಂಬ ಅತಂತ್ರ ಸ್ಥಿತಿ ನನ್ನದು. ಆದರೂ ಹೇಳಲು ಯತ್ನಿಸುತ್ತೇನೆ. ನಾನು ಎರಡನೆಯ ಬಿ.ಎ. ಪ್ರವೇಶಿಸಿದಾಗ ೧೯೬೫ರಲ್ಲಿ ನೀವು ಮೇಷ್ಟರಾಗಿ ಬಂದಿರಿ. ನಾನು ವಿಜ್ಞಾನದ ವಿದ್ಯಾರ್ಥಿಯಾಗಬೇಕೆಂದಿದ್ದೆ. ಆದರೆ ನಮ್ಮ ತಂದೆ ಶ್ರೀ. ಚಂದ್ರಕಾಂತ ಅಧಿಕಾರಿಯವರು ನನ್ನನ್ನು ಬಿ.ಎ.ಗೆ ಹಾಕಿದರು. ಅವರು ಅಂಬೇಡ್ಕರ್ ಕಾಲೇಜಿನ ಆಡಳಿತ ಮಂಡಲಿಯ ಸದಸ್ಯರಾಗಿದ್ದರಲ್ಲ, ಅದೇ ನನಗೆ ಇಕ್ಕಟ್ಟನ್ನು ತಂದಿದ್ದು. ಆ ಕಾಲೇಜಿನಲ್ಲಿ ಬಿ.ಎ. ಗೆ ವಿದ್ಯಾರ್ಥಿಗಳಿರಲಿಲ್ಲ, ಆದ್ದರಿಂದ ನನ್ನನ್ನು ಅಲ್ಲಿಗೆ ತೂರಿಸಿದರು. ಮೊದಲ ವರ್ಷ ನಾನು ತಂದೆಯಿಂದ ಬೈಸಿಕೊಂಡಿದ್ದೇ ಹೆಚ್ಚು. ಮಹಾಡಿಗೆ ಬರದೆ ಊರಲ್ಲೇ ಉಳಿದುಬಿಡುತ್ತಿದ್ದೆ. ನೀವು ಮತ್ತು ವ್ಯವಹಾರೆ ಸರ್ ಇರದಿದ್ದರೆ ಎರಡನೆ ವರ್ಷವೂ ಹಾಗೇ ಇರುತ್ತಿತ್ತೇನೋ ! ನೀವೂ ಆಗ ತಾನೆ ಮೇಷ್ಟರಾಗಿ ಬಂದಿದ್ದಿರಿ. ಅದೂ ಈ ಊರಿಗೆ ! ಸಹಜವಾಗಿಯೇ ನಾವು ಬೇಗ ನಿಮ್ಮ ನೆಚ್ಚಿನ ಶಿಷ್ಯರಾದೆವು, ಸ್ನೇಹಿತರಾದೆವು.

**ಜಿ. ಆರ್.** : ಹೌದು, ನಾನು ಆಗ ಏನೆಲ್ಲಾ ಪಾಠ ಮಾಡುತ್ತಿದ್ದೆ ಅಲ್ಲವೆ ?

**ಶ್ರೀ** : ನಮಗೆ ಇಂಗ್ಲಿಷ್ ಮತ್ತು ಸಂಸ್ಕೃತ. ನಮ್ಮ ಕ್ಲಾಸಿನ ಒಬ್ಬನೇ ಹುಡುಗನಿಗೆ ಲೈಬ್ರರಿಯ ಒಂದು ಮೂಲೆಯಲ್ಲಿ ಪಾಲಿ ಬೇರೆ ಹೇಳಿಕೊಡುತ್ತಿದ್ದಿರಿ. ಆ ಬಗ್ಗೆ ನಾನಾ ಟಿಪ್ಪಿಸ್ ನಿಮ್ಮನ್ನು ಗೇಲಿ ಮಾಡುತ್ತಿದ್ದುದನ್ನು ಇನ್ನೂ ಮರೆತಿಲ್ಲ. ಅದಿರಲಿ: ನಿಮ್ಮ ಸಲಹೆಯಂತೆ ನಾನು ಇಂಗ್ಲಿಷ್ ಎಂ. ಎ. ಮಾಡಿ ನಮ್ಮೂರಿನ ಪ್ರೌಢಶಾಲೆಯಲ್ಲಿ ಏಳು ವರ್ಷ ಉಪಾಧ್ಯಾಯನಾಗಿದ್ದೆ. ಆಮೇಲೆ ಇಪ್ಪತ್ತು ವರ್ಷ ಅಲ್ಲೇ ಎಸ್. ಎಂ. ಜೋಶಿ ಜೂನಿಯರ್ ಕಾಲೇಜಿನಲ್ಲಿ ಇಂಗ್ಲಿಷ್ ಕಲಿಸಿದೆ. ಈಗ ಕೆಲವು ವರ್ಷಗಳಿಂದ ಮಹಾಡಿನ ರಾಯಗಢ ಮಿಲಿಟರಿ ಶಾಲೆಯ ಪ್ರಾಂಶುಪಾಲನಾಗಿ ಕೆಲಸ ಮಾಡುತ್ತಿದ್ದೇನೆ.

**ಜಿ. ಆರ್.** : ನೀವು ಗಳಿಸಿರುವ ಪ್ರಶಸ್ತಿಗಳು, ಬೇರೆ ಚಟುವಟಿಕೆಗಳು, ಅವುಗಳ ಬಗ್ಗೆ ಹೇಳಿ.

**ಶ್ರೀ** : ೧೯೭೯ - ೮೦ರಲ್ಲಿ ನಿಮ್ಮ ಮೈಸೂರಿನಲ್ಲಿ ವ್ಯಾಸಂಗ ಮಾಡಲು ಬಂದಿದ್ದೆ. ಆ ದಿನಗಳನ್ನು ನಾನು ಮರೆಯಲಾರೆ. ತೊಣಚಿಕೊಪ್ಪಲಿನ ನನ್ನ ಅಂದಿನ ಸಣ್ಣ ಮನೆ ಅದ್ಭುತವಾಗಿತ್ತು. ನೀವೂ ಆಗಾಗ್ಗೆ ಅಲ್ಲಿಗೆ ಬರುತ್ತಿದ್ದಿರಲ್ಲ. ನಾನು ಇಲ್ಲಿಯವನಲ್ಲ ಎಂಬ ಭಾವನೆ ಅಲ್ಲಿ ನನಗೆ ಒಮ್ಮೆಯೂ ಬರಲಿಲ್ಲ. ನಮ್ಮ ಬಾಳ ಠಾಕ್ರೆಗೆ ಇದಾವುದೂ ಅರ್ಥವಾಗುವುದಿಲ್ಲ ಬಿಡಿ. ಆಗ್ಗೆ ಠಾಕ್ರೆ ಮುಂಬಯಿಯಲ್ಲಿ ದಕ್ಷಿಣ ಭಾರತದವರನ್ನೆಲ್ಲಾ 'ಲುಂಗಿವಾಲಾ'ಗಳು ಎಂದು ಛೇಡಿಸಿ ಅವರ ಮೇಲೆ ಹರಿಹಾಯುತ್ತಿದ್ದುದು, ಎಷ್ಟೋ ಉಡುಪಿ ಹೋಟೆಲ್‌ಗಳನ್ನು ಧ್ವಂಸ ಮಾಡಿದ್ದುದು, ಇವೆಲ್ಲ ಈಗ ಇತಿಹಾಸ. ಆತ ತನ್ನ ಪತ್ರಿಕೆ 'ಮಾರ್ಮಿಕ್'ನಲ್ಲಿ ಏನು ಬರೆಯುತ್ತಿದ್ದ ಗೊತ್ತೆ? ಮಹಾಡಿನಲ್ಲಿದ್ದಾಗ ನೀವೂ ಅದನ್ನು ತಪ್ಪದೆ ಓದುತ್ತಿದ್ದಿರಲ್ಲವೆ ? ಕನ್ನಡ (ಆತ ಅದನ್ನು 'ಕಾನಡಿ' ಎನ್ನುತ್ತಿದ್ದ) ಎಂಥ ಭಾಷೆ ! ಒಂದು ತಗಡಿನ ಡಬ್ಬದಲ್ಲಿ ನಾಲ್ಕೈದು ಕಲ್ಲುಗಳನ್ನು ಹಾಕಿ ಬಲವಾಗಿ ಅಲ್ಲಾಡಿಸಿದರೆ ಶಬ್ದ ಬರುತ್ತದಲ್ಲಾ, ಅದೇ ಕಾನಡಿ ಎಂದು ತಿಂಗಳಿಗೊಮ್ಮೆಯಾದರೂ ಬರೆಯುತ್ತಿದ್ದ. ನಮ್ಮಲ್ಲಿ ಬಹುಕಾಲ ಅದೊಂದು 'ಜೋಕ್' ಆಗಿ ಉಳಿದಿತ್ತು. ಮೈಸೂರಿನ ಅಖಿಲ ಭಾರತ ಭಾಷಾ ಸಂಸ್ಥೆಯಲ್ಲಿ ತಮಿಳು ಕಲಿಯಲು ಮಹಾರಾಷ್ಟ್ರದಿಂದ ಬಂದಿದ್ದ ಏಕೈಕ ವಿದ್ಯಾರ್ಥಿ ನಾನು. ಇಂಗ್ಲಿಷ್ ಕಲಿಯಬೇಕಾದರೆ ನಮ್ಮೂರಿಗೆ ಬಾ ಎಂದು ನನಗೆ ಹೇಳುತ್ತಿದ್ದ ನೀವು ಇಂಗ್ಲಿಷ್ ಕಲಿಯಲು ಇಂಗ್ಲೆಂಡಿಗೆ ಹೋದಿರಿ, ತಮಿಳು ಕಲಿಯಲು ನಾನು ನಿಮ್ಮೂರಿಗೆ ಬಂದೆ ! ಅದು ಹೇಗೋ ಏನೋ, ಅಂತೂ ನನಗೆ ಆಸಕ್ತಿ ಹೆಚ್ಚಿತು ಮತ್ತು ಆಮೇಲೆ ಹಲವು ಬಾರಿ ತಮಿಳುನಾಡಿಗೆ ಹೋಗಿಬಂದಿದ್ದೇನೆ. ನಿಮ್ಮ ಮರಾಠಿಗಿಂತ ನನ್ನ ತಮಿಳು ಹತ್ತು ಪಟ್ಟು ಉತ್ತಮವಾಗಿದೆ ಎಂದು ಧಾರಾಳವಾಗಿ ಹೇಳಬಹುದು, ಅಲ್ಲವೆ ?

**ಜಿ. ಆರ್.** : ನಿಮ್ಮ ಪ್ರಶಸ್ತಿಗಳು, ಚಟುವಟಿಕೆಗಳು ಹೇಳಲಿಲ್ಲವಲ್ಲ !

**ಶ್ರೀ** : ಹೇಳಿಕೊಳ್ಳುವುದು ಬಹಳವೇನಿಲ್ಲ. ೧೯೮೮ರಲ್ಲಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗದವರು ಆಯೋಜಿಸಿದ್ದ ಸಾಂಸ್ಕೃತಿಕ ತರಬೇತಿ ಕೇಂದ್ರದಲ್ಲಿ ಭಾಗಿಯಾಗಿದ್ದೆ, ೮೯ರಲ್ಲಿ ರಾಷ್ಟ್ರೀಯ ಐಕ್ಯತಾ ಸಮಾವೇಶಕ್ಕೆಂದು ಬೆಂಗಳೂರಿಗೆ ಬಂದಿದ್ದೆ, ೯೪-೯೫ರಲ್ಲಿ ಮಹಾರಾಷ್ಟ್ರದ ಅತ್ಯುತ್ತಮ ಅಧ್ಯಾಪಕನೆಂಬ ಪ್ರಶಸ್ತಿ ಪಡೆದೆ. ನಮ್ಮೂರಿನಲ್ಲಿ "ಪಂಚಶೀಲ ಬೌದ್ಧ ಜನ ಸೇವಾಸಂಘ" ಎಂಬ ಸಂಸ್ಥೆ ನಮ್ಮ ತಂದೆಯವರ ನೇತೃತ್ವದಲ್ಲಿ ಬಹುಹಿಂದೆಯೇ ಸ್ಥಾಪಿತವಾಗಿತ್ತು. ಈಗ ಅದರ ಅಧ್ಯಕ್ಷನಾಗಿ ಕೆಲಸ ಮಾಡುತ್ತಿದ್ದೇನೆ.

**ಜಿ. ಆರ್.** : ಆ ಸಂಸ್ಥೆಯ ಕಾರ್ಯವ್ಯಾಪ್ತಿ ಏನು ?

**ಶ್ರೀ** : ನಿಮಗೆ ತಿಳಿದಿರುವಂತೆ ನಮ್ಮಲ್ಲಿ ಮಹಾರರು ಬೌದ್ಧ ಧರ್ಮಾವಲಂಬಿಗಳಾಗಿ ಬಾಬಾಸಾಹೇಬರ ಕಾಲದಲ್ಲೇ ಪರಿವರ್ತನೆ ಹೊಂದಿದ್ದರು. ಈಗಲೂ ಅವರು ಸಾವಿರ ಮುಗ್ಗಟ್ಟುಗಳನ್ನು ಎದುರಿಸುವುದಿದೆ. ಅವರ ನಡುವೆ ಆರೋಗ್ಯ, ವಿದ್ಯಾಭ್ಯಾಸ, ಉದ್ಯೋಗ ತರಬೇತಿ, ಸಾಂಸ್ಕೃತಿಕ ಚಟುವಟಿಕೆ, ರಾಜಕೀಯ ಚಿಂತನೆ, ಮುಂತಾದುವಕ್ಕೆ ಸಂಬಂಧಿಸಿದ ಕೆಲಸ ಮಾಡುವುದು ಸಂಸ್ಥೆಯ ಉದ್ದೇಶ. ಅದಲ್ಲದೆ ನಮ್ಮೂರಿನಲ್ಲಿ "ಧರ್ಮನಿರಪೇಕ್ಷ ಶಿಕ್ಷಣ ಟ್ರಸ್ಟ್" ಒಂದನ್ನು ಸ್ಥಾಪಿಸಿದ್ದೇವೆ. ಅದರ ವತಿಯಿಂದ ಮರಾಠಿ ಮತ್ತು ಇಂಗ್ಲಿಷ್ ಮಾಧ್ಯಮಗಳ ಶಾಲೆಯೊಂದನ್ನು ನಡೆಸುತ್ತಿದ್ದೇವೆ. ಇದರಲ್ಲಿ ನನ್ನ ಪತ್ನಿಯು ವಿಶೇಷವಾಗಿ

೫೫ ವರ್ಷ ವಯಸ್ಸಿನ 'ಹುಡುಗ' ಶ್ರೀ. ಶ್ರೀಪ್ರಕಾಶ್ ಅಧಿಕಾರಿ. ಡಾ|| ಅಂಬೇಡ್ಕರರ ಮೊದಲ ದೊಡ್ಡ ಚಳುವಳಿಯಿಂದಾಗಿ ಪ್ರಸಿದ್ಧವಾಗಿರುವ ಮಹಾಡ್ ಬಳಿಯ ಗೋರೆಗಾಂವ್ ಅವರ ಊರು. ವಿದ್ಯಾಭ್ಯಾಸ ಮಹಾಡಿನಲ್ಲಿ. ೧೯೬೪-೬೫ರಲ್ಲಿ ಬಿ. ಎ. ವಿದ್ಯಾರ್ಥಿಯಾಗಿದ್ದಾಗ ಆಗ ತಾನೆ 'ಡಾಕ್ಟರ್' ಆಗಿದ್ದ ಜಿ. ರಾಮಕೃಷ್ಣ ಅವರ 'ಪ್ರಥಮ ಶಿಷ್ಯ' ಶ್ರೀ ಅಧಿಕಾರಿ. ಗುರುವಿನಂತೆ ಶಿಷ್ಯನೂ ಸಂಸ್ಕೃತ ಮತ್ತು ಇಂಗ್ಲಿಷ್‌ಗಳಲ್ಲಿ ಎಂ.ಎ. ಪದವೀಧರ. ಅಧ್ಯಾಪಕ ವೃತ್ತಿಯಲ್ಲಿ ಕೀರ್ತಿಗಳಿಸಿದ ಶ್ರೀ ಅಧಿಕಾರಿಯವರು ಈಗ ಮಹಾಡ್ ಬಳಿಯ ಅಚಲೋಲಿ ಎಂಬಲ್ಲಿ 'ರಾಯಗಢ ಮಿಲಿಟರಿ ಸ್ಕೂಲ್'ನ ಪ್ರಾಂಶುಪಾಲರಾಗಿ ಕೆಲಸ ಮಾಡುತ್ತಿದ್ದಾರೆ. ರಾಯಗಢಕ್ಕೆ ಭೇಟಿ ನೀಡಬೇಕಾದರೆ ಶ್ರೀ ಅಧಿಕಾರಿಯವರೊಡನೆ ಹೋಗಬೇಕು, ಒಂದೊಂದು ಚಾರಿತ್ರಿಕ ಅಂಶವನ್ನೂ ಸೂಕ್ಷ್ಮವಾಗಿ ವಿವರಿಸಿ ಹೇಳಬಲ್ಲ ತಾದಾತ್ಮ್ಯ ಅವರದು. ಕೆಲವು ತಿಂಗಳುಗಳ ಹಿಂದೆ ಅಲ್ಲಿಗೆ ಭೇಟಿ ನೀಡಿದಾಗ ಜಿ. ಆರ್., ಮೈತ್ರಿ, ಡಾ|| ಎನ್. ಗಾಯತ್ರಿ ಮತ್ತು ವಿ. ವಿಜಯಲಕ್ಷ್ಮಿ ಅಧಿಕಾರಿ ದಂಪತಿಗಳ ಆತಿಥ್ಯ ಪಡೆದು ರಾಯಗಢ ಹಾಗೂ ರಾಯಗಢ ಮಿಲಿಟರಿ ಶಾಲೆಯ ಪರಿಚಯ ಪಡೆಯಲು ಸಾಧ್ಯವಾಯಿತು. ಆ ಸಂದರ್ಭದಲ್ಲಿ ಅಧಿಕಾರಿಯವರನ್ನು 'ಹೊಸತು'ವಿಗಾಗಿ ಜಿ. ರಾಮಕೃಷ್ಣ ಸಂದರ್ಶಿಸಿದರು. ಸಂದರ್ಶನವು ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ನಡೆದಿತ್ತು, ಅದರ ಆಯ್ದ ಭಾಗಗಳು ಇಲ್ಲಿವೆ.

# ಬಾಂಧವ್ಯಕ್ಕೆ ನಗಣ್ಯವೂ ಅಲ್ಲ

*- ಶ್ರೀಪ್ರಕಾಶ್ ಅಧಿಕಾರಿ*



ತೊಡಗಿಸಿಕೊಂಡಿದ್ದಾಳೆ. ನಮ್ಮ ತಂದೆಯವರು ಡಾ॥ ಅಂಬೇಡ್ಕರರ ಪ್ರತಿನಿಧಿಯಾಗಿ ನಾನಾ ಟಿಪ್ನಿಸ್ ಮುಂತಾದವರೊಂದಿಗೆ ಖೋತಿ ವಿರುದ್ಧದ ರೈತ ಚಳುವಳಿಗಳಲ್ಲಿ ಭಾಗವಹಿಸಿದ್ದು, ಆ ಕಾಲದ (ಅಂದರೆ ೧೯೩೦ರ ದಶಕದ) ಹೋರಾಟಗಳ ಬಗ್ಗೆ ಒಂದು ಪುಸ್ತಕ ಬರೆದಿದ್ದರು. ಅದು ಸುರ್ಬಾ ನಾನಾ (ಅವರು ನಿಮಗೆ ಚೆನ್ನಾಗಿ ಗೊತ್ತಲ್ಲ - ನಾನಾ ಟಿಪ್ನಿಸ್) ಇದ್ದಾಗ ಪ್ರಕಟವಾಗಲಿಲ್ಲ. ನಮ್ಮ ತಂದೆಯವರು ತೀರಿಕೊಂಡನಂತರ ನಾವು ಅದನ್ನು ಪ್ರಕಟಿಸಿದೆವು. ಅಲ್ಲದೆ, ನನ್ನ ತಮ್ಮ (ಅವನೂ ನಿಮ್ಮ ವಿದ್ಯಾರ್ಥಿಯಾಗಿದ್ದ) ಮತ್ತು ನಾನು ಸೇರಿ ಒಂದು ಜಿಲ್ಲಾ ವಾರಪತ್ರಿಕೆಯನ್ನು ಹೊರತರುತ್ತಿದ್ದೇವೆ.

**ಜಿ. ಆರ್.** : ನೀವು ಪಾರ್ಲಿಮೆಂಟ್ ಚುನಾವಣೆಯಲ್ಲಿ ಸ್ಪರ್ಧಿಸುತ್ತೀರೆಂಬ ವದಂತಿ ಇತ್ತು- ಇದೆಲ್ಲಾ ಅದಕ್ಕೆ ತಯಾರಿಯೋ ಏನು ?

**ಶ್ರೀ** : ಛೇ, ಅದೆಲ್ಲಾ ಏನೂ ಇಲ್ಲ - ನನಗೆ ಶಾಲೆಯ ಕೆಲಸವೇ ಸಾಕಷ್ಟಿದೆ. ಇನ್ನು ಮಿಕ್ಕಿದ್ದು ನಮ್ಮ ತಂದೆಯವರಿಂದ ನಾವು ಕಲಿತ ಸಾಮಾಜಿಕ ಜವಾಬ್ದಾರಿಯ ನಿರ್ವಹಣೆಯ ಕೆಲವು ಚಟುವಟಿಕೆಗಳು, ಅಷ್ಟೆ.

**ಜಿ. ಆರ್.** : ನಿಮ್ಮ ತಮಿಳು ಕಲಿಕೆಯ ಭಾಗವಾಗಿ ಮಾಡಿರುವ ಕೆಲಸ ಏನು ?

**ಶ್ರೀ** : ಸ್ವಲ್ಪ ಮಾಡಿದ್ದೇನೆ. ಹನ್ನೊಂದು ಬೇರೆಬೇರೆ ತಮಿಳು ಸಾಹಿತಿಗಳ ಸಣ್ಣಕತೆಗಳನ್ನು ಮರಾಠಿಗೆ ಭಾಷಾಂತರಿಸಿ ವಿವಿಧ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದ್ದೇನೆ. ಎರಡು ಕಾದಂಬರಿಗಳನ್ನು ಅನುವಾದಿಸಿ ಪ್ರಕಟಿಸಿದ್ದೇನೆ. ಜಯಕಾಂತನ್ ಬರೆದಿರುವ 'ಬೇಡಿ' ಕಾದಂಬರಿಯನ್ನು ಈಗ ಅನುವಾದಿಸುತ್ತಿದ್ದೇನೆ. ಅಖಿಲನ್‌ರ ಸ್ನೇಹಿತಿ, ಕೋವಿ ಮಣಿಶೇಖರನ್‌ರ ಕಾವ್ಯಮನ್ನೈವೀ ಮತ್ತು ಲಕ್ಷ್ಮೀ ಅವರ *ಒರು ಕಾವೇರಿಯೈ ಪೋಲ*, ಇವು ನನ್ನ ಪ್ರಮುಖ ಅನುವಾದಿತ ಕೃತಿಗಳು.

**ಜಿ. ಆರ್.** : ಪ್ರಕಾಶನದ ಅನುಭವವನ್ನೇನಾದಾರೂ ಹೇಳಬಲ್ಲಿರಾ ?

**ಶ್ರೀ** : ಮೊದಲಿಗೆ ನನ್ನ ಅನುವಾದ ಅಂಗೀಕಾರಾರ್ಹ ಎನಿಸುತ್ತದೋ ಇಲ್ಲವೋ ಎಂಬ ಅಂಜಿಕೆ ಇತ್ತು. ಈಗಲೂ ಇದೆ. ಒಂದೆರಡು ಕತೆಗಳು ಪ್ರಕಟವಾದ ನಂತರ ಮರಾಠಿ ಓದುಗರು ತಮಿಳು ಸಾಹಿತ್ಯದ ಅಂಶಗಳನ್ನು ಮೆಚ್ಚುತ್ತಾರೆಂಬ ಭಾವನೆ ಬಂದಿತು. ನಾನು ಆಗಾಗ್ಗೆ ತಮಿಳುನಾಡಿನ ಬೇರೆ ಬೇರೆ ಭಾಗಗಳಿಗೆ ಹೋಗಿಬರುವುದು ರೂಢಿಯಾಗಿದೆ, ಅದರಿಂದ ಅನುವಾದಕ್ಕೆ ಹೆಚ್ಚಿನ ಒತ್ತಾಸೆಯು ಸಿಕ್ಕಿದೆ. ಶ್ರೀಮತಿ ಲಕ್ಷ್ಮಿಯವರ ಕಾದಂಬರಿಗೆ ೧೯೮೪ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತ್ತು. ನಾನು ಅವರ ಕಾದಂಬರಿಯ ಅನುವಾದಕ್ಕೆ ಅನುಮತಿ ಪಡೆದು ಕೆಲಸ ಆರಂಭಿಸಿದ ತರುವಾಯದಲ್ಲಿ ಅವರು ಕಾಲವಾದರು. ಅವರ ಮಗ ಡಾ॥ ಮಹೇಶ್ವರನ್ ಅವರನ್ನು ಸ್ವತಃ ಭೇಟಿಯಾಗಿ ಮತ್ತೆ ಅನುಮತಿ ಪಡೆಯಲು ಶ್ರೀ. ಚಂದ್ರಕಾಂತ ಭಿಸೆ ಮುಂದಾದರು. ಕನ್ಯಾಕುಮಾರಿಯ ಪ್ರಾಧ್ಯಾಪಕ ನೀಲಕಂಠನ್ ಅನುವಾದದಲ್ಲಿ ನನಗೆ ಸಹಾಯ ಮಾಡಿದರು. ಅನುವಾದಿತ ಕೃತಿಯನ್ನು ನಮ್ಮ ಖ್ಯಾತ ಲೇಖಕಿ ಶ್ರೀಮತಿ. ಸಂಜೀವನೀ ಖೇರ್ ಪರಾಮರ್ಶೆ ಮಾಡಿ ಕೆಲವು ಸೂಚನೆಗಳನ್ನು ನೀಡಿದರು. ನಮ್ಮ ತಂದೆಯವರೂ ಅನುವಾದವನ್ನು ಒಮ್ಮೆ ನೋಡಿದ್ದರು. ತಮಿಳು ಸಾಹಿತ್ಯದ ಅನುವಾದಿತ ಕೃತಿಗಳಿಗೆ ಮರಾಠಿ ಪ್ರಕಾಶಕರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ. ಇಂಗ್ಲಿಷ್ ಅಥವಾ ಹಿಂದಿಯ ಮುಖಾಂತರ ಬರದೆ ನೇರವಾಗಿ ತಮಿಳಿನಿಂದ ಮರಾಠಿಗೆ ಬಂದ ಕೃತಿಗಳಾದ್ದರಿಂದ ಇವಕ್ಕೆ ಹೆಚ್ಚಿನ ಮಾನ್ಯತೆ ದೊರೆತಿದೆಯೆಂದು ನಾನು ಭಾವಿಸುತ್ತೇನೆ. ನಮ್ಮ ಕೇಂದ್ರ ಅಕಾಡೆಮಿಗಳು ಇಂತಹ ಕೆಲಸವನ್ನು ಎಲ್ಲ ಭಾಷೆಗಳ ಸಂದರ್ಭದಲ್ಲೂ ಸಾಧ್ಯವಾಗಿಸ ಬೇಕು. ಎಲ್ಲಾ ಹಿಂದಿ ಮುಖಾಂತರ ಬರುವುದು ಆರೋಗ್ಯಕರವಲ್ಲ. ಪ್ರಾದೇಶಿಕ ವೈವಿಧ್ಯತೆಯ ನೇರ ಪರಿಚಯ ಓದುಗರಿಗೆ ದೊರೆತಾಗ ಅದರ ಬಗ್ಗೆ ಕುತೂಹಲ ಮತ್ತು ಗೌರವ ಮೂಡುತ್ತದೆ. ನಮ್ಮ ಸಂಸ್ಕೃತಿ ಎಷ್ಟು ಸೊಗಸಾದ ಮುಖಗಳನ್ನು ಹೊಂದಿದೆಯೆಂಬುದು ಸಾಹಿತ್ಯದಿಂದ ಸ್ವಲ್ಪಮಟ್ಟಿಗೆ ತಿಳಿಯುತ್ತದೆ. ಎಲ್ಲವನ್ನೂ ಕೇಂದ್ರೀಕರಿಸುವ ಪ್ರವೃತ್ತಿ ಅಪಾಯಕಾರಿ ಎಂಬುದನ್ನು ನಾವೆಲ್ಲಾ ತಿಳಿದುಕೊಳ್ಳಬೇಕಾಗಿದೆ. ನನಗೆ ಆಗಾಗ್ಗೆ ಅನಿಸುತ್ತದೆ, ನಾವೆಲ್ಲ ರಾಮನ ಹೆಸರು ಹೇಳುತ್ತೇವಾದರೂ ಎಲ್ಲರಿಗೂ ಅವನು ಒಂದೇ ಅಲ್ಲ. ಉದಾಹರಣೆಗೆ, 'ರಾಮಲಲ್ಲಾ' ಎಂದರೆ ತಮಿಳುನಾಡಿನ ಬಹುತೇಕ ಜನರಿಗೆ ಯಾವ ವಿಶೇಷ ಭಾವನೆಯೂ ಮೂಡುವುದಿಲ್ಲ. ಅದೇ ಉತ್ತರ ಪ್ರದೇಶದಲ್ಲಾದರೆ ಅದರ ಪ್ರಭಾವ ಗಣನೀಯ ಪ್ರಮಾಣದಲ್ಲಿರುತ್ತದೆ. ನಿಮಗೂ ತುಕಾರಾಮ ಗೊತ್ತು , ಆದರೆ ನಾವು ಅವನ ಅಭಂಗಗಳನ್ನು ಸವಿಯುವಂತೆ ನೀವು ಸವಿಯುವುದಿಲ್ಲ. ಜ್ಞಾನೇಶ್ವರನ ಹೆಸರೇ ಕೇಳದವರು ಮಹಾರಾಷ್ಟ್ರದಾಚೆ ಬೇಕಾದಷ್ಟಿದ್ದಾರೆ, ಆದರೆ ತುಲಸೀದಾಸ ಎಲ್ಲರಿಗೂ ಗೊತ್ತು. ಇದು ನಮ್ಮ ವಿದ್ಯಾಭ್ಯಾಸದ ನ್ಯೂನತೆ. ಸಾಂಸ್ಕೃತಿಕವಾಗಿ ವಿಶಾಲ ತಳಹದಿ ಬೇಕಾದರೆ ಎಲ್ಲ ಪ್ರದೇಶಗಳ ದೊಡ್ಡ ಜನರ ಪರಿಚಯವನ್ನು ಎಲ್ಲ ಪ್ರದೇಶಗಳವರೂ ಪಡೆಯುವಂತಾಗಬೇಕು. ಈ ದಿಕ್ಕಿನಲ್ಲಿ ನಾನು ಸ್ವಲ್ಪ ಕೆಲಸ ಮಾಡಿದ್ದೇನೆಂಬ ಸಮಾಧಾನ ಇದೆ. ನನ್ನದು ಅಗಾಧವಾದ ಕೊಡುಗೆಯೇನಲ್ಲ; ಆದರೆ ಅದು ನಗಣ್ಯವೂ ಅಲ್ಲ.



**ಜಿ. ಆರ್.** : ನಿಮ್ಮ ಕೆಲಸ ಅತಿಶಯವಾಗಿ ಮುಂದುವರಿಯಲೆಂದು ಆಶಿಸುತ್ತೇನೆ. ಈಗ ಬೇರೆ ಪ್ರಶ್ನೆಯೊಂದಕ್ಕೆ ಹೋಗೋಣ. ರಾಯಗಢ, ಮಹಾಡ್, ಜಂಜೀರಾ, ಇಲ್ಲೆಲ್ಲಾ ಬೇಕಾದಷ್ಟು ಬದಲಾವಣೆಗಳಾಗಿವೆ. ಮೂವತ್ತು ವರ್ಷಗಳಲ್ಲಿ ಏನೆಲ್ಲಾ ಘಟಿಸಿವೆ ಎನಿಸುತ್ತದೆ. ಆ ಬಗ್ಗೆ ಏನೆನ್ನುತ್ತೀರಿ ?

**ಶ್ರೀ** : ನಮಗೂ ಆಶ್ಚರ್ಯವೆನಿಸುತ್ತದೆ. ಮುರುಡ್-ಜಂಜೀರಾ ನೋಡಿ. ಆಗ್ಗೆ ಜಂಜೀರಾ ದ್ವೀಪದ ಕೋಟೆಯಲ್ಲಿ ಅನೇಕ ಕುಟುಂಬಗಳು ವಾಸವಾಗಿದ್ದುವು. ಈಗ ಬಹುಭಾಗ ಮುಳ್ಳು, ಪೊದೆ. ಅದಾವುದೋ ಸಿನಿಮಾಕ್ಕೆ ಕನ್ನಡದ ನಟ-ನಟಿಯರು ಅಲ್ಲಿ ಚಿತ್ರೀಕರಣಕ್ಕಾಗಿ ಬಂದಿದ್ದರಂತೆ. ನಿನ್ನೆ ಅದರ ಬಗ್ಗೆ ಅಂಬಿಗ ನಿಮಗೆ ಬೇಕಾದಷ್ಟು ವಿವರಗಳನ್ನು ನೀಡಿದನಲ್ಲವೆ ? ಪ್ರವಾಸಿಗರು ಕಡಿಮೆ ಮತ್ತು ಅವರನ್ನುಳಿದು ಬೇರೆ ಯಾರೂ ಅಷ್ಟಾಗಿ ಅಲ್ಲಿಗೆ ಹೋಗುವುದಿಲ್ಲ. ಜನ ವಾಸಿಸುತ್ತಿದ್ದಾಗ ಆ ಕೋಟೆಗೆ ಜೀವವಿತ್ತು. ಅಲ್ಲಿಯ ಚಿಕ್ಕ ರಾಜ ಈ ಪ್ರದೇಶದ ರೈತರಿಗೆ ಬೇಕಾದಷ್ಟು ಕಿರುಕುಳ ಕೊಡುತ್ತಿದ್ದ. ಅವರ ಪರವಾಗಿ ವಾದ ಹೂಡಲು ನಮ್ಮ ತಂದೆಯವರಿಗೆ ವಿಶೇಷ ಪರವಾನಗಿ ನೀಡಿದ್ದನಂತೆ ಆ ರಾಜ. ಅದೂ ಎಷ್ಟೋ ತಕರಾರು ಮಾಡಿದ ಮೇಲೆ. ಇನ್ನು ಪ್ರತಾಪಗಢದ ಕತೆಯೇ ಬೇರೆ. ಅಲ್ಲಿ ಈಗ ಯಾವಾಗಲೂ ಜನಸಂದಣಿ ಇರುತ್ತದೆ. ನೀವಿಲ್ಲಿದ್ದಾಗ ಅದರ ಶೇಕಡಾ ಹತ್ತು ಭಾಗದಷ್ಟು ಮಾತ್ರ ಬರುತ್ತಿದ್ದರು. ಅಲ್ಲಿ ಶಿವಾಜಿ ಮಹಾರಾಜರ ಪ್ರತಿಮೆ, ಭವಾನಿ ದೇವಸ್ಥಾನ, ಎಲ್ಲಾ ಈಗ ಆಕರ್ಷಣೀಯ. ಬಂದವರೆಲ್ಲಾ ಸ್ವ-ಇಚ್ಛೆಯಿಂದ ಬಂದವರು ಎಂದೇನೂ ಇಲ್ಲ. ಶಿವಸೇನೆಯ ಸಂಘಟನಾಕ್ರಮಕ್ಕೆ ಅದೊಂದು ಉದಾಹರಣೆ. ಇಂದು ಇಂಥಾ ಊರಿನವರು ಪ್ರತಾಪಗಢಕ್ಕೆ ಹೋಗಿ ಸೇವೆ ಸಲ್ಲಿಸಬೇಕು, ಎಂಬ ಆಜ್ಞೆ ಬರುತ್ತದೆ. ಆ ಊರಿನ ಮೂವತ್ತು - ನಲವತ್ತು ಮಂದಿ ಬಂದು ಸಂಭ್ರಮದಿಂದ ಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ. ಬೇರೆ ಪ್ರವಾಸಿಗರೂ ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿದ್ದಾರೆ.

**ಜಿ. ಆರ್.** : ರಾಯಗಢದ ವಿಷಯ ಹೇಳಿ.

**ಶ್ರೀ** : ಸ್ವತಃ ಪ್ರಧಾನಿ ವಾಜಪೇಯಿಯವರೇ ಅಲ್ಲಿಗೆ ಬಂದಿದ್ದರಲ್ಲ. ಹಿಂದೊಮ್ಮೆ ಯಶವಂತರಾವ್ ಚವಾಣ್ ಕೇಂದ್ರ ಮಂತ್ರಿಯಾಗಿದ್ದಾಗ ಹೆಲಿಕಾಪ್ಟರ್‌ನಲ್ಲಿ ರಾಯಗಢಕ್ಕೆ ಬರುತ್ತಾರೆಂಬ ಸುದ್ದಿ ಬಂದು ಅನೇಕರು ಪ್ರತಿಭಟಿಸಿದರು. ಚವಾಣ್ ಬರಲಾಗಲಿಲ್ಲ. ಈಗ ಎಷ್ಟೋ ಮಂದಿ ಹಾರಿ ಬಂದು ಇಳಿಯುತ್ತಾರೆ. ಜೊತೆಗೆ ರೋಪ್‌ವೇ ಸಹ ಇದೆ. ನೀವಿಲ್ಲಿದ್ದಾಗ

ನಾವದೆಷ್ಟು ಸಲ ಅಲ್ಲಿಗೆ ಹೋಗಿಬರುತ್ತಿದ್ದೆವು ಅಲ್ಲವೆ ? ಸೈಕಲ್ಲಿನಲ್ಲಿ ಹೋಗಿ, ಬೆಟ್ಟದ ಬುಡದಿಂದ ಎರಡು ಕಿಲೋಮೀಟರ್ ದೂರದ ಊರಲ್ಲಿ ಅದನ್ನು ಬಿಟ್ಟು ಹೋಗಬೇಕಾಗಿತ್ತು. ಬಹಳ ಕಡಿಮೆ ಜನ ಹೋಗಿ ಬರುತ್ತಿದ್ದರು. ಈಗ ಸುಲಭ, ಮೂರನೆಯ ಒಂದು ಭಾಗದಷ್ಟು ಬೆಟ್ಟವನ್ನು ಬಸ್ಸಿನಲ್ಲೇ ಹತ್ತಬಹುದು. ನನಗಂತೂ ಬಹಳ ಸಂತೋಷ. ಏಕೆಂದರೆ ಶಿವಾಜಿಯ ಕಾಲದ ನಿಜವಾದ ಚರಿತ್ರೆ ತಿಳಿಯಲು ಈಗ ಅವಕಾಶಗಳು ಹೆಚ್ಚಾಗಿವೆ. ಪ್ರತಾಪಗಢಕ್ಕೆ ಬರುವಷ್ಟು ಶಿವಸೇನೆಯ ಕಾರ್ಯಕರ್ತರು ರಾಯಗಢಕ್ಕೆ ಬರುವುದಿಲ್ಲ. ಅಲ್ಲಿ ಭವಾನಿ ಇಲ್ಲವೆಂದೋ, ಅಫಜಲ್‌ಖಾನನ ಸಮಾಧಿ ಇಲ್ಲವೆಂದೋ ಇರಬಹುದು. ನಮ್ಮ ರಾಯಗಢ ಮಿಲಿಟರಿ ಶಾಲೆಯ ವಿದ್ಯಾರ್ಥಿಗಳು ಸಾಮಾನ್ಯವಾಗಿ ಒಂದು ವರ್ಷದಲ್ಲಿ ಆರೇಳು ಬಾರಿಯಾದರೂ ರಾಯಗಢಕ್ಕೆ ಹೋಗಿಬರುತ್ತಾರೆ.

**ಜಿ. ಆರ್.** : ಮಹಾಡಿನ ಪರಿಸ್ಥಿತಿ ಹೇಗಿದೆ ?

**ಶ್ರೀ** : ದೇಶದ ಪರಿಸ್ಥಿತಿ ಇದ್ದಂತೆ, ಎಂದರೆ ತಪ್ಪಾಗಲಾರದು. ಎರಡು-ಮೂರು ಅಂಶಗಳಿಂದ ಇದನ್ನು ಸ್ಪಷ್ಟಮಾಡಿಕೊಳ್ಳಿ: ನಿಮಗೆ ತಿಳಿದಿರುವಂತೆ ನಮ್ಮೂರಿನ ರಸ್ತೆಗಳನ್ನು ಅಗಲ ಮಾಡಲು ಸಾಧ್ಯವಿಲ್ಲ. ನೂರೈವತ್ತು ವರ್ಷಗಳಿಂದ ಇಲ್ಲಿ ನಗರಪಾಲಿಕೆ ಇದೆಯೆಂಬುದನ್ನು ನಂಬುವುದೇ ಕಷ್ಟ. ವಾಹನಗಳ ಸಂಖ್ಯೆ ಕಳೆದ ಮೂವತ್ತು ವರ್ಷಗಳಲ್ಲಿ ಹತ್ತರಷ್ಟು ಹೆಚ್ಚಿದೆ. ನೀವು ಹೇಳುವುದನ್ನು ನೋಡಿದರೆ ನಮ್ಮ ತೊಣಚಿಕೊಪ್ಪಲಿನ ಗತಿಯೂ ಅದೇ ಎಂದು ತೋರುತ್ತದೆ. ನೀವು ಇಲ್ಲಿದ್ದಾಗ ಒಂದು ವರ್ಷ ಶಿವಾಲಯದ ಬಳಿಯ ಬಾಗಡೆ ಹಾಸ್ಟೆಲ್‌ನಲ್ಲಿದ್ದಿರಿ ಮತ್ತು



ಇನ್ನೊಂದು ವರ್ಷ ಪ್ರಸಿದ್ಧ ಚೌಧಾರ್ ತಳೆಯ ತಟದ ಒಂದು ವಠಾರದಲ್ಲಿದ್ದಿರಿ. ಈಗ ನಮ್ಮ ಶಿವಾಲಯ ನೋಡಿ ಹೇಗಿದೆ ! ಬಾಬಾಸಾಹೇಬ ಅಂಬೇಡ್ಕರರು ಆಗಿನ ನಿಯಮವನ್ನು ಮುರಿದು ಬಲವಂತವಾಗಿ ಪ್ರವೇಶಿಸಿದ್ದು ಇದೇ ದೇವಾಲಯವನ್ನೇ, ಎಂಬ ಅನುಮಾನ ಬರುತ್ತದೆ. ದೇವಾಲಯದ ತುಂಬ ಈಗ ಅಮೃತಶಿಲೆ ಹಾಗೂ ಝುಗಮಗಿಸುವ ವಿದ್ಯುದ್ದೀಪಗಳು. ಹಿಂದಿಗಿಂತಲೂ 'ಭಕ್ತರೂ' ಬಹಳ ಜಾಸ್ತಿಯಾಗಿದ್ದಾರೆ. ಈಗ ಅಂಬೇಡ್ಕರ್ ಬಂದರೆ ಇದರೊಳಕ್ಕೆ ಪ್ರವೇಶ ಮಾಡುವುದು ವ್ಯರ್ಥವೆಂದು ತಿಳಿದು ಹಿಂದಕ್ಕೆ ಹೋದಾರು ! ಚಾರಿತ್ರಿಕವಾಗಿ ಅಂಬೇಡ್ಕರ್ ಮತ್ತು ಮಹಾಡ್ ನಡುವಿನ ಗಾಢ ಸಂಬಂಧ ಇರುವುದು ಚೌಧಾರ್ ತಳೆಯಿಂದಾಗಿ. ಅದೊಂದು ದೊಡ್ಡ ಕಲ್ಯಾಣಿ. ನಿಮ್ಮ ಯಾವ ದೇವಸ್ಥಾನಗಳಲ್ಲೂ ಅಷ್ಟು ದೊಡ್ಡ ಕಲ್ಯಾಣಿ ಇಲ್ಲ. ಇಂದಿನ ಪರಿಸ್ಥಿತಿ ನೋಡಿ : ಯಾವ ಕಲ್ಯಾಣಿಯ ನೀರನ್ನು ಮುಟ್ಟಲು ನಿಷೇಧವಿತ್ತೋ ಆ ಕಟ್ಟುಪಾಡನ್ನು ಮುರಿದ ಬಾಬಾಸಾಹೇಬರ ಜ್ಞಾಪಕಾರ್ಥ, ಕಲ್ಯಾಣಿಯ ಒಂದು ಭಾಗವನ್ನು ಮುಚ್ಚಿಹಾಕಿ ಅಂಬೇಡ್ಕರ್ ಸ್ಮಾರಕ ಕಟ್ಟಿದ್ದಾರೆ ! ಬಾಬಾಸಾಹೇಬರ ಜೊತೆ ಕೆಲಸಮಾಡಿದ್ದ ಹಿರಿಯರೆಲ್ಲಾ ಅದನ್ನು ವಿರೋಧಿಸಿದ್ದರು. ಕಲ್ಯಾಣಿಯನ್ನು ಮುಚ್ಚಬೇಡಿ, ಹತ್ತಿರದಲ್ಲೇ ಎಲ್ಲಾದರೂ ಜಾಗ ಪಡೆದು ಸ್ಮಾರಕ ಕಟ್ಟಿ, ಎಂದರು ಅವರೆಲ್ಲಾ. ಆದರೆ ಇಂದಿನ ರಾಜಕಾರಣಿಗಳು ಅದನ್ನು ಒಪ್ಪದೆ ಕಲ್ಯಾಣಿ ಮುಚ್ಚಿಹಾಕಿದರು. ಆ ಸ್ಮಾರಕ ನೋಡಿದಾಗ ಗೌರವದ ಭಾವದ ಬದಲು ಕಲ್ಯಾಣಿ ಹೋಯಿತಲ್ಲಾ ಎಂಬ ನೋವೇ ಹೆಚ್ಚಿನದು. ಡಾ॥ ಅಂಬೇಡ್ಕರ್ ಇಂತಹ ಸ್ಮಾರಕವನ್ನು ಒಪ್ಪುತ್ತಿರಲಿಲ್ಲವೆಂದು ನಮ್ಮಂತಹವರ ಭಾವನೆ. ನಾನು ಹೇಳುತ್ತಿರುವುದೇನೆಂದರೆ ಈಚಿನ ದಶಕಗಳಲ್ಲಿ ಬಾಬಾಸಾಹೇಬ್ ಅವರ ಕೃತಿಗಳಿಗಿಂತಲೂ ಅವರ ಹೆಸರಿಗೆ ಪ್ರಾಶಸ್ತ್ಯ ಜಾಸ್ತಿಯಾಗಿದೆ. ನಮಗೆ ಬೇಕಾಗಿರುವುದು ಅವರ ಸಾಮಾಜಿಕ ಕ್ರಾಂತಿಯ ಕೆಲಸಗಳ ಮುಂದುವರಿಕೆ. ನಮ್ಮ ಜಿಲ್ಲೆಯಲ್ಲಿ ಅದು ಅಷ್ಟಾಗಿ ಕಾಣಬರುತ್ತಿಲ್ಲವೆಂಬುದು ದುಃಖದ ಸಂಗತಿ. ಇನ್ನೊಂದು ವಿಷಯ ನಿಮ್ಮ ಗಮನಕ್ಕೆ ಈಗಾಗಲೇ ಬಂದಿರಬೇಕು : ನಿಮ್ಮ ಮತ್ತು ನಮ್ಮ ಡಾ॥ ಅಂಬೇಡ್ಕರ್ ಕಾಲೇಜು ಯಾವ ಸ್ಥಿತಿಯಲ್ಲಿದೆ ನೋಡಿ. ಆ ಕಾಲೇಜನ್ನು ಸ್ಥಾಪಿಸಿದ್ದೇ ಅವರ ಗೌರವಾರ್ಥ. ಅವರ ಹೆಸರಿಗೆ ಮತ್ತು ಅವರ ಘನತೆ ಆಶಯಗಳಿಗೆ ತಕ್ಕುದಾಗಿದೆಯೇ ನಮ್ಮ ಕಾಲೇಜು, ಎಂಬ ಪ್ರಶ್ನೆಯನ್ನು ನಾವು ಎದುರಿಸಬೇಕು. ಕ್ರಮೇಣ ಉನ್ನತ ಮಟ್ಟಕ್ಕೇರುವುದರ ಬದಲು ಅದು ಕ್ಷೀಣಿಸುತ್ತಿದೆಯೆಂಬ ವ್ಯಥೆ ನಮ್ಮದು. ನಮ್ಮ ಕಾಲದಲ್ಲಿರುತ್ತಿದ್ದಷ್ಟು ಶೋಭೆಯೂ ಈಗ ಕಾಲೇಜಿಗೆ ಇಲ್ಲವೆಂದರೆ ಏನರ್ಥ ? ನಾನು ವೃಥಾ ಗೊಣಗುತ್ತಿಲ್ಲ. ನಾನೂ ಪೀಪಲ್ಸ್ ಎಜುಕೇಷನ್ ಸೊಸೈಟಿಯ ಸದಸ್ಯನೇ. ನಮ್ಮ ತಂದೆಯವರಷ್ಟು ಸಕ್ರಿಯವಾಗಿ ಭಾಗವಹಿಸುತ್ತಿಲ್ಲ, ನಿಜ. ಆದರೆ ಅದು ಬಾಬಾಸಾಹೇಬ್ ಸ್ಥಾಪಿಸಿದ ಸಂಸ್ಥೆಯೆಂಬುದು ನಮಗೆ ಹೆಮ್ಮೆಯ ಸಂಗತಿ. ಸಂಸ್ಥೆಯ ಈಗಿನ ಅಧ್ಯಕ್ಷರೊಡನೆ ನಾನು ಕಾಲೇಜಿನ ಪರಿಸ್ಥಿತಿಯ ಬಗ್ಗೆ ಮಾತನಾಡಿದ್ದೇನೆ. ಆದರೆ ಅವರಿಗೂ ಮುಗ್ಗಟ್ಟುಗಳಿವೆ. ಅಂದರೆ, ಬದಲಾಗುತ್ತಿರುವ ಮಹಾಡಿನ ಪರಿಸ್ಥಿತಿಯಲ್ಲಿ ಕಾಲೇಜು ಅಂದಗೆಡುತ್ತಿರುವುದೂ ಸೇರಿದೆ.

**ಜಿ. ಆರ್.** : ಅಂದರೆ, ಈಗೇನು ಮಾಡಬೇಕೆನ್ನುತ್ತೀರಿ ?

**ಶ್ರೀ** : ಅದು ನನಗೆ ತಿಳಿಯುತ್ತಿಲ್ಲ. ರಾಯಗಢ ಮಿಲಿಟರಿ ಶಾಲೆಗೆ ಆರ್ಥಿಕ ಬೆಂಬಲ ನೀಡುವ ಜನ ಡಾ॥ ಅಂಬೇಡ್ಕರ್ ಕಾಲೇಜಿಗೇಕೆ ನೀಡುವುದಿಲ್ಲ? ಅರ್ಥವತ್ತಾಗಿ ಆಯೋಜಿಸಿದರೆ ಖಂಡಿತ ನೀಡುತ್ತಾರೆ. ನಾವು ಸರಿಯಾದ ಹೆಜ್ಜೆ ಹಾಕಬೇಕು. ಅದು ದೇಶಕ್ಕೂ ಅನ್ವಯಿಸುವ ಮಾತಲ್ಲವೆ ? ಒಂದು ಮಾತಂತೂ ನಿಜ : ನಾವು ಯಾರೂ ಹತಾಶರಾಗಿಲ್ಲ. ❑❑❑

## ಸಾದರ ಸ್ವೀಕಾರ

**ಹಳ್ಳಿಗಾಡಿನ ರೂವಾರಿ (ಶ್ರೀ ಜಿ. ಮಾದೇಗೌಡರ ವ್ಯಕ್ತಿತ್ವ)**
*ಡಾ॥ ಸಿ. ಪಿ. ನಾಗರಾಜ*
**ಪುಟ : ೬೪** **ಬೆಲೆ : ರೂ. ೩೫**
**ನಾಗು ಸ್ಮಾರಕ ಪ್ರಕಾಶನ,**
ಕಾಳಮುದ್ದನ ದೊಡ್ಡಿ - ೫೭೧ ೪೨೨. ಮಂಡ್ಯ ಜಿಲ್ಲೆ

**ಗಾಂಧಿಯಿಂದ..... ಗಾವ್ಲಿ ತನಕ (ಲೇಖನಗಳು)**
*ಶ್ರೀನಿವಾಸ ಜೋಕಟ್ಟೆ*
**ಪುಟ : ೧೧೮** **ಬೆಲೆ : ರೂ. ೬೦**
**ಅನ್ವೇಷಣೆ ಪ್ರಕಾಶನ,** ೩೭/೨ ಎ, 'ನಿಸರ್ಗ'
ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು - ೪೦

**ಯುದ್ಧ (ಮೂರು ಕಿರು ನಾಟಕಗಳು)** *ವಿಷ್ಣು ನಾಯ್ಕ*
**ಪುಟ : ೬೪** **ಬೆಲೆ : ರೂ. ೪೦**
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ, ಉತ್ತರ ಕನ್ನಡ

**ಗುಬ್ಬಚ್ಚಿ (ಮಕ್ಕಳ ಕವನ ಸಂಕಲನ)**
*ಚಂದ್ರಶೇಖರ ಶಿ. ಹಿರೇಮಠ*
**ಪುಟ : ೩೬** **ಬೆಲೆ : ರೂ. ೩೦**
**ವಿಜಯ ಪ್ರಕಾಶನ,** ವಿಜಯ ನಿಲಯ
ನಾಲತವಾಡ - ೫೮೬ ೧೨೪, ಬಿಜಾಪುರ ಜಿಲ್ಲೆ.

**ನಗೆ ಸಿಂಚನ (ನಗೆ ಬರಹಗಳು)** ಎಂ. ಎಸ್. ನರಸಿಂಹಮೂರ್ತಿ
**ಪುಟ : ೧೫೨** **ಬೆಲೆ : ರೂ. ೩೫**
**ಔಷಧೀಯ ಗುಣವುಳ್ಳ ಸೊಪ್ಪು - ತರಕಾರಿಗಳು**
*ಡಾ॥ ವಸುಂಧರಾ ಭೂಪತಿ*
**ಪುಟ : ೧೧೨** **ಬೆಲೆ : ರೂ. ೨೦**
ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು
**ದಿವ್ಯಚಂದ್ರ ಪ್ರಕಾಶನ,** ನಂ. ೪೫, ಪಾಪಣ್ಣನ ತೋಟ,
ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೬ನೇ ಮುಖ್ಯರಸ್ತೆ,
೮ನೇ ಅಡ್ಡರಸ್ತೆ, ಬಸವೇಶ್ವರ ನಗರ, ಬೆಂಗಳೂರು - ೭೯

**ಅಜ್ಜಿ ಮದ್ದು (ಲೇಖನ ಸಂಗ್ರಹ)** *ಪಾಣಾಜೆ ಪಂಡಿತರು*
**ಪುಟ : ೨೦೦** **ಬೆಲೆ : ರೂ. ೧೦೦**
**ಆಯುರ್ವೇದ ಪ್ರಕಾಶನ,**
ಅಂಚೆ : ಪಾಣಾಜೆ - ೫೭೪ ೨೫೯ ಪುತ್ತೂರು (ದ.ಕ.)

**ಮಕ್ಕಳ ರೂಪಕಗಳು (ಕಿರು ನಾಟಕಗಳು)**
*ದೊಡ್ಡಣ್ಣ ಗದ್ದನಕೇರಿ*
**ಪುಟ : ೬೮** **ಬೆಲೆ : ರೂ. ೩೦**
**ಕಮಲ ಪ್ರಕಾಶನ,** ಚಿತ್ತವಾಡಗಿ
ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ.

**ಪ್ರೀತಿ ಪ್ರೇಮ ಪ್ರಣಯ (ಕವನ ಸಂಗ್ರಹ)**
*ಸಂ:ಕೋ.ಲ. ರಂಗನಾಥರಾವ್*
**ಪುಟ : ೨೧೮** **ಬೆಲೆ : ರೂ. ೭೦**
**ಗುರುರಾಜ ಪ್ರಕಾಶನ,** ಸಿ-೨, ಸಿ.ಪಿ.ಡಬ್ಲ್ಯು ಕಾಲೋನಿ,
ಗೇಟ್ ನಂ. ೨, ವಿಜಯನಗರ, ಬೆಂಗಳೂರು - ೪೦

ಸಿ ಪಿ ಕೆ : ಇನ್ನೂರು, ಇನ್ನಷ್ಟು (ಕೃತಿ ಸೂಚಿ)
**ಪುಟ : ೩೬** **ಬೆಲೆ : ರೂ. ೧೦**
ಸಂವಹನ, ೧೨/೧ ಎ
ಈವ್ನಿಂಗ್ ಬಜಾರ್ ಹಿಂಭಾಗ
ಶಿವರಾಂ ಪೇಟೆ, ಮೈಸೂರು - ೧




**ನ**ಮ್ಮೂರಿಂದ ಬೆಂಗಳೂರಿಗೆ ಸುಮಾರು ನಾಲ್ಕು ತಾಸಿನ ಹಾದಿ. ನಾನು ನೆನ್ನೆ ಮುಂಜಾನೆ ಊರಿಂದ ಹೊರಟು ಹತ್ತು ಗಂಟೆಗೆ ಬೆಂಗಳೂರು ತಲುಪಿದ್ದೆ. ನನ್ನ ಪೂರ್ವ ಯೋಜನೆಯಂತೆ ನಾನು ಭೇಟಿ ಮಾಡಬೇಕಿದ್ದ ತಜ್ಞ ವೈದ್ಯರು ಸರಿಯಾದ ಸಮಯಕ್ಕೆ ಸಿಗುತ್ತಿದ್ದರೆ ನಾನು ಸಂಜೆಯ ವರೆಗೆ ಊರಿಗೆ ಹಿಂದಿರುಗಬಹುದಿತ್ತು. ಆದರೆ ದುರದೃಷ್ಟಕ್ಕೆ ವೈದ್ಯರು ಊರಲ್ಲಿ ಇರಲಿಲ್ಲ. ಅವರು ಸಂಜೆ ಹಿಂದಿರುಗುವ ನಿರೀಕ್ಷೆಯಿತ್ತು. ಬೇರೆ ದಾರಿ ಕಾಣದೆ ಅವರನ್ನು ನಿರೀಕ್ಷಿಸಲೇಬೇಕಾಯಿತು.

ಸಂಜೆ ವೈದ್ಯರು ತಡವಾಗಿ ಹಿಂದಿರುಗಿದರು. ಅವರನ್ನು ಭೇಟಿ ಮಾಡುವ ವೇಳೆಗೆ ಕತ್ತಲೆ ಹರಡಲು ಪ್ರಾರಂಭವಾಯಿತು. ಆ ಸಮಯದಲ್ಲಿ ಊರಿಗೆ ಬಸ್ಸು ಇಲ್ಲದಿರುವುದರಿಂದ ವಸತಿಗೃಹದಲ್ಲಿ ಉಳಿದುಕೊಳ್ಳಬೇಕಾಯಿತು.

ಬೆಳಿಗ್ಗೆ ವಸತಿಗೃಹ ಬಿಟ್ಟು ಬಸ್ಸು ನಿಲ್ದಾಣಕ್ಕೆ ಬಂದು ಅಂದಿನ ದಿನಪತ್ರಿಕೆ ಕೊಂಡು ಬಸ್ಸಿನ ಕಡೆ ಹೊರಡುತ್ತಾ ಮುಖಪುಟದ ಮೇಲೆ ದೃಷ್ಟಿ ಹಾಯಿಸಿದೆ. ಮೊದಲನೆಯ ಸುದ್ದಿಯೇ ನಮ್ಮ ಊರಿನ ಬಗ್ಗೆ ಇತ್ತು. ದಪ್ಪ ಅಕ್ಷರದಲ್ಲಿ ನಮ್ಮೂರಿನಲ್ಲಿ 'ಗುಂಪು ಘರ್ಷಣೆ, ಗಾಳಿಯಲ್ಲಿ ಗುಂಡು' ಎಂದು ಪ್ರಕಟವಾಗಿತ್ತು. ಒಂದು ಕಡೆ ನಿಂತು ವಿವರ ಓದಿದೆ. ನೆನ್ನೆ ಮಧ್ಯಾಹ್ನ ಎರಡು ಕೋಮುಗಳ ಮಧ್ಯೆ ಘರ್ಷಣೆಯಾಗಿ ವಾಹನಗಳಿಗೆ ಬೆಂಕಿ ಹಾಕುವುದಲ್ಲದೆ ಬಹಳಷ್ಟು ಅಂಗಡಿ ನಾಶ ಮಾಡಲಾಗಿತ್ತು. ಜೊತೆಗೆ ಚೂರಿ ಇರಿತದ ಪ್ರಕರಣಗಳು ನಡೆದು ಏಳು ಮಂದಿ ಸ್ಥಳದಲ್ಲೇ ಅಸು ನೀಗಿದ್ದರು. ಇನ್ನೂ ಅನೇಕ ಮಂದಿ ಗಾಯಗೊಂಡಿದ್ದರು. ಸತ್ತಿರುವವರ ಹೆಸರುಗಳು ಬಹಿರಂಗಪಡಿಸಿರಲಿಲ್ಲ. ಮುಂಜಾಗ್ರತೆ ಕ್ರಮವಾಗಿ ಅಲ್ಲಿ ಮೂರು ದಿನಗಳ ಕಾಲ ೧೪೪ನೇ ಸೆಕ್ಷನ್ ಅನ್ವಯ ನಿಷೇಧಾಜ್ಞೆ ಜಾರಿಗೊಳಿಸಲಾಗಿತ್ತು.

ಇದೆಲ್ಲವನ್ನೂ ಓದಿ ಮುಗಿಸಿದಂತೆ ತುಂಬ ಗಂಭೀರವಾದೆ. ಇಷ್ಟೊಂದು ಒಳ್ಳೆಯ ಸಂದರ್ಭದಲ್ಲಿ ಊರಲ್ಲಿ ಇಲ್ಲದಿರುವುದಕ್ಕೆ ನನ್ನನ್ನು ನಾನೇ ಶಪಿಸಿಕೊಂಡೆ ! ಒಂದು ವೇಳೆ ನಾನು ಇರುತ್ತಿದ್ದರೆ ಎದುರಾಳಿಯ ಬಹಳಷ್ಟು ಮಂದಿಯನ್ನು ಕೊಲ್ಲಿಸಬಹುದಿತ್ತು. ಇಂಥ ಸಮಯಕ್ಕಾಗಿ ನಾನು ಬಹಳಷ್ಟು ಮಾರಕ ವಸ್ತುಗಳನ್ನು ಸಂಗ್ರಹಿಸಿಟ್ಟಿದ್ದೆ. ನಮ್ಮ ಕೋಮಿನವರಿಗೆ ಮಾರಕ ವಸ್ತುಗಳನ್ನು ಕೊಟ್ಟು ಆದಷ್ಟು ಹೆಚ್ಚಾಗಿ ಅನಾಹುತ ಮಾಡಲು ಅವರನ್ನು ಪ್ರಚೋದನೆ ಮಾಡಬಹುದಿತ್ತು.

ಗಲಭೆಯಲ್ಲಿ ಸತ್ತವರ ಹೆಸರುಗಳನ್ನು ಬೇರೆ ಪತ್ರಿಕೆಯಲ್ಲಿ ಕೊಟ್ಟಿರಬಹುದೆಂದು ಇನ್ನೊಂದು ಪತ್ರಿಕೆ ಸಹ ಕೊಂಡುಕೊಂಡೆ. ಅದರಲ್ಲಿ ಕೂಡ ವಿವರ ಇರಲಿಲ್ಲ. ಆದಷ್ಟು ಬೇಗ ಊರಿಗೆ ತಲುಪಬೇಕೆಂದು ಯೋಚಿಸುತ್ತಿರುವಾಗಲೇ ಈ ಸಮಯದಲ್ಲಿ ಊರಿಗೆ ರೈಲು ಇರುವುದು ಜ್ಞಾಪಕಕ್ಕೆ ಬಂತು. ಇಂಥ ಸಂದರ್ಭಗಳಲ್ಲಿ ರೈಲಿನಲ್ಲಿ ಪ್ರಯಾಣ ಮಾಡಿದರೆ ಕ್ಷೇಮ ಎಂದು ತೀರ್ಮಾನಕ್ಕೆ ಬಂದು ರೈಲು ನಿಲ್ದಾಣಕ್ಕೆ ನಡೆದೆ.

ಟಿಕೇಟು ಕೊಂಡು ರೈಲು ಹತ್ತುವಾಗ ಮತ್ತೆ ಇಂಥ ಸಂದರ್ಭದಲ್ಲಿ ಊರಲ್ಲಿ ಇರಬೇಕಿತ್ತು ಎಂದು ಮತ್ತೊಂದು ಬಾರಿ ಶಪಿಸಿಕೊಂಡೆ.

ರೈಲು ನಿಲ್ದಾಣ ಬಿಟ್ಟ ಸ್ವಲ್ಪ ಸಮಯದ ಬಳಿಕ ನಾನು ಶೌಚಾಲಯಕ್ಕೆ ಹೋಗುತ್ತಿರುವಾಗ ಅಲ್ಲೇ ಮೂಲೆಯಲ್ಲಿದ್ದ ಕನ್ನಡಿಯತ್ತ ಗಮನ ಹೋಯಿತು. ತಲೆ ಬಾಚಿಕೊಳ್ಳಲು ಕನ್ನಡಿ ಎದುರು ನಿಂತಾಗ ಗರ ಬಡಿದ ಅನುಭವವಾಯಿತು. ನನ್ನ ಮನಸ್ಸಿನಲ್ಲೇ ನಾನು ಗಟ್ಟಿಯಾಗಿ ಚೀರಿಕೊಂಡೆ.

ನನ್ನ ರುಂಡ ಇರುವ ಜಾಗದಲ್ಲಿ ಕ್ರೂರ ಮೃಗದ ರುಂಡ ಇರುವುದು ಅರಿವಿಗೆ ಬಂದು ಮೈಯೆಲ್ಲ ಬೆವತುಕೊಂಡೆ.

ನನ್ನ ಅರಿವಿಗೆ ಬಾರದಂತೆ ಯಾರಾದರೂ ನನ್ನ ಮುಖಕ್ಕೆ ಮುಖವಾಡ ಇರಿಸಿರಬಹುದೆಂದು ಅನುಮಾನಕ್ಕೊಳಗಾಗಿ ಮುಖವಾಡ ತೆಗೆಯಲು ಪ್ರಯತ್ನಿಸಿದೆ - ಇದು ಮುಖವಾಡ ಅಲ್ಲವೆಂದು ಗಮನಕ್ಕೆ ಬಂದಾಗ ಕಲ್ಲುಬಂಡೆ ಮೇಲೆ ಮುಖ ಚಚ್ಚಿಕೊಳ್ಳಬೇಕೆನಿಸಿತು.

ಮನದಲ್ಲಿ ಹತ್ತಾರು ಪ್ರಶ್ನೆಗಳು ಎದ್ದೇಳುತ್ತಿದ್ದುವು - ನನ್ನ ರುಂಡದ ಜಾಗದಲ್ಲಿ ಕ್ರೂರ ಮೃಗದ ರುಂಡ ಯಾವಾಗಿನಿಂದ ಬಂದಿದೆ ತಿಳಿಯಲಿಲ್ಲ. ಒಂದು ವೇಳೆ ಈ ರೀತಿ ಆಗಿ ಬಹಳ ದಿನಗಳಾಗಿದ್ದರೆ ಯಾರಾದರೂ ಯಾಕೆ ಇದನ್ನು ನನ್ನ ಗಮನಕ್ಕೆ ತರಲಿಲ್ಲ? ನನಗೆ ಹೆದರಿಕೊಂಡು ಹೇಳಲಿಲ್ಲ ಎಂದು ಅನಿಸುತ್ತೆ.

ಈ ಪರಿವರ್ತನೆ ನನ್ನ ಗಮನಕ್ಕೆ ಸಹ ಯಾಕೆ ಬಂದಿಲ್ಲ...

ಈಗ ನನಗೆ ಮೃಗದ ರುಂಡ ಇರುವ ವಿಚಾರ ಸಹಪ್ರಯಾಣಿಕರಿಗೆ ತಿಳಿದರೆ ಅವರು ಸರಪಳಿಯನ್ನು ಎಳೆದು ರೈಲು ನಿಲ್ಲಿಸಿ ನನ್ನನ್ನು ರೈಲಿಂದ ಇಳಿಸಲೂಬಹುದು ಅಥವಾ ನನ್ನನ್ನು ಹಿಡಿದು ಪೊಲೀಸರ ವಶಕ್ಕೆ ಕೊಡಬಹುದು. ನಾಳೆ ನನ್ನ ಭಾವಚಿತ್ರ ಪತ್ರಿಕೆಗಳಲ್ಲೂ ಬಂದರೂ ಬರಬಹುದು...

ಇಷ್ಟೆಲ್ಲ ಯೋಚಿಸುತ್ತಿದ್ದಂತೆ ಉಸಿರು ಕಟ್ಟಿದಂತಾಯಿತು. ಮತ್ತೆ ಆಸನಕ್ಕೆ ಹೋಗಿ ಕುಳಿತುಕೊಳ್ಳಲು ಮನಸ್ಸಾಗಲಿಲ್ಲ. ಚೀಲದಿಂದ ದೊಡ್ಡ ವಸ್ತ್ರವನ್ನು ತೆಗೆದು ತಲೆ ಮೇಲೆ ಹಾಕಿಕೊಂಡೆ. ಕಣ್ಣು ಮಾತ್ರ ಬಿಟ್ಟು ಇಡೀ ಮುಖ ಮುಚ್ಚಿಕೊಂಡೆ.

ಇನ್ನು ಮುಂದೆ ಹತ್ತಾರು ಜನರಲ್ಲಿ ಮುಖ ಎತ್ತಿಕೊಂಡು ನಾನು ತಿರುಗಾಡುವಂತಿಲ್ಲ. ಏನಿದ್ದರೂ ಮನೆಯ ಮೂಲೆಯಲ್ಲೇ ಇರಬೇಕು. ಇಂಥ ಬದುಕಿಗಿಂತ ಸಾಯುವುದೇ ವಾಸಿ ಎನ್ನಿಸಿತು.

ರೈಲಿನ ಬಾಗಿಲು ಬಳಿ ನಿಂತು ಈ ಸಮಸ್ಯೆಗೆ ಪರಿಹಾರ ಹುಡುಕುವುದರಲ್ಲೇ ಪ್ರಯಾಣ ಮುಗಿಯಿತು.

ಊರಲ್ಲಿ ಸ್ಮಶಾನ ಮೌನ ಹರಡಿಕೊಂಡಿತ್ತು. ಅಲ್ಲಲ್ಲಿ ಪೊಲೀಸ್ ಪೇದೆಗಳು ಕೋವಿ ಹಿಡಿದು ಗಸ್ತು ತಿರುಗುತ್ತಿದ್ದರು. ಊರಿನವರು ಅಲ್ಲೊಬ್ಬ ಇಲ್ಲೊಬ್ಬ ತಿರುಗಾಡುತ್ತಿದ್ದರು. ನಮ್ಮ ಬೀದಿಗೆ ಬಂದು ಮನೆಯತ್ತ ಹೆಜ್ಜೆಯಿಡುತ್ತಿದ್ದಂತೆ ಕ್ಷಣಾರ್ಧ ನನ್ನ ರುಂಡ ಬದಲಾಗಿ ಹೋಗಿರುವ ವಿಚಾರವನ್ನು ಮರೆತು ನೆನ್ನೆ ಗಲಭೆಯಲ್ಲಿ ಸತ್ತಿರುವವರಲ್ಲಿ ಹೆಚ್ಚಾಗಿ ಯಾವ ಕೋಮಿನವರು ಎಂದು ತಿಳಿಯುವ ಕುತೂಹಲವಾಗಿ, ಯಾರಾದರೂ ಪರಿಚಿತರು ಸಿಗಬಹುದೆಂದು ಸುತ್ತ ದೃಷ್ಟಿ ಬೀರಿದಾಗ, ಅಲ್ಲಿ ತಿರುಗಾಡುತ್ತಿರುವ ಊರಿನವರ ರುಂಡಗಳು ನನ್ನ ರುಂಡದಂತಾಗಿರುವುದು ಗಮನಕ್ಕೆ ಬಂದಾಗ ಕುಸಿದಂತಾಯಿತು. ಅದೇ ಸಮಯಕ್ಕೆ ಮತ್ತೊಂದು ಪ್ರಶ್ನೆ ಎದುರಾಯಿತು: ಮನೆಗೆ ಹೋದರೆ ಮನೆಯವರು ನನ್ನನ್ನು ಗುರುತಿಸಬಹುದೇ ಅಥವಾ ಅವರ ರುಂಡಗಳು ಸಹ ಬದಲಾಗಿ ಹೋಗಿರಬಹುದೇ ?

ಈ ಪ್ರಶ್ನೆಗೆ ಉತ್ತರ ಸಿಗದೆ ಭೂಮಿಗೆ ಇಳಿದಂತಾಯಿತು.

ಅದೀಬ್ ಅಖ್ತರ್
C/O ಖಾನ್ ಮಹಮ್ಮದ್, ಬನ್ನೂರು - ೫೭೧ ೧೦೧, ಮೈಸೂರು ಜಿಲ್ಲೆ

**ಎಚ್ ಎಮ್ ಟಿ**
**ಬಹುಮಾನಿತ ಲೇಖನ**

ಹೊಸತು HMT ಗಡಿಯಾರಗಳು ಬಹುಮಾನ

# ಹಿಗ್ಗು



'ಹಿಗ್ಗು' ಅಂದರ ಹಿಗ್ಗೂದು, ಸಂತೋಷ ಪಡೂದು, ಪ್ರಲಾಪ ಮರೆತು ಆಹ್ಲಾದ ಹಂಚಿಕೊಳ್ಳೋದು, ತನ್ನ ಮರತು ಮಂದೀ ಕೂಡ ಬೆರಿಯೋದು. ಇದಕ್ಕಿಂತ ಹೆಚ್ಚಿನ ಹಿಗ್ಗ ಇನ್ನಾವುದೂ ಇಲ್ಲ - ಇದು ನನ್ನ ನಂಬಿಕಿ.

ಒಂದಾನೊಂದು ಕಾಲಕ್ಕ ಸಾಕಷ್ಟು ಅಗ್ಗ ಆಗಿದ್ದ ಈ ಹಿಗ್ಗು ಇಂದ ಬಾಳಂದ್ರ ಬಾಳ ದುಬಾರಿ ಆಗೇದ; ಬಾಳಿನ್ಯಾಗ ಒಮ್ಮೆರ ಸಿಕ್ಕರ ಬಂಗಾರ ಅಲ್ಲ ಭಾಗ್ಯದ ಗಣೀನು ಸಿಕ್ಕಂಗ ಅನಸ್ತದ; ಯಾಕ ಹೀಂಗಾಗ್ತದ, ಈ ಹಿಗ್ಗು ಮಾಯ ಆಗಾಕ ಕಾರಣಽ ಏನದ ?

ಒಂದ ದಿನಾ ನಾ ಇದ ವಿಚಾರದಾಗ ಮುಳುಗಿದಾಗ ನನ್ನ ಹೇಂಡ್ತಿ ಶಕು ಬಂದು ನಿಂತದ್ದೂ ಗೊತ್ತಾಗಲಿಲ್ಲ. ನಿಂತು, ನಿಂತು ಬ್ಯಾಸತ್ತು ಕಡೀಕ ಆಕೀನಽ ಕೇಳಿದ್ಲು:

''ಯಾಕ ಹಿಂಗ್ಯಾಕ ಕುಂತೀರಿ, ಮುಗಲ ಹರದು ತಲೀಮ್ಯಾಲ ಬಿದ್ದಂಗ ? ಏನರ ಕಳಕೊಂಡೀರೇನು ?''

ನಾನು ಬೆಚ್ಚಿಬಿದ್ದೆ, ಕಳಕಂಡದ್ದಂತೂ ಖರೆ ಅನಿಸ್ತು. ''ಹೌದು ಮಾಯಿ, ಹಿಗ್ಗ ಕಳಕೊಂಡೇನಿ, ಅದನ್ನ ಎಲ್ಲಿ ಹ್ಯಾಂಗ ಹುಡುಕಬೇಕು ಅಂತ ಗೊತ್ತಿದ್ರ ನೀನಾರ ಹೇಳು'' ಅಂದೆ.

''ಅಯ್ ಶಿವನ ! ಇಷ್ಟನಾ ? ಬರ್‍ರಿ ಲ್ಲೆ ತೋರಿಸ್ತೀನಿ'' ಅಂದು ಅಂಗಳಕ್ಕೆ ಕರೆದಳು. ಅಳೂ ಹುಡುಗರಿಗೆ ಅಳ್ಳಿಟ್ಟು, ಉಂಡಿ ಕೊಡ್ತೀನಿ ಅಂದರ ಬೆನ್ನ ಹತ್ತತಾವಲ್ಲ ಹಾಂಗ ನಾನು ಆಕಿ ಬೆನ್ನ ಹತ್ತಿಹೋದೆ.

''ಕುಂದರ್‍ರಿ ಇಲ್ಲೇ, ಅಲ್ಲಿ ನೋಡ್ರಿ, ಓಣ್ಯಾಗ ಮಂದೀ ಮಕ್ಕಳು ಆಡೋದನ್ನ ನೋಡಕೋಂತ ನಿಮ್ಮನ್ನ ಮರೀರಿ. ಆಗ ತಾನಽ ಹಿಗ್ಗಾಗ್ತದ'' ಅಂದ್ಲು.

''ಅದ್ಹ್ಯಾಂಗ ಸಾಧ್ಯದ ? ಮಂದೀ ಮಕ್ಕಳ್ನ ನೋಡಿದಾಗೆಲ್ಲಾ ನನಗ, ನನ್ನಂತೋರಿಗೆ ನೆನಪಾಗೋದು ನಮ್ಮ ನಮ್ಮ ಮಕ್ಕಳದಽ. ಅವ್ರಿಗೆ ಹಂತಾ ಅಂಗಿ-ಚೊಣ್ಣ ಯಾಕ ? ಹಂತಾ ಚೆಂದ ಆಟಿಗಿ ಸಾಮಾನ ಯಾಕ ? ಹಂತಾ ದೊಡ್ಡ ಬಂಗಲೆ ಕಾರ ಯಾಕ ? ನಮಗ ಹಿಂತಾವ್ಯಾಕ ? ಯಾಕ? ಯಾಕ ?'' ಹಿಂಗ ಅನಕೊಂತ ಹೋದಂಗ ಮತ್ತಷ್ಟು ದುಃಖಾನಽ ಆತು ಖರೆ ಹಿಗ್ಗಾಗಲಿಲ್ಲ.

'ಇಲ್ಲ ನನಗ ಹಿಗ್ಗಾಗಲಿಲ್ಲ' ಅಂದೆ.

'ಬಿಡ್ರಿ, ಹಂಗಾರ ಅಲ್ಲೇ ನಿಶ್ಚಂತಿಲೆ ಕಾಗದಾ-ಕಸಾ ಮೇಯ್ಕೊಂತ ನಿಂತದಲ್ಲ ಆ ಕತ್ತಿ, ಅದನ್ನ ನೋಡಿಕೊಂತ ಕುಂಡ್ರಿ, ನನಗ ಹ್ವಾರೆ ಒಟ್ಟಾವ ನಾ ಒಳಗ ಹೋಗ್ತೀನಿ.'

ಅಂದಾಕಿನು ಒಳಗ ಹೋದಳು, ನನಗೆ ಸಿಟ್ಟ ಸಾವ ಬಂತು.

'ಏ ಕತ್ತೆಽಽ' ಅಂತ ಜೋರಾಗಿ ಚೀರಬೇಕು ಅನಿಸ್ತು. ಅದಽ ಗಳಿಗಿ ನಮ್ಮ ಗುರುಗೋಳು ಹೇಳಿದ ಒಂದು ಕತಿ ನೆನಪಾತು.

ಅದೊಂದು ಬೆಳದಿಂಗಳ ರಾತ್ರಿ, ಒಂದು ಕತ್ತಿ ಹಸದು ಹುಲ್ಲು ಮೆಯ್ಯಾಕ ಹತ್ತಿತ್ತು. ಅಂದಾಂಗ ಇದು ಬಾಳ ಹಳೇ ಕತಿ. ಯಾಕ ಕತ್ತೀನಽ ಯಾಕ ಕುದರಿ ಸಿಗಲಿಲ್ಲೇನು- ಅಂತ ಕಡ್ಡಿ ಹಾಕೋ ಅಣ್ಣಾಗೋಳಿಗೆ ಮೊದಲಽ ಹೇಳಿಬಿಡೋದು ಚಲೋ. ಇದು ಎಷ್ಟು ಹಳೀಕತಿ ಅಂದರ ಆಗ ಇನ್ನಾ ಕುದರಿ ಹುಟ್ಟಿರಾಕಿಲ್ಲ, ಅಷ್ಟು ಹಳೇದು. ಹೂಂ ಒಂದು ಕತ್ತಿ ಬೆಳದಿಂಗಳದಾಗ ಹಸರ ಹುಲ್ಲು ಮೆಯ್ಯಾಕ ಹತ್ತಿತ್ತು, ಮೆಯ್ತಾ ಮೆಯ್ತಾ ಹಾಡತಿತ್ತು. ಮತ್ತ ಮೆಯ್ಯತಿತ್ತು, ಮತ್ತ ಹಾಡತಿತ್ತು. ಆಗ ಅಲ್ಲಿಗೆ ಒಂದು ಗೂಗಿ ಬಂತು. ಬಂದು ಕೇಳಿತು :

''ಅಪ್ಪಾ ಕತ್ತೆಣ್ಣಾ, ನೀ ಎಷ್ಟು ಹಿಗ್ಗಿನಿಂದ ಹಾಡತೀದಿ, ಜೀವನಾ ನಡೆಸ್ತೀದಿ, ನಿನ್ನ ಈ ಹಿಗ್ಗಿನ ಗುಟ್ಟೇನು ?''

ಆಗ ಕತ್ತೆ ಹೇಳಿತು.

''ಏನಿಲ್ಲ, ನಾ ಹೊತ್ತು ಇಳಿಸಿದಾಂವ ಅದಕ್ಕ ಹಿಗ್ಗಿನಿಂದ ಅದೀನಿ.'' ''ನಿನ್ನ ಮಾತಿನ ಅರ್ಥ ನನಗ ಆಗಲಿಲ್ಲ. ಒಂದಿಷ್ಟು ಬಿಡಿಸಿ ಹೇಳು.'' ''ಬಿಡಿಸಿ ಹೇಳಾಕ ಇದರಾಗೇನದ ? ನಮ್ಮದು ಈ ಕತ್ತಿಗೋಳ ಜೀವನಾನಽ ಒಂದು ತೆರೆದಿಟ್ಟ ಪುಸ್ತಕ. ನಾನು ಒಬ್ಬ ರತ್ನದ ವ್ಯಾಪಾರಿ ಸಾಕಿದ ಕತ್ತೆ. ಇದೀಗ ಈಗ ಅಂವನ ರತ್ನದ ಗಂಟು ಇಳಿಸಿ ಬಂದು ಆನಂದದಿಂದ ಮೆಯ್ಯಾಕ ಹತ್ತೇನಿ.''

ಅಂದಾಗ ಗೂಗಿ ಗಾಬರ್‍ಯಾಗಿ ಕೇಳಿತು :

''ಏನು ? ನೀನು ರತ್ನದ ವ್ಯಾಪಾರೀ ಕತ್ತಿ ? ಛೆಛೇ, ನಿನ್ನ ಚಂದಾನ ಬಂಗ್ಲೇದಾಗ ಕಟ್ಟಿ ಕುತನಿ ಗಾದೀಮ್ಯಾಲ ಮಲಗಿಸಿ, ಕಡ್ಲಿಬ್ಯಾಳಿ ಮೇಸೂದುಬಿಟ್ಟು ಈ ಗಡಾರದಾಗ ಬೆಳದ ಕರಿಕಿ ತಿನ್ನಾಕ ಹೊಡದಿನಲ್ಲ ನಿನ್ನ ಮಾಲೀಕ ಅಂವಗ ಕರುಣಾ ಇಲ್ಲೇನು ! ನಿನ್ನ ಬಗ್ಗೆ ಕಾಳಜಿ ಇಲ್ಲೇನು ?'' ಅಂದದ್ದಕ್ಕ ಕತ್ತಿ : ''ಇಲ್ಲ ಅವಂಗ ನಾ ಕಾಣಸೂದಽ ಇಲ್ಲ. ನಾ ಹೊತ್ತ ಗಂಟು ಅಷ್ಟಽ ಕಾಣತದ. ಅದಕ್ಕಽ ಆ ಪ್ರಾಣಿ ನಾ ಹೊತ್ತಾಗೂ ನರಳ್ತದ, ನಾ ಇಳಿಸಿದ ಮ್ಯಾಲೂ ನರಳ್ತದ. ಯಾಕಂದರ, ಅದು ಮನುಷ್ಯ ಪ್ರಾಣಿ. ಹೊರದ ಇದ್ದಾಗೂ ಹೊತ್ತಂಗ ನರಳೂದು, ಹೊತ್ತಾಗು ನರಳೂದುಽ ಇದಽ ಈ ಪ್ರಾಣಿ [illegible]. ಇಂವಾ ಇಷ್ಟು ಎತ್ತರ ಆದಾನಲ್ಲ ಅಷ್ಟಽ ಎತ್ತರ ಇಂವನ ಗಂಟೂ. ಇಸಮಿನ ಗಂಟಾ, 'ism'ನ ಗಂಟಾ, ಈಗೋದ ಗಂಟಾ, ವಿಷದ ಗಂಟಾ, ಹಿಂಗಽ ಬಳ್ಳ ಹಿಡದು ಅಳ್ತೀತಿಮಟಾ ಗಂಟ ಈ ಪ್ರಾಣಿಗೆ. ಇದಕ್ಕೆ ಹೊರೋದಷ್ಟ ಗೊತ್ತು, ಇಳಸೋದು ಗೊತ್ತಿಲ್ಲ. ಕಷ್ಟಪಟ್ಟು ದುಡಿಯೋದು, ಕೈಲಾದಷ್ಟು ಪರೋಪಕಾರ ಮಾಡಿಕೊಂತ ಹೋಗೋದು, ಇಷ್ಟ ಮಾಡಿಕೊಂತ ಹೋದರ ಹಿಗ್ಗ ಬಿಟ್ಟು ಇನ್ನೇನ ಸಿಗ್ತದ ?''

''ಪರೋಪಕಾರ ಮಾಡೂದು ಅಂದ್ರೇನು ? ನೀ ಏನ ಪರೋಪಕಾರ ಮಾಡ್ತಿದಿ?'' ಮತ್ತ ಕೇಳಿತು ಗೂಗಿ. ಅದಕ್ಕ ಕತ್ತಿ ಹೇಳಿತು :

''ಏನಿಲ್ಲ, ನಾ ಇನ್ನೊಬ್ಬರಿಗೆ ಕೆಟ್ಟದ್ದು ಮಾಡಂಗಿಲ್ಲ. ಕೆಟ್ಟದ್ದು ಬಯಸೋದಿಲ್ಲ.''

''ಮತ್ತ ಮಂದೀಗೇ ಬುದ್ಧಿ ಹೇಳಬೇಕಾದ ಬುದ್ಧಿಜೀವಿಗೋಳು ಅಂತ ಕರಕೊಂತಾರಲ್ಲ ಈ ಮನುಷ್ಯರು. ಇವರಽ ನಾಯಿಗೋಳಾಂಗ ಕಚ್ಚಾಡ್ತಾರಲ್ಲ, ಇದಕ್ಕ ನೀ ಏನ ಹೇಳ್ತಿ ?''

''ಏನೂ ಹೇಳಂಗಿಲ್ಲ, ಹಿಂತಾವರ ಬಗ್ಗೆ ಮಾತಾಡಾಕ ನನಗ ವ್ಯಾಳೇನೂ ಇಲ್ಲ, ಮನಸೂ ಇಲ್ಲ. ಮೈಯ್ಯಾಗ ಕಸು ಇರೂಮಟಾ ದುಡಿಯಾದು. ಇನ್ನೊಬ್ಬರಿಗೆ ಭಾರ ಆಗದಂಗ ಬದು ಕೋದು. ನಮ್ಮ ತುತ್ತನ್ನ ಬೆವರಾಗಽ ಹುಡುಕೋದು ಇಷ್ಟಽ ನಾ ಮಾಡೋ ಪರೋಪಕಾರ'' ಅಂತು ಕತ್ತಿ. ಕತ್ತೀ ಮಾತ ಕೇಳಿ ಗೂಗಿಗೆ ಹೃದಯ ತುಂಬಿ ಬಂತು. ಬಡಗ್ಗನ ಆ ಕತ್ತಿ ಕಾಲಿಗೆ ಬಿದ್ದು ಹೇಳಿತು :

''ಹೇ ಸಂತನೇ, ನೀನು ಮಹಂತ. ದಿನಾಲೂ ನನಗ ನಿನ್ನ ದರ್ಶನ ಭಾಗ್ಯ ಕರುಣಿಸು.''

ಕತ್ತಿ ನಕ್ಕು ಮತ್ತ ಮೆಯ್ಯಾಕ ಹತ್ತಿತು. ಗೂಗಿ ಹಾರಿ ಹೋಗಿ ಈ ಕತ್ತೀ ನೋಡಿಕೊಂತ ಒಂದು ಗಿಡದಾಗ ಕುಂತಿತು. ಹೌದಲ್ಲ ಸಂಸಾರದ ಭಾರ ಹೊತ್ತು ರಾಗ-ದ್ವೇಷಗಳ ಸಂಧ್ಯಾಗ ಸಿಕ್ಕು ನರಳಾಂವನಽ ಸಂಸಾರಿಗ, ಭಾರ ಇಳಿಸಿ ಹಿಗ್ಗಾಂವನಽ ಶರಣ, ಸಂತ, ಮಹಂತ. ಈ ಕತ್ತೀಲಿಂದ ನಾವು, ಮನುಷ್ಯರು ಕಲಿಯೋದು ಎಷ್ಟದ ಅಲ್ಲಾ ಅನಿಸ್ತು. ಹಿಂಗ ನಾ ಮನಸಿನ್ಯಾಗ ಅಂದ ಗಳಿಗ್ಗೇ ಎಲ್ಲಿಲ್ಲದ ಹಿಗ್ಗಾಗ್ತು, ಒಳಗ ಓಡಿದೆ.

ನಾ ಬಾಯಿ ತಗಿಗೊಡದ ನನ್ನಾಕಿ

'ಬರ್‍ರೀ ಬಿಸಿ ಬಿಸಿ ರೊಟ್ಟಿ, ಪುಂಡಿಪಲ್ಲೆ ಮಾಡೀನಿ, ಅಗಸಿ ಹಿಂಡಿ, ಎಣ್ಣಿ ಹಾಕ್ಕೊಂಡು ಒಂದು ರೊಟ್ಟಿ ತಿನ್ನಿ' ಅಂದಳು.

ಅಷ್ಟು ದಿನಾನೂ ನಾ ಗಂಡಾಗಿ ಮೊದಲ ಉಂಡು, ಒಳಗ ಕೆಂಡಾ ಇಟಗೊಂಡು ಚಡಪಡಿಸ್ತಿದ್ದ ನನಗ ಆಕೀನ್ನ ಕರಕೊಂಡು ಉಣಬೇಕನಿಸ್ತು....

ಕೈ ತೊಳಕೊಂಡು ಕೂಡಿ ಉಂಡಿವಿ.

ಆಹಾ, ಏನ ಸೆಂವಿ, ಏನ ಸೆಂವಿ ಈ ಕೂಡಿ ಉಣ್ಣೂದು !

ಕೂಡಿ ಉಣ್ಣೂದು, ಕೇಡು ಮಾಡದಽ ಇರೋದ್ರಾಗ ಎಷ್ಟು ಹಿಗ್ಗದ ಅಲ್ಲಾ ? ಅನಿಸ್ತು.

ಹಿಗ್ಗಾಕ ಇಷ್ಟು ಸಾಕಲ್ಲ !

ಬಿ. ಆರ್. ಪೋಲೀಸ್ ಪಾಟೀಲ
ಬನಹಟ್ಟಿ-೫೮೭ ೩೧೧

# ಅಧಿಕಮಾಸದ ಅವಶ್ಯಕತೆ



ಅಧಿಕಮಾಸ ಎಂಬ ಪದ ಕೇಳಿದ ಕೂಡಲೇ ಪಂಚಾಂಗದತ್ತ ಕಣ್ಣು ಹೊರಳುವುದು. ಆದರೆ ಆಕಾಶವನ್ನೇ ನೋಡಿ ಈ ಬಾರಿ ಅಧಿಕಮಾಸ ವಿರಬೇಕು ಎಂದು ತಿಳಿಯುವುದು ಸಾಧ್ಯವೇ? ಇಲ್ಲಿದೆ ಒಂದು ಅವಕಾಶ.

ಪ್ರತಿ ತಿಂಗಳ ಹುಣ್ಣಿಮೆಯಂದು ಚಂದ್ರ ಯಾವ ನಕ್ಷತ್ರದ ಬಳಿ ಕಾಣುತ್ತದೆಯೋ, ಆ ನಕ್ಷತ್ರದ ಹೆಸರಿಗೂ ಆ ಚಾಂದ್ರಮಾನ ಮಾಸದ ಹೆಸರಿಗೂ ಸಂಬಂಧ ಇದೆ. ಆಯಾ ಹೆಸರುಗಳಲ್ಲೇ ಇದು ವ್ಯಕ್ತವಾಗುತ್ತದೆ. ಈ ಕಾರಣ ಪ್ರತಿ ತಿಂಗಳ ಹುಣ್ಣಿಮೆಯನ್ನು ಗಮನಿಸುತ್ತಾ ಬಂದರೆ ಕನಿಷ್ಠ ಎಂದರೆ ಹನ್ನೆರಡು ನಕ್ಷತ್ರಗಳ ಪರಿಚಯ ಆಗುತ್ತದೆ. ಆದರೆ ಸೆಪ್ಟೆಂಬರ್‌ನಲ್ಲೊಂದು ತೊಡಕಾಯಿತು. ಆ ತಿಂಗಳ ಹುಣ್ಣಿಮೆಯಂದು ಚಂದ್ರ, ಶತಭಿಷ (ಲ್ಯಾಂಡಾ ಅಕ್ವೇರಿಯಸ್) ಎಂಬ ನಕ್ಷತ್ರದ ಬಳಿ ಕಂಡಿತು. ಅಕ್ಟೋಬರ್‌ನ ಹುಣ್ಣಿಮೆಯ ಚಂದ್ರ ಉತ್ತರಾ ಭಾದ್ರದ ನೇರಕ್ಕೆ ಕಾಣುವುದರಿಂದ ಈ ತಿಂಗಳನ್ನು ಭಾದ್ರಪದ ಎಂದಿದ್ದರೆ ಸೂಕ್ತವಾಗುತ್ತಿತ್ತು. ಹಾಗಾದರೆ ಸೆಪ್ಟೆಂಬರ್ ತಿಂಗಳಲ್ಲಿ ಚಾಂದ್ರಮಾನ ಮಾಸದ ಹೆಸರು ಏನಿರಬೇಕಾಗಿತ್ತು? ನವೆಂಬರ್ ಒಂದರ ಹುಣ್ಣಿಮೆಯ ಚಂದ್ರ ಅಶ್ವಿನಿ ನಕ್ಷತ್ರದ ಸಮೀಪ ಕಾಣುವುದರಿಂದ ಅದು ಆಶ್ವಯುಜವಾಗುತ್ತದೆ.

ಚಂದ್ರನ ಪರಿಭ್ರಮಣಾವಧಿ ೨೭ ದಿನಗಳು ಮಾತ್ರವಲ್ಲ; ಜೊತೆಯಲ್ಲಿ ಭಿನ್ನರಾಶಿಯೂ ಇದೆ. ಹನ್ನೆರಡು ಚಾಂದ್ರಮಾಸಗಳ ಅವಧಿ ೩೫೪.೩೬ ದಿನಗಳು. ಸೌರವರ್ಷದ ಅವಧಿ ೩೬೫.೨೬ ದಿನಗಳು. ಈ ವ್ಯತ್ಯಾಸ ಮತ್ತು ಭಿನ್ನರಾಶಿಗಳೆಲ್ಲದರ ಪರಿಣಾಮವೇ ಹೀಗೆ ಆಕಾಶದಲ್ಲಿ ಸ್ಫುಟವಾಗಿ ಕಾಣುತ್ತದೆ. ಇದರ ಬಗ್ಗೆ ಸಾವಿರ ವರ್ಷಗಳ ಹಿಂದೆಯೇ ತಲೆಕೆಡಿಸಿಕೊಂಡವರು ಅನೇಕ. ಅವರಲ್ಲಿ ಶ್ರೀಧರಾಚಾರ್ಯ ಎಂಬಾತ ಅತ್ಯುತ್ತಮ ಪರಿಹಾರ ಕಂಡುಹಿಡಿದ ಜಾಣ. ಅವನ ಲೆಕ್ಕ ಇಂದಿಗೂ ಅವ್ಯಾಹತವಾಗಿ ಹರಿದುಬಂದು ಚಾಂದ್ರ-ಸೌರ ವರ್ಷಗಳನ್ನು ಮೇಳೈಸುತ್ತದೆ. ಇದೇ ಅಧಿಕಮಾಸದ ಮೂಲಕಾರಣ. ಅಕ್ಟೋಬರ್‌ನಲ್ಲೊಂದು ಅಧಿಕಮಾಸವಿದೆ.






ಭಾರತೀಯ ಪಂಚಾಂಗ ಪದ್ಧತಿಯಲ್ಲಿ ರಾಶಿಗಳಿಗಿಂತ ನಕ್ಷತ್ರಗಳ ಹೆಸರುಗಳಿಗೇ ಪ್ರಾಧಾನ್ಯ. ರಾಶಿಗಳು ಪಾಶ್ಚಾತ್ಯರಿಂದ ಬಂದ ಎರವಲು ಸಂಪ್ರದಾಯ. ಆದರೆ ಇದನ್ನು ಬೆಳೆಸಿಕೊಂಡು ಬರುವ ಸಂಭ್ರಮದಲ್ಲಿ ನಕ್ಷತ್ರಗಳ ಲೆಕ್ಕ ಹಿಂದೆ ಸರಿಯಿತು. ಈಚೆಗೆ ಚಂದ್ರನ ಸ್ಥಾನಗಳ ಕುರಿತ ಲೆಕ್ಕವನ್ನು ಹತ್ತನೆಯ ಶತಮಾನದ ಶ್ರೀಧರಾಚಾರ್ಯನವರೆಗೂ ಹಿಂದುವರೆಸಿ (?) ೨೭ ನಕ್ಷತ್ರಗಳು ಯಾವುವು ಎಂದು ಲೆಕ್ಕ ಮಾಡಿ ತಿಳಿಯಬೇಕಾಗಿ ಬಂದಿದ್ದು ವಿಪರ್ಯಾಸವೇ ಸರಿ. ಶತಭಿಷ, ರೇವತಿ ಮುಂತಾದವು ಪ್ರಕಾಶಮಾನ ನಕ್ಷತ್ರಗಳಲ್ಲ, ಆದ್ದರಿಂದ ಚಂದ್ರನ ಸ್ಥಾನಕ್ಕೆ ತಾಳೆಯಾಗುವ ಸಮೀಪದ ನಕ್ಷತ್ರಗಳನ್ನು ಹುಡುಕಿ ಅವುಗಳಿಗೆ ಈ ಹೆಸರಿರಿಸಿದ್ದಾರೆ. ಪರಿಣಾಮವಾಗಿ ಉತ್ತರಾಭಾದ್ರ, ಪೂರ್ವಾಭಾದ್ರ - ಇವೆರಡೂ ರಾಶಿಚಕ್ರಕ್ಕೆ ಸೇರದ ಪೆಗಸಸ್ (ನಕುಲ) ಪುಂಜಕ್ಕೆ ಸೇರಿವೆ. ನೆತ್ತಿಯ ಮೇಲೆ ಕಾಣುವ ಶ್ರವಣ (ಆಲ್ಟೇರ್, ಆಲ್ಫಾ ಅಕ್ವಿಲಾ) ಅಕ್ವಿಲಾ ಎಂಬ ಪುಂಜಕ್ಕೆ ಸೇರಿದೆ. ಸ್ವಾತಿ (ಆರ್ಕ್ಟ್ಯುರಸ್) ಬೂಟಿಸ್ ಎಂಬ ಪುಂಜಕ್ಕೆ ಸೇರಿದೆ.

ನೆತ್ತಿಯ ಮೇಲೆ ವಿರಾಜಿಸುವ ಸಮಬಾಹು ತ್ರಿಕೋಣದಂತಹ ಮೂರು ನಕ್ಷತ್ರಗಳು ಶ್ರವಣ, ಹಂಸಾಕ್ಷಿ (ದೆನೆಬ್, ಆಲ್ಫಾ ಸಿಗ್ನಸ್) ಮತ್ತು ಅಭಿಜಿತ್ (ವೇಗಾ, ಆಲ್ಫಾ ಲೈರಾ). ಇವುಗಳ ನಡುವೆ ಹಾದುಹೋಗುವ ಆಕಾಶ ಗಂಗೆಯನ್ನು ಚಂದ್ರನಿಲ್ಲದಾಗ ಕಾಣಬಹುದು.

ಸಂಜೆಯ ಆಕಾಶದಲ್ಲಿ ಇದುವರೆಗೂ ವಿಜೃಂಭಿಸಿದ ಮಂಗಳ ಈಗ ಮಂಕಾಗತೊಡಗಿದೆ. ಧನುರಾಶಿಯ ಅಂಚಿನಲ್ಲಿ ಕಾಣುವ ಅದು ಇತರ ಯಾವುದೇ ನಕ್ಷತ್ರಗಳಷ್ಟೇ ಪ್ರಕಾಶ ಪಡೆದಿದೆ. ೨೩ರಂದು ಚಂದ್ರ ಅದನ್ನು ಮರೆಮಾಡುವ 'ಗ್ರಹಣ'ದಂತಹ ಘಟನೆ ನಡೆಯಲಿದೆ. ಆದರ ನೋಟ ದಕ್ಷಿಣ ಅಮೆರಿಕ, ಆಫ್ರಿಕದವರೆಗೆ ಮಾತ್ರ ಲಭ್ಯ. ಚಂದ್ರನಿಗೆ ಅಂಟಿಕೊಂಡಂತೆ ನಮಗೆ ಕಾಣುತ್ತದೆ. ಛಾಯಾಗ್ರಾಹಕರಿಗೆ ಇದೊಂದು ಒಳ್ಳೆಯ ಅವಕಾಶ.

ಸೂರ್ಯಾಸ್ತವಾದ ಸುಮಾರು ಮೂರು ಗಂಟೆಗಳ ನಂತರ ಉದಯಿಸುವ ಗ್ರಹ ಶನಿ. ವೃಷಭರಾಶಿಯ ಪ್ರಕಾಶಮಾನ ನಕ್ಷತ್ರಗಳ ನಡುವೆಯೂ ಇದನ್ನು ಸುಲಭವಾಗಿ ಗುರುತಿಸಬಹುದು. ಇದರ ಹಿನ್ನಡೆ ಈಗ ಆರಂಭವಾಗಿದೆ. ಅಂದರೆ ಈಗ ಅದು ಪಶ್ಚಿಮಕ್ಕೆ ಸರಿಯುತ್ತಿದೆ. ೭ರಂದು ಚಂದ್ರ ಅದನ್ನು ಮರೆಮಾಡುವ 'ಗ್ರಹಣ' ಒಂದು ಅಪೂರ್ವ ನೋಟ. ಉದಯಿಸುವಾಗ ಚಂದ್ರನ ಪಕ್ಕ ಚುಕ್ಕೆಯಂತೆ ಕಾಣುವ ಅದು ರಾತ್ರಿ ೧೦ ಗಂಟೆಯ ಹೊತ್ತಿಗೆ ಚಂದ್ರನ ಹಿಂದೆ ಮರೆಯಾಗುತ್ತದೆ. ಮರುದಿನ ಬೆಳಗಿನ ಝಾವ ೬ ಗಂಟೆ ೧೨ ನಿಮಿಷಕ್ಕೆ ಚಂದ್ರನ ಹಿಂದಿನಿಂದ ಹೊರಬರುವುದನ್ನು ದೂರದರ್ಶಕದ ಮೂಲಕ ವೀಕ್ಷಿಸಲು ಸಾಧ್ಯವಾಗಬಹುದು (ಸಂಧ್ಯಾ ಪ್ರಕಾಶ ಅಡ್ಡಿ ಉಂಟುಮಾಡಬಹುದು). ಈ ಘಟನೆಯ ಆರಂಭದ ಹಂತಗಳನ್ನು ಸೆರೆಹಿಡಿಯಲು ಛಾಯಾಗ್ರಾಹಕರು ಪ್ರಯತ್ನಿಸಬಹುದು.

ಮಿಥುನರಾಶಿಯಲ್ಲಿರುವ ಗುರುಗ್ರಹ ೧೦ ಗಂಟೆಯ ಹೊತ್ತಿಗೆ ಉದಯಿಸುತ್ತದೆ. ಇದನ್ನು ಗುರುತಿಸಲು ನಕ್ಷೆ ಬೇಕಿಲ್ಲ. ೧೦ರಂದು ಚಂದ್ರನ ಪಕ್ಕವೇ ಕಾಣುತ್ತದೆ.

ಬೆಳಗಿನ ಝಾವ ಪೂರ್ವದಲ್ಲಿ ಶುಕ್ರ ಪ್ರತ್ಯಕ್ಷವಾಗುತ್ತದೆ. ಬುಧಗ್ರಹವೂ ಕಾಣುವುದು. ೨೭ನೇ ತಾರೀಖಿನಿಂದ ಮುಂದಕ್ಕೆ ಸುಮಾರು ಹತ್ತು ದಿನಗಳು ಶುಕ್ರ-ಬುಧಗಳೆರಡೂ ಪಕ್ಕಪಕ್ಕದಲ್ಲೇ ಕಾಣುವುವು. ಬುಧಗ್ರಹವನ್ನು ಗುರುತಿಸಲು ಇದು ಒಳ್ಳೆಯ ಅವಕಾಶ.

ಪ್ರತಿವರ್ಷದಂತೆ ಈ ವರ್ಷವೂ ಓರಿಯನಿಡ್ ಉಲ್ಕಾವೃಷ್ಟಿ ಅಕ್ಟೋಬರ್ ಕೊನೆಯ ವಾರದಲ್ಲಿ ಉಂಟಾಗಲಿದೆ. ಗಂಟೆಗೆ ೧೫-೨೦ ಉಲ್ಕೆಗಳು ಬೀಳುವುವು. ಇವು ಹ್ಯಾಲೀ ಧೂಮಕೇತುವಿನ ತುಣುಕುಗಳು.


ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, [illegible]

# ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಯೋಜನೆ

ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದು ಸಾಮಾಜಿಕವಾಗಿ ಶೋಷಿತರಾದವರ ಅಭಿವೃದ್ಧಿಗಾಗಿ ವಿಶೇಷ ಒತ್ತುಕೊಟ್ಟು ಅವರಿಗೆ ಸಾಮಾಜಿಕ ನ್ಯಾಯ ಒದಗಿಸಿದಲ್ಲಿ ಮಾತ್ರ ಸಮಾನತೆ ಸಾಧಿಸುವುದು ಸಾಧ್ಯ. ಇದು ''ಸರ್ವೇಜನಾಃ ಸುಖಿನೋ ಭವಂತು'' ಎಂಬ ಧ್ಯೇಯ ಈಡೇರಿಕೆಗೆ ಕಾರಣವಾಗುವುದು. ದೂರದೃಷ್ಟಿ ನಾಯಕ ಶ್ರೀ ಎಸ್. ಎಂ. ಕೃಷ್ಣ ಅವರ ನೇತೃತ್ವದ ಪ್ರಸಕ್ತ ಸರ್ಕಾರದ ಮಹೋದ್ದೇಶವೇ ಇದು. ಈ ದಿಸೆಯಲ್ಲಿ ಸರ್ಕಾರ ಹಿಂದುಳಿದವರ, ಅಲ್ಪಸಂಖ್ಯಾತರ, ದೀನದಲಿತರ ಹಾಗೂ ಶೋಷಿತರ ಕಲ್ಯಾಣಕ್ಕಾಗಿ ನೂತನ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಮೂಲಕ ಅವರಲ್ಲಿ ಹೊಸ ಆಶಾಕಿರಣವನ್ನೇ ಮೂಡಿಸಿದೆ.

*ಸಮಾಜ ಕಲ್ಯಾಣ ಇಲಾಖೆ*

## ಹಿಂದುಳಿದ ವರ್ಗಗಳ ಅಭಿವೃದ್ಧಿ

❑ ಇಲಾಖೆಯ ವಿವಿಧ ಕಾರ್ಯಕ್ರಮಗಳ ಅನುಷ್ಠಾನದ ಮೂಲಕ 6,10,733 ಫಲಾನುಭವಿಗಳಿಗೆ ರೂ. 86 ಕೋಟಿ ನೆರವು. ❑ ಪ್ರಸಕ್ತ ಸಾಲಿನಲ್ಲಿ ಇಲಾಖೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ. 108.07 ಕೋಟಿ ಅನುದಾನ. ❑ 20 ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯಗಳು ಹಾಗೂ ಒಂದು ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಕ್ಕೆ ಮಂಜೂರು. ಒಟ್ಟು ಸಾಮರ್ಥ್ಯ 1,050 ವಿದ್ಯಾರ್ಥಿಗಳು. ❑ ಒಟ್ಟು ರೂ. 585.49 ಲಕ್ಷಗಳ ವೆಚ್ಚದಲ್ಲಿ 40 ಮೆಟ್ರಿಕ್-ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ ಪೂರ್ಣ. 2,55,769 ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಕ್ಕಾಗಿ ರೂ. 271.42 ಲಕ್ಷ, 91,621 ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ರೂ. 257.07 ಲಕ್ಷ ವಿದ್ಯಾರ್ಥಿ ವೇತನ ವಿತರಣೆ. ❑ ರೂ. 532.37 ಲಕ್ಷಗಳ ಮೌಲ್ಯದ 1,67,340 ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯತಿ ಸೌಲಭ್ಯ. ❑ ಮಾಂಗಲ್ಯ ಭಾಗ್ಯ ಯೋಜನೆಯಡಿಯಲ್ಲಿ ರೂ. 22.10 ಲಕ್ಷಗಳ ವೆಚ್ಚದಲ್ಲಿ 442 ಫಲಾನುಭವಿಗಳಿಗೆ ಆರ್ಥಿಕ ಸಹಾಯ. ❑ 15,296 ಫಲಾನುಭವಿಗಳಿಗೆ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ರೂ. 2,119.17 ಲಕ್ಷ ಆರ್ಥಿಕ ನೆರವು.

## ಅಲ್ಪಸಂಖ್ಯಾತರ ಅಭಿವೃದ್ಧಿ

❑ ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿಯೇ ಪ್ರತ್ಯೇಕ ಇಲಾಖೆ 1999-2000ನೇ ಸಾಲಿನಿಂದ ಕಾರ್ಯಾರಂಭ. ಪ್ರಸಕ್ತ ಸಾಲಿನಲ್ಲಿ ಈ ಇಲಾಖೆಯ ಕಾರ್ಯಕ್ರಮಗಳ ಜಾರಿಗಾಗಿ ರೂ. 263.40 ಲಕ್ಷ ಅನುದಾನ ಬಿಡುಗಡೆ. ❑ ಶಿವಮೊಗ್ಗ, ಬಳ್ಳಾರಿ, ಹುಬ್ಬಳ್ಳಿ ಮತ್ತು ಬೆಳಗಾಂ ನಗರಗಳಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾರಂಭ. ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ, ಊಟ ಮತ್ತು ವಸತಿ ಸೌಲಭ್ಯಗಳಿಗಾಗಿ ರೂ. 60 ಲಕ್ಷಗಳ ವೆಚ್ಚ. ❑ ಮೆಟ್ರಿಕ್ ನಂತರದ ವಿದ್ಯಾರ್ಥಿನಿಯರಿಗಾಗಿ ಬೆಂಗಳೂರು, ಮೈಸೂರು, ಧಾರವಾಡ, ಮಂಗಳೂರು ಮತ್ತು ಗುಲ್ಬರ್ಗಾ ನಗರಗಳಲ್ಲಿ 5 ವಿದ್ಯಾರ್ಥಿ ನಿಲಯಗಳ ಸ್ಥಾಪನೆ. ❑ ಸಾಂಸ್ಕೃತಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗಾಗಿ ಸಮುದಾಯ ಭವನಗಳ ನಿರ್ಮಾಣಕ್ಕಾಗಿ ಅಲ್ಪಸಂಖ್ಯಾತ ಸ್ವಯಂಸೇವಾ ಸಂಸ್ಥೆಗಳಿಗೆ ಗರಿಷ್ಠ ರೂ. 5 ಲಕ್ಷ ಅನುದಾನ. ಈ ಉದ್ದೇಶಕ್ಕಾಗಿ ರೂ. 50 ಲಕ್ಷ ಮೀಸಲು. ❑ ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಐ.ಟಿ.ಐ./ಡಿಪ್ಲೊಮಾ ತರಗತಿಗಳ 840ಕ್ಕೂ ಹೆಚ್ಚಿನ ವಿದ್ಯಾರ್ಥಿಗಳಿಗೆ ರೂ. 9.25 ಲಕ್ಷ ಶಿಷ್ಯವೇತನ. ❑ 52 ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ. ❑ ರೂ. 1,536.42 ಲಕ್ಷಗಳ ವೆಚ್ಚದಲ್ಲಿ 12,047 ಫಲಾನುಭವಿಗಳಿಗೆ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಮೂಲಕ ನೆರವು.

**ಸಾಧಿಸಿದ್ದು ಬಹಳಷ್ಟು, ಸಾಧಿಸಬೇಕಾಗಿರುವುದು ಇನ್ನೂ ಬಹಳಷ್ಟು**

**ಕರ್ನಾಟಕ ವಾರ್ತೆ**

# ಗೊಂದಲಪುರದಲ್ಲಿ ತುಲಾಭಾರ !

ಮುಂಗಾರು ಕೈಕೊಟ್ಟಿತು. ಮಳೆಗಾಗಿ ಕಾಯುತ್ತ ಗೊಂದಲಪುರದವರ ಕಣ್ಣುಗಳು ಗುಳಿಬಿದ್ದವು. ದಿನ ಕಳೆದಂತೆ ಬರದ ನೆರಳು ಸುಳಿದಂತಾಗಿ ಜನರ ಗಾಬರಿ ಮತ್ತಷ್ಟು ಹೆಚ್ಚಿತು. ಆದರೆ ಗೊಂದಲಪುರದ ಮಂದಿ ಸಾಮಾನ್ಯರೇನಲ್ಲ! ಎಂಥ ಕಷ್ಟದ ಪರಿಸ್ಥಿತಿಯಲ್ಲೂ ತಮ್ಮನ್ನು ತಾವೇ ಹಾಸ್ಯ ಮಾಡಿಕೊಂಡು ಗಹಗಹಿಸಿ ನಗಬಲ್ಲಂಥವರು !

ಮಳೆ ತರಿಸುವ ಪ್ರಯತ್ನದಲ್ಲಿ ಊರು ಒಗ್ಗಟ್ಟಾಯಿತು. ಬರದ ಭೀತಿಯಿಂದ ಜನರ ಮನಸ್ಸಿನಲ್ಲಿ ಭಕ್ತಿ ಮೊಳಕೆಯೊಡೆಯಿತು. ಪೂಜಾರಿ ಮಾಂತಪ್ಪ ದಿನಾ ತಪ್ಪದೆ ಎರಡು ಬಾರಿ ಗುಡಿಯ ಬಾಗಿಲು ತೆರೆಯತೊಡಗಿದ. ಹರಿಕಥೆ, ಭಜನೆ, ಕಂಸಾಳೆ ಪದಗಳು ಈರಭದ್ರನ ಮೈಕಿನ ಮೂಲಕ ಮೊಳಗಿದವು. ಸಣ್ಣ ಮಕ್ಕಳನ್ನು ಬೆತ್ತಲೆ ಮಾಡಿಸಿ 'ಹುಯ್ಯೋ ಹುಯ್ಯೋ ಮಳೆರಾಯ' ಎಂದು ಕಿರುಚಿಸಲಾಯಿತು. ಕತ್ತೆಗಳಿಗೆ ಮದುವೆ ಮಾಡಿಸಿ ಮೆರವಣಿಗೆ ಮಾಡಿದ್ದಾಯಿತು. ಏನಾದರೂ ಮಳೆಯ ಪತ್ತೆಯಿಲ್ಲ!

ಮಾಂತಪ್ಪ ತನ್ನ ಎಂದಿನ ವರಸೆ ತೆಗೆದ. ಜೈ ಭಜರಂಗಬಲಿಗೆ ಬೆಳ್ಳಿ ಕಿರೀಟ ಮಾಡಿಸಿ ಹಾಕಿದರೆ ಮಳೆ ಗ್ಯಾರಂಟಿ ಎಂದು ಭಕ್ತರ ಕಿವಿ ಕೊರೆಯತೊಡಗಿದ. ಮಾಂತಪ್ಪನ ಈ ಹೊಸ ಕಿರುಕುಳದಿಂದ ಜನರು ಮತ್ತಷ್ಟು ಕಂಗಾಲಾಗಿ, ಯಾಕೋ ಗೊಂದಲಪುರದ ಗ್ರಾಚಾರವೇ ನೆಟ್ಟಗಿಲ್ಲ– ಎಂದು ಗೊಣಗಿಕೊಳ್ಳತೊಡಗಿದರು.

ಆಗ ಆಪದ್ಬಾಂಧವನಂತೆ ಈರಾಂಜಣಿ ಗುಲ್ಲೂರಿನಿಂದ ಬಂದಿಳಿದ. ಊರಿನಲ್ಲಿ ಆತನಿಗೆ ಅರ್ಧ ಎಕರೆಯಷ್ಟು ಒಣಭೂಮಿ ಇದೆ. ಈ ಪಿತೃಭೂಮಿಯ ಬಗ್ಗೆ ಆತನಿಗೆ ಎಲ್ಲಿಲ್ಲದ ಅಭಿಮಾನ. ಅದರ ಮೇಲೆ ಕಾಲಿಡಲೆಂದೇ ಆತ ಊರಿಗೆ ಬರುವುದಿದೆ.

ಇದಾನ ಸೌದೆಯಲ್ಲಿ ಕ್ಲಾಸ್ ಫೋರ್ ಆಗಿರುವ ಈರಾಂಜಣಿ ಬಗ್ಗೆ ಗೊಂದಲಪುರದ ಜನರಿಗೆ ಹೆಮ್ಮೆ. ಈಗಾಗಲೇ ಒಂದು ಮನೆ, ಮೂರು ಸೈಟು ಮಾಡಿಕೊಂಡಿರುವ ಆತನನ್ನು ಜನರು ವ್ಯವಾರಸ್ತ, ಬುದ್ಧಿವಂತ, ಕಿಲಾಡಿ – ಎಂದು ಮೆಚ್ಚುವುದುಂಟು.

''ಲೋ ಮಗಾ ! ಈರಾಂಜಣಿ... ನೀನೇನೋ ಸರ್ಕಾರ್ದ ಬುಡದಲ್ಲೇ ಇದ್ದೀಯೆ. ದಿನಾ ಬೆಳಗಾದ್ರೆ ಮಂತ್ರಿಗಳ್ನ, ಎಮ್ಮೆಲ್ಗಳ್ನ ದರ್ಶಣ ಮಾಡ್ತೀಯೆ. ನೀನು ಚಂದಾಗ್ ಬದ್ಕಪ್ಪ ನಮ್ಗೇನೂ ಒಟ್ಟೆಕಿಚ್ಚಿಲ್ಲ. ನಮ್ ಕತೆ ನೋಡು. ಆರ್ ತಿಂಗ್ಳಾಯ್ತು, ಒಂದನಿ ಮಳೆ ಬಿದ್ದಿಲ್ಲ. ಎಂಗ್ ಜೀವ್ನ ಮಾಡ್ಬೇಕಪ್ಪ ನಾವು ? ನಮ್ಮೂರ್ಗೆ ಅಂತ ನೀನು ಏನ್ ಮಾಡ್ದೆ ? ನಿಮ್ಮಿನಿಸ್ಟರಿಗೇಳಿ ಏನಾರ ಪರಿಯಾರ ಗಿರಿಯಾರ ಕೊಡ್ಸು!'' ಎಂದು ಊರಿನ ಕೆಲವರು ಆತನಿಗೆ ದುಂಬಾಲು ಬಿದ್ದರು.

ಗೊಂದಲಪುರದ ನೀರು ಕುಡಿದು ಬೆಳೆದ ಆತ ''ಅಯ್ಯೋ ಪರಿಯಾರ ತಾನೆ ? ಕೊಡ್ಸನ, ಅದ್ಕೇನ್ ತಗಳಿ !'' ಎಂದ ಮಂತ್ರಿಗಳ ಗತ್ತಿನಲ್ಲಿ.

ಮಳೆಗಾಗಿ ಊರಿನವರು ಮಾಡಿದ ಪ್ರಯತ್ನಗಳ ಬಗ್ಗೆ ಯಾಕೋ ಈರಾಂಜಣಿಗೆ ತೃಪ್ತಿಯಾಗಲಿಲ್ಲ. ಈ ವಿಷಯ ಮೊದಲು ಪೇಪರಿನವರಿಗೆ, ಟಿ.ವಿ. ಚಾನೆಲ್‌ಗಳಿಗೆ ತಿಳಿಸಬೇಕು. ಅನಂತರ ಮಂತ್ರಿ, ಎಮ್ಮೆಲ್ಲೆಗಳನ್ನು ತರಾಟೆಗೆ ತೆಗೆದುಕೊಳ್ಳುವ ಕೆಲಸ ಎಂದು ಅಂಗೈಯಲ್ಲಿ ಆಕಾಶ ತೋರಿಸಿದ. ಜೊತೆಗೆ ವರುಣ ದೇವರಿಗೆ ಪ್ರೀತಿಯಾಗುವಂಥ ಉಪಾಯವೆಂದು ತುಲಾಭಾರದ ಭೂತವನ್ನು ಜನರ ತಲೆಗೆ ತುರುಕಿಸಿದ. ಈ ಹೊಸ ವಿಷಯದಿಂದ ಗಾಬರಿಯಾಗಿ ಗೊಂದಲಪುರದ ಜನ ತಲೆ ಚಚ್ಚಿಕೊಳ್ಳುತ್ತಿರಬೇಕಾದರೆ, ಈರಾಂಜಣಿ ಸಂಜೆಯ ಬಸ್ಸಿನಲ್ಲೇ ಗುಲ್ಲೂರಿಗೆ ಪರಾರಿಯಾದ !

ಯಾರಿಗೆ ತುಲಾಭಾರ ಮಾಡಬೇಕು, ತುಲಾಭಾರಕ್ಕೆ ಯಾವ ವಸ್ತು ಬಳಸಬೇಕು ಎಂಬ ಬಗ್ಗೆ ದೊಡ್ಡ ಪಂಚಾಯ್ತಿ ನಡೆಯಿತು. ಒಬ್ಬ ವ್ಯಕ್ತಿಯ ತೂಕಕ್ಕೆ ಸಮನಾಗಿ ಚಿನ್ನ, ಬೆಳ್ಳಿ, ವಜ್ರ, ವೈಢೂರ್ಯ, ಗೋಮೇದಕ, ಪುಷ್ಯರಾಗ, ಸಕ್ಕರೆ, ಕಜ್ಜಾಯ, ನಿಪ್ಪಟ್ಟು, ಅಂಬೊಡೆ, ಚಕ್ಕುಲಿ, ಕಡಲೆ ಉಂಡೆ, ಲಾಡು, ಚಿಲ್ಲರೆ ನಾಣ್ಯ ಇತ್ಯಾದಿ ಪದಾರ್ಥಗಳನ್ನು ತುಲಾಭಾರಕ್ಕೆ ಉಪಯೋಗಿಸಬಹುದಂತೆ ! ಇದನ್ನು ಕೇಳಿದಾಗ 'ಅಯ್ಯೋ ಅವ್ರ ಮನೆ ಹಾಳಾಗ !' – ಎಂಬ ಉದ್ಗಾರ ಎಲ್ಲರ ಬಾಯಿಂದ ಹೊರಟಿತು. ಸಭೆಯಲ್ಲಿದ್ದ ಕಿತಾಪತಿ ಬಸಣ್ಣ 'ತುಲಾಭಾರ' ಪುರಾಣವನ್ನು ಬಹಳ ಸ್ವಾರಸ್ಯಕರವಾಗಿ ಹೇಳತೊಡಗಿದಾಗ, ಉಳಿದ ಬಡಪಾಯಿಗಳು 'ಅಯ್ಯೋ ನನ್ ಶಿವನೇ, ಏನಯ್ಯ ಇದರ ಮೈಮೆ !' – ಎಂದು ಅಚ್ಚರಿಗೊಂಡರು.

''ಚಿನ್ನ, ಬೆಳ್ಳಿ, ತುಪ್ಪ, ಮೊಸರು ಅವೆಲ್ಲ ಆಗೂ ಮಾತಲ್ಲ. ರಾಗಿಯೋ, ಉಳ್ಳೀ ಕಾಳೋ ಆದ್ರೆ ಏನೋ ಆಗ್ಲಿ ಅನ್ನೋದಪ್ಪ'' ಎಂದು ಯಾರೋ ಸಲಹೆ ಮಾಡಿದಾಗ, ''ನಿಂಗೇನ್ ತಲೆಗಿಲೆ ಕೆಟ್ಟೋಗೈತ ಎಂಗ್ಲಾ ? ಬೆಳ್ದು ತೊಂಬೆ ತುಂಬ್ಸಿಟ್ಟಿರೋನಂಗಾಡ್ತಾನ್ನೆ ! ಕಾಳು, ಕಡ್ಡಿ ಸುದ್ದೀನೇ ಎತ್‌ಬ್ಯಾಡ್ರಿ,'' ಎಂದು ಸಾಕಜ್ಜಿ ಪಂಚಾಯ್ತಿಯವರನ್ನು ತರಾಟೆಗೆ ತೆಗೆದುಕೊಂಡಿತು.



ಇಡೀ ದಿನ ಹೀಂಗೆ ದಾರಿ ತೋರಿಸ್ತಾ ನಿಂತಿದ್ರೆ... ಸಾರ್ ಅವರು 'ಶಿಲೆ'ಯಾಗಿದ್ದು ಅಂತಹ ವಿಶೇಷ ಏನಿಲ್ಲ ಅನ್ಸುತ್ತೆ...



ತುಂಬಾ ಹೊತ್ತು ಚರ್ಚೆ, ಚಮತ್ಕಾರ, ಸಣ್ಣ ತಕರಾರು ನಡೆದ ನಂತರ ಕೊನೆಗೆ ಹುಣಿಸೆ ಹಣ್ಣು ತುಲಾಭಾರಕ್ಕೆ ಒಪ್ಪಲಾಯಿತು. ನಾಳೆಯಿಂದಲೇ ರಸ್ತೆಯಂಚಿನ ಹುಣಿಸೆ ಮರಗಳಿಂದ ತಲಾ ಅಷ್ಟಷ್ಟು ಹಣ್ಣು ಸಂಗ್ರಹಿಸಿ, ತುಲಾಭಾರದ ನಂತರ ಅವನ್ನು ಅವರವರೇ ತೆಗೆದುಕೊಳ್ಳುವುದೆಂದು ತೀರ್ಮಾನಿಸಲಾಯಿತು.

ತುಲಾಭಾರ ಮಾಡಿಸಿಕೊಳ್ಳಲು ಪೂಜಾರಿ ಮಾಂತಪ್ಪ ತಯಾರಾಗಿದ್ದ. ಆದರೆ ಆತನ ಹಿತಶತ್ರುಗಳು ಅದಕ್ಕೆ ಕಲ್ಲು ಹಾಕಿದರು. ಗೊಂದಲಪುರದ ಪಡ್ಡೆ ಹುಡುಗರ ಕೈ ಮೇಲಾಯಿತು. ಶ್ರೀ ಸಿದ್ದೇಶ್ವರಾನಂದಜೀ ಅವರಿಗೆ ತುಲಾಭಾರ ಮಾಡುವುದೆಂದು ಎಲ್ಲರೂ ಒಪ್ಪಿದರು.

ಆದರೆ, ಸ್ವತಃ ಸಿದ್ದೇಶ್ವರಾನಂದಜಿ ಸಮ್ಮತಿಸಲು ಹಿಂಜರಿದರು. ಪೂರ್ವಾಶ್ರಮದಲ್ಲಿ ಯಡವಟ್ಟು ಸಿದ್ದಣ್ಣನಾಗಿದ್ದ ಈತ ಇಟ್ಟಿಗೆ ಹೊತ್ತು ಅಯೋಧ್ಯೆವರೆಗೆ ಹೋಗಿದ್ದವ. ಊರಿಗೆ ಬಂದ ದಿನ ಮಾಂತಪ್ಪ ಆತನಿಗೆ ಸನ್ಮಾನ ಏರ್ಪಡಿಸಿದ್ದ. ಆದರೆ ಸಿದ್ದಣ್ಣನ ಹೆಂಡತಿ ಚೆಲುವಕ್ಕ ಎಲ್ಲರ ಎದುರಿಗೆ ಆತನ ಮೂತಿಗೆ ತಿವಿದು ಅವಮಾನ ಮಾಡಿದ್ದಳು. ಸಿದ್ದೇಶ್ವರಾನಂದಜೀ ಅವರಿಗೆ ಚೆಲುವಕ್ಕನ ಭಯ ಈಗಲೂ ಬಿಟ್ಟಿಲ್ಲ. ಅಲ್ಲದೆ ಚೆಲುವಕ್ಕ ಈಗ ಪಂಚಾಯಿತಿ ಮೆಂಬರು ! ಆದರೆ ಆಕೆ ಮೀಟಿಂಗಿಗೆ ಹೋಗುವ ದಿನ ತರಾತುರಿಯಲ್ಲಿ ತುಲಾಭಾರ ನಡೆಸಲು ಹಿಕಮತ್ತು ಹೇಳಿಕೊಟ್ಟದ್ದೂ ಆತನೇ.

ಗೊಂದಲಪುರ ವಾಸಿಗಳು ಗುಲ್ಲೂರಿನಿಂದ ಬರುವ ಪತ್ರಿಕೆ ಮತ್ತು ಟಿ. ವಿ. ರಿಪೋರ್ಟರುಗಳಿಗಾಗಿ ಕಾಯುತ್ತಿದ್ದಾರೆ. ಸಿದ್ದೇಶ್ವರಾನಂದಜೀಯವರ ಭಾರಕ್ಕೆ ಸಮನಾಗಿ ಹುಣಿಸೆ ಹಣ್ಣು ಸಂಗ್ರಹಿಸಿಟ್ಟುಕೊಂಡು, ಚೆಲುವಕ್ಕ ಪಂಚಾಯಿತಿ ಮೀಟಿಂಗಿಗೆ ಹೋಗುವ ಸಮಯ ನೋಡಿ, ತುಲಾಭಾರ ನೆರವೇರಿಸಲು ಸಕಲ ಸಿದ್ಧತೆ ಮಾಡಿಕೊಂಡಿದ್ದಾರೆ. ಜೊತೆಗೆ ಈಗಲಾದರೂ ಮಳೆ ಬಂದೀತೆ ಎಂದು ಆಕಾಶದತ್ತ ದಿಟ್ಟಿಸುವುದನ್ನೂ ಬಿಟ್ಟಿಲ್ಲ !

*ಬೀರಣ್ಣ, ಗೊಂದಲಪುರ*

# ಹೊಸತು ಪದ ಹೊಸೆತ



ಜಿ. ಆರ್. ಪ್ರಸನ್ನಕುಮಾರ
ಗೌಡಹಳ್ಳಿ, ಮೂಡಿಗೆರೆ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ - ೫೭೭ ೧೩೨

**ಎಡದಿಂದ ಬಲಕ್ಕೆ**

೧. ವಿನಯನು ತೋರ್ಪಡಿಸಿದ ಹೊಸದೊಂದ ಬಗೆ ೪
೩. ಜನರ ಮನದಲ್ಲಿ ಇಂದಿಗೂ ಮಾಸಿಲ್ಲ ಈ ಮೂಢನಂಬಿಕೆ ೪
೫. ನೆಹರುರವರ ಅಂಗಿಯಲ್ಲಿ ಸದಾ ರಾರಾಜಿಸುತ್ತಿದ್ದ ಒಲವಿನ ಪುಷ್ಪ ೩
೭. ಸಾಗರದಲ್ಲಿ ದೊರೆಯುವ ಕ್ಷಾರ ಪದಾರ್ಥ ಚೆಲ್ಲಾಪಿಲ್ಲಿಯಾಗಿದೆ ೩
೯. ಸುಟ್ಟರೂ ಹೋಗದ "ಹುಟ್ಟುಗುಣ" ೩
೧೦. ತಂತ್ರಜ್ಞಾನ ಉಪಯೋಗಿಸಿ ರೂಪಿಸಿರುವ ಮನುಜನ ತದ್ರೂಪ ವಿಲೋಮವಾಗಿದೆ ೫
೧೨. ಅಣುಬಾಂಬ್, ವಿಷಾನಿಲ ಮುಂತಾದವುಗಳನ್ನು ಇಂತಹ ಅಸ್ತ್ರಗಳೆಂದು ಕರೆಯುತ್ತಾರೆ ೫
೧೫. ಒತ್ತರಿಸಿ ಬರುವ "ಆಸೆ" ೩
೧೬. ತನ್ನ ಪಾಲಿಗಾಗಿ ಆತನು ಹೂಡಿದ "ದಾವೆ" ೩
೧೭. ವಿನಾಯಕನಿಗೆ ಪ್ರಿಯವಂತೆ ಈ ಹುಲ್ಲು ೩
೧೯. ಕೊಡು-ಕೊಳ್ಳುವವರ ನಡುವೆ ವ್ಯವಹಾರ ಕುದುರಿಸುವ "ದಲ್ಲಾಳಿ" ತಿರುಗಿದ್ದಾನೆ ೪
೨೦. ಬೆಟ್ಟದಲಿ ಅಲೆದಾಡಿ ಹುಡುಕಿದರೆ ಉಪ್ಪಿನಕಾಯಿ ಹಾಕಬಹುದಾದ ಈ ಫಲ ದೊರೆಯುತ್ತದೆ ೪

**ಮೇಲಿನಿಂದ ಕೆಳಕ್ಕೆ**

೧. ಸಾವಿನ ಸಮಾನಾರ್ಥಕ ಪದ ೪
೨. ಮಗುವಿನಂತಹ ಮಂದಹಾಸ ೨
೩. ಜೈಲಿನಲ್ಲಿ ಕುಳಿತು ಎಣಿಸಿದ್ದು ೨
೪. ಮೈಸೂರು ಅರಸರ ಕಾಲದಲ್ಲಿದ್ದ ಮಹಾನ್ ಕುಂಚ ಕಲಾವಿದ ೪
೬. ಮಾಲಾರ್ಪಣೆ ಮಾಡಿಕೊಂಡು ಮೇಲೇರಿರುವ ಬೆಕ್ಕು ೩
೮. ರಾಮನ ಸುತನಿಂದ ಆರಂಭವಾಗುವ ಉತ್ಸಾಹದ ಬುಗ್ಗೆ ೫
೯. ಪರರ ಪ್ರಭಾವಕ್ಕೆ ಒಳಗಾಗದೆ ತನ್ನಿಂತಾನೆ ಪ್ರಚೋದನೆಗೊಳಪಟ್ಟದ್ದು ೫
೧೧. ಗರ್ವದಿಂದ ಕೂಡಿದ ಹೆಣ್ಣನ್ನು ಹೀಗೆಂದೂ ಕರೆಯಬಹುದು ೪
೧೩. ದಶರಥನ ಜೇಷ್ಠ ಪುತ್ರನಿಗಾಗಿ ವರ್ಷಗಟ್ಟಲೆ ಕಾದಳಂತೆ ಈ ಭಕ್ತೆ ೩
೧೪. ಜನ್ಮದಾತರಿವರು ಪ್ರತ್ಯಕ್ಷ ದೇವರು ೪
೧೭. ಸತಿಯ ಸುತ ಸುಮ್ಮನೆ ತಿರುಗಿ ಕುಳಿತಿದ್ದಾನೆ ೨
೧೮. ಹಾಲಿನ ಮೇಲೆ ತೇಲುತ್ತ ನಿಂತ ತಿರುಳು ಕುದುರೆಯ ಕೂಗು ಹೌದು ೨

# ಒಂದು ಮಳೆ ಹನಿ ಹಾಡು



ಕಾದಿದೆ ಭೂಮಿ ನಮಗಾಗಿ
ಕಾದಿದೆ ಬಾಳು ನಮಗಾಗಿ

ಆರಿದೆ ಬಾಯಿ ಒಣಗಿದೆ ಗಂಟಲು
ಮರಮರ ಜೀವ ಮರುಗುತಿದೆ
ಸೊರಗಿದೆ ದೇಹ ಬಿರಿದಿದೆ ಹೃದಯ
ಬಿರುಕು ಬಿರುಕಿನಲಿ ಚೀರುತಿದೆ
ಹಸಿರೆಂಬುದು ಹೇಳ ಹೆಸರಿಲ್ಲವಾಗಿ
ತಪಿಸುತ್ತಿದೆ ನೆಲ ಜಪಿಸುತ್ತಿದೆ ಹೊಲ
ಕಾದಿದೆ ಭೂಮಿ ಬಿಸಿಲಿಂದ

ಮೋಡಗಳ ಹಿಂಡು ಓಡೋಡಿ ಬಂದು
ಎಂಟೂ ಮೂಲೆಗಳ ಆವರಿಸಿ ನಿಂದು
ಮಿಂಚುಗಳ ಕುಣಿಸಿ ಗುಡುಗುಗಳ ಹಾಡಿಸಿ
ಬಾನಿನಂಗಳದಲಿ ರಂಗಸಿದ್ಧತೆ ಮಾಡಿ

ಟಪ್
ಒಂದು ಹನಿ
ಟಪ್ ಟಪ್
ಅಲ್ಲಿ ಒಂದು ಹನಿ ಇಲ್ಲಿ ಒಂದು ಹನಿ
ಟಪ್ ಟಪ್ ಟಪ್ ಟಪ್ ಟಪ್ ಟಪ್ ಟಪ್ ಟಪ್
ಇತ್ತ ಒಂದು ಅತ್ತ ಒಂದು ಒಂದರ ಆಚೆ ಇನ್ನೊಂದು
ಹಿಂದೆ ಒಂದು ಮುಂದೆ ಒಂದು ಒಂದರ ಮೇಲೆ ಮತ್ತೊಂದು
ಕಾಳು ಕಾಳು ಹನಿ ಬಂದು
ನೀರು ನೀರು ನೆಲ ನೆಂದು
ಹಬ್ಬಿಸಿ ಬೆಚ್ಚನೆ ಮಣ್ಣಿನ ವಾಸನೆ

ಹಸಿ ಹಸಿ ಕೂಡಿಕೊಂಡು ಕೈ ಕೈ ಜೋಡಿಸಿಕೊಂಡು
ಬಿಡಿ ಬಿಡಿ ಬೇಡ ನಮಗೆ ಇಡಿ ಇಡಿ ಸರಿಯೆಂದು
ಸಣ್ಣ ಹಸಿ ದೊಡ್ಡದಾಗಿ ಎಲ್ಲ ಒಂದೆ ಏಕವಾಗಿ
ನೋಡು ನೋಡುವಷ್ಟರಲ್ಲಿ ಜಗಕೆಲ್ಲ ಜಳಕವಾಗಿ

ಮೂಗಿಗೆ ಕಂಪು ಕಿವಿಗೆ ಇಂಪು
ಕಣ್ಣಿಗೆ ಸೊಂಪು ಒಡಲಿಗೆ ತಂಪು
ಮಳೆಯೇ ಒಂದು ಒಲವಿನ ಹಾಡು
ಮಳೆಯೇ ಒಂದು ಚೆಲುವಿನ ಹಬ್ಬ

ಬಾರꠂ ಗೆಳತಿ ಬಾರꠂ ಲಗ್ಗ
ನಮಗೆಲ್ಲರಿಗೂ ಇಲ್ಲೆ ಸಗ್ಗ
ಆಗೋಣು ನಾವು ಪ್ರತಿಯೊಬ್ಬರೂ
ಒಂದೊಂದು ಸಣ್ಣ ಮಳೆ ಹನಿ
ಒಂದೊಂದು ಸಣ್ಣ ಮಳೆ ಹನಿ

ಕಾದಿದೆ ಭೂಮಿ ನಮಗಾಗಿ
ಕಾದಿದೆ ಬಾಳು ನಮಗಾಗಿ.

ಸಂಕುಲಜೀವ
೧೯/೨, ಮಹಿಷಿ ರಸ್ತೆ, ಮಾಳಮಡ್ಡಿ,
ಧಾರವಾಡ - ೫೮೦ ೦೦೭

# ವ್ಯಕ್ತಿ - ವ್ಯಕ್ತಿ ಸಂಬಂಧದ ಸುಧಾರಣೆ ಹೇಗೆ?

ಡಾ॥ ಸಿ. ಆರ್. ಚಂದ್ರಶೇಖರ್

ಇಂದಿನ ಕುಟುಂಬಗಳಲ್ಲಿ, ಸಮಾಜದಲ್ಲಿ ವ್ಯಕ್ತಿ-ವ್ಯಕ್ತಿ ನಡುವಿನ ಸಂಬಂಧ ಹಳಸುತ್ತಿದೆ. ಪ್ರೀತಿ-ವಿಶ್ವಾಸ, ಸಹಾನುಭೂತಿ-ಸಹಕಾರಗಳ ಜಾಗವನ್ನು ಕೋಪ, ದ್ವೇಷ, ಅಪನಂಬಿಕೆ, ಅಸಹನೆ, ಅಸಹಕಾರಗಳು ಆಕ್ರಮಿಸಿ ಕೊಳ್ಳುತ್ತಿವೆ. ಬೆಲೆ ಕಟ್ಟಲಾಗದ ಹಾಗೂ ಬೆಲೆ ಕಟ್ಟಬಾರದ ಸಂಬಂಧಗಳಲ್ಲಿ ಹಣ-ವಾಣಿಜ್ಯೀಕರಣ ತಲೆ ಹಾಕುತ್ತಿದೆ. ಗಂಡ ಹೆಂಡತಿ, ತಂದೆ ತಾಯಿ ಮಕ್ಕಳು, ಸೋದರ ಸೋದರಿಯರು, ಬಂಧುಮಿತ್ರರು, ಸಹೋದ್ಯೋಗಿಗಳು ಭಿನ್ನಾಭಿಪ್ರಾಯ, ಮನಸ್ತಾಪ, ಅತಿಸ್ಪರ್ಧೆ, ಒಬ್ಬರ ನ್ನೊಬ್ಬರು ವಂಚಿಸುವ ವಿಷ ವರ್ತುಲಗಳಲ್ಲಿ ಸಿಕ್ಕಿಹಾಕಿ ಕೊಂಡಿದ್ದಾರೆ. ಜಾತಿ, ಧರ್ಮ, ಭಾಷೆ, ವರ್ಗ, ನೆಲ ಜಲದ ನೆಪದಲ್ಲಿ ಸಮುದಾಯಗಳು ಹೊಡೆದಾಡಿ, ಹಿಂಸಾಚಾರಕ್ಕೆ ಇಳಿಯುತ್ತಿವೆ. ಒಬ್ಬರು ಇನ್ನೊಬ್ಬರನ್ನು ಮೋಸಮಾಡಿ, ಶೋಷಿಸುವ ಪ್ರವೃತ್ತಿ ಎಲ್ಲೆಡೆ ಕಂಡು ಬರುತ್ತಿದೆ. ದಯೆ-ಅನುಕಂಪ, ಸ್ವಾರ್ಥದ ಸೋಂಕಿಲ್ಲದೆ ಇತರರಿಗೆ ನೆರವಾಗುವ ಮನೋಧರ್ಮ ಕಾಣೆಯಾಗುತ್ತಿದೆ. ಎಲ್ಲರೂ ಪರಹಿತಕ್ಕಿಂತ ಸ್ವಹಿತಕ್ಕೇ ಹೆಚ್ಚು ಆದ್ಯತೆ ನೀಡುತ್ತಾ, ವ್ಯಕ್ತಿ-ವ್ಯಕ್ತಿ ನಡುವಿನ ಸಂಬಂಧದ ಎಳೆಗಳನ್ನು ದುರ್ಬಲಗೊಳಿಸುತ್ತಿದ್ದಾರೆ. ಏಕೆ ಹೀಗಾಗುತ್ತಿದೆ ?

ಕೆಲವು ಸಂಬಂಧಗಳು ನಮಗೆ ಹುಟ್ಟಿನೊಂದಿಗೇ ಬರುತ್ತವೆ. ಉದಾ: ತಾಯಿ ತಂದೆ, ಸೋದರ ಸೋದರಿ, ದೊಡ್ಡಪ್ಪ ದೊಡ್ಡಮ್ಮ, ಚಿಕ್ಕಪ್ಪ, ಚಿಕ್ಕಮ್ಮ, ಸೋದರ ಮಾವ, ಅತ್ತೆ ಇತರ ಬಂಧುಗಳು. ಕೆಲವು ಸಂಬಂಧಗಳನ್ನು ತಾವು ಆಯ್ಕೆಮಾಡಿ ಅಥವಾ ಅನಂತರ ಪರಿಸರದ ಕಾರಣಗಳಿಂದ ಪಡೆಯುತ್ತೇವೆ. ಹೆಂಡತಿ, ಮಕ್ಕಳು, ಸ್ನೇಹಿತರು, ಸಹೋದ್ಯೋಗಿಗಳು, ನೆರೆಯವರು ಇತ್ಯಾದಿ. ಕೆಲವು ಸಂಬಂಧಗಳು ದೀರ್ಘಕಾಲ, ಜೀವನಪರ್ಯಂತ ಉಳಿಯುತ್ತವೆ. ಕೆಲವು ಸಂಬಂಧಗಳು ಸ್ವಲ್ಪ ಕಾಲ ಉಳಿದು ಮರೆಯಾಗುತ್ತವೆ. ಈ ಸಂಬಂಧಗಳ ಮೇಲೆ ಪ್ರಭಾವ ಬೀರುವ ಅಂಶಗಳು ಯಾವುವು ?

**೧. ಪಾತ್ರಗಳು :** ಪ್ರತಿಯೊಬ್ಬ ವ್ಯಕ್ತಿ ಜೀವನದ ವಿವಿಧ ಹಂತಗಳಲ್ಲಿ ಅಥವಾ ಒಂದೇ ಸಮಯಕ್ಕೆ ಹಲವು ಪಾತ್ರಗಳನ್ನು ನಿರ್ವಹಿಸಬೇಕು. ಪುರುಷ ಮಗನಾಗಿ, ಸೋದರನಾಗಿ, ಅನಂತರ ತಂದೆಯಾಗಿ, ಸ್ನೇಹಿತನಾಗಿ, ಬಂಧುವಾಗಿ ನಡೆದುಕೊಳ್ಳಬೇಕು. ಹಾಗೆಯೇ ಸ್ತ್ರೀ ಮಗಳಾಗಿ, ಸೋದರಿಯಾಗಿ, ತಾಯಿಯಾಗಿ, ಸ್ನೇಹಿತೆಯಾಗಿ, ಬಂಧುವಾಗಿ ನಡೆದುಕೊಳ್ಳಬೇಕು. ಈ ಪ್ರತಿಯೊಂದು ಪಾತ್ರಕ್ಕೂ ಸಾಮಾಜಿಕವಾದ, ನೈತಿಕವಾದ, ಕಾನೂನುಬದ್ಧವಾದ ಕರ್ತವ್ಯಗಳ ಪಾಲನೆಯ ಹೊಣೆ ಗಳಿರುತ್ತವೆ. ನಿರ್ದಿಷ್ಟ ನಡೆ-ನುಡಿ ಪ್ರತಿಕ್ರಿಯೆಗಳಿರುತ್ತವೆ. ಇವನ್ನು ವ್ಯಕ್ತಿ ಹೆಚ್ಚೂ ಕಡಿಮೆ ಸಮರ್ಥವಾಗಿ ನಿರ್ವಹಿಸಿದರೆ ಆತನ/ಆಕೆಯ ಸಂಬಂಧ ಎಲ್ಲರೊಡನೆ ಚೆನ್ನಾಗಿರುತ್ತದೆ. ನಿರ್ವಹಿಸದಿದ್ದರೆ ಸಂಬಂಧ ಹಳಸುತ್ತದೆ. ಹೀಗೆ ಪಾತ್ರೋಚಿತ ಕೆಲಸ ಕರ್ತವ್ಯಗಳನ್ನು ವ್ಯಕ್ತಿ ಅರ್ಥ ಮಾಡಿಕೊಂಡು ನಿರ್ವಹಿಸುವುದರಿಂದ, ಇತರರು ಅದಕ್ಕೆ ಅವಕಾಶ ಮಾಡಿಕೊಡುವುದರಿಂದ ಮತ್ತು ಲೋಪಗಳಾದಾಗ ಸರಿಪಡಿಸಿಕೊಳ್ಳಲು ಸಹಕಾರ ನೀಡಿದಾಗ, ಸಂಬಂಧಗಳು ಸುಧಾರಿಸುತ್ತವೆ.

**೨. ವ್ಯಕ್ತಿತ್ವ :** ಸುಮಾರು ೨೦ ವರ್ಷಗಳಷ್ಟು ದೀರ್ಘಾವಧಿಯಲ್ಲಿ ವ್ಯಕ್ತಿಯ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ನಡೆ ನುಡಿ ಸ್ವಭಾವ, ಕೌಶಲಗಳು, ಜ್ಞಾನ, ಧೋರಣೆ, ಗುರಿ-ಉದ್ದೇಶಗಳು, ಕ್ರಿಯೆ-ಪ್ರತಿಕ್ರಿಯೆಗಳು ಹವ್ಯಾಸ-ಅಭ್ಯಾಸಗಳು ವ್ಯಕ್ತಿತ್ವದ ಭಾಗಗಳು. ಆನುವಂಶೀಯತೆ, ತಂದೆ ತಾಯಿಗಳ ಲಾಲನಾ-ಪಾಲನಾ ವೈಖರಿ, ಕೌಟುಂಬಿಕ ಪರಿಸರ, ಶಿಕ್ಷಣ, ಸಹವಯಸ್ಕರು, ಮಾದರಿಯಾಗುವ ಜನ, ಜೀವನದ ಘಟನೆಗಳು ವ್ಯಕ್ತಿತ್ವವನ್ನು ರೂಪಿಸುತ್ತವೆ. ಕೆಲವು ಬಗೆಯ ವ್ಯಕ್ತಿತ್ವಗಳಲ್ಲಿ ವ್ಯಕ್ತಿ-ವ್ಯಕ್ತಿ ನಡುವಿನ ಸಂಬಂಧಗಳನ್ನು ಉಳಿಸಿಕೊಳ್ಳುವ, ವೃದ್ಧಿಸುವ ಕೌಶಲಗಳು ಕಡಿಮೆ ಇರುತ್ತವೆ ಅಥವಾ ಸಂಬಂಧಗಳನ್ನು ಹಾಳು ಮಾಡುವಂತಹ ಲಕ್ಷಣಗಳಿರು ತ್ತವೆ. ಉದಾ: ಸಂಶಯ ಪೀಡಿತ ವ್ಯಕ್ತಿತ್ವ, ಆಕ್ರಮಣಕಾರಿ ವ್ಯಕ್ತಿತ್ವ, ಸಮಾಜವಿರೋಧಿ ವ್ಯಕ್ತಿತ್ವ, ಅತಿ ಅಚ್ಚುಕಟ್ಟುತನ, ಹಠಮಾರಿತನದ ವ್ಯಕ್ತಿತ್ವ, ತೀವ್ರ ಅಂತರ್ಮುಖಿ ವ್ಯಕ್ತಿತ್ವ, ಸ್ವಮೋಹದ ವ್ಯಕ್ತಿತ್ವ ಇತ್ಯಾದಿ. ಈ ಬಗೆಯ ವ್ಯಕ್ತಿತ್ವ ದೋಷಗಳಿರುವ ವ್ಯಕ್ತಿಗಳೊಂದಿಗೆ ಸುಮಧುರ ಸಂಬಂಧವನ್ನು ಉಳಿಸಿಕೊಳ್ಳುವುದು ಇತರರಿಗೆ ಬಹಳ ಕಷ್ಟವಾಗುತ್ತದೆ. ಈ ಬಗೆಯ ವ್ಯಕ್ತಿಗಳಿಗೆ ಮನೋವೈದ್ಯ ರಿಂದ ಸಲಹೆ-ಆಪ್ತ ಸಲಹೆ ಸಮಾಧಾನಗಳು ಹಾಗೂ ಇತರರ ಸಹಕಾರ ಬೇಕಾಗುತ್ತದೆ. ಹೊಂದಿಕೊಳ್ಳಲು ಅವರಿಗೆ ತರಪೇತಿ ನೀಡಬೇಕಾಗುತ್ತದೆ.

**೩. ಬಾಲ್ಯದ ಅನುಭವಗಳು :** ಮೊದಲ ಐದಾರು ವರ್ಷಗಳಲ್ಲಿ ಮಗುವಿಗೆ ತಂದೆ ತಾಯಿಗಳು ಸರಿಪ್ರಮಾಣದ ಪ್ರೀತಿ ಆಸರೆ ಕೊಟ್ಟು, ಸುರಕ್ಷಿತ ಪರಿಸರದಲ್ಲಿ ಬೆಳೆಸಿದರೆ, ಮನೆಯ ಸದಸ್ಯರು ಪರಸ್ಪರ ಒಳ್ಳೆಯ ಸಂಬಂಧದ ಮಾದರಿಯನ್ನು ಕೊಟ್ಟರೆ, ಇತರರೊಡನೆ ಸರಿಯಾಗಿ ನಡೆದುಕೊಳ್ಳಲು ತರಪೇತಿ ಪ್ರೋತ್ಸಾಹ ಕೊಟ್ಟರೆ ವ್ಯಕ್ತಿಯ ವ್ಯಕ್ತಿ ವ್ಯಕ್ತಿ ಸಂಬಂಧದ ಕೌಶಲ ಉತ್ತಮ ಮಟ್ಟದಲ್ಲಿ ರೂಪುಗೊಳ್ಳುತ್ತದೆ. ತಂದೆ ಅಥವಾ ತಾಯಿ ಇಲ್ಲದಾಗ, ತೀವ್ರ ಪ್ರೀತಿ ಅಥವಾ ತಿರಸ್ಕಾರ, ಶಿಕ್ಷೆ ನೀಡುವ ಪೋಷಕರು, ಸದಾ ಜಗಳವಾಡುವ ಕುಟುಂಬದ ಸದಸ್ಯರು, ಮನಸ್ಸಿಗೆ ಆಘಾತ, ನೋವುಂಟುಮಾಡುವ ಘಟನೆಗಳು, ಒಂಟಿತನಕ್ಕೆ ಪ್ರೋತ್ಸಾಹ ನೀಡುವ ಪರಿಸರದಿಂದ ಮಗುವಿನ ಸಂಬಂಧ ಬೆಳೆಸುವ-ಉಳಿಸುವ ಸಾಮರ್ಥ್ಯ ಕ್ಷೀಣಿಸುತ್ತದೆ. ಆದ್ದರಿಂದ ಆಹಾರ-ಬಟ್ಟೆ ವಿದ್ಯೆಯನ್ನು ನೀಡುವುದರ ಜೊತೆಗೆ, ಮಗುವಿಗೆ ಎಲ್ಲರೊಡನೆ ಹೊಂದಿಕೊಳ್ಳುವ ಗುಣವನ್ನೂ ತಂದೆ ತಾಯಿ ಪೋಷಕರು ಕಲಿಸಬೇಕು.

**೪. ಹವ್ಯಾಸ-ಅಭ್ಯಾಸಗಳು :** ಸಂಗೀತ, ಸಾಹಿತ್ಯ, ನೃತ್ಯ, ನಾಟಕ, ಸೃಜನಶೀಲ ಚಟುವಟಿಕೆಗಳು, ಕ್ರೀಡೆಗಳು, ದೈನಂದಿನ ಕೆಲಸ ಚಟುವಟಿಕೆಗಳನ್ನು ಕ್ರಮಬದ್ಧವಾಗಿ ಮಾಡುವ ಅಭ್ಯಾಸದಿಂದ ಜನರೊಡನೆ ನಮ್ಮ ಸಂಬಂಧ ಚೆನ್ನಾಗಿರುತ್ತದೆ. ಸಮಾನ ಮನಸ್ಕರಲ್ಲಿ, ಸಮಾನ ಅಭಿರುಚಿ-ಹವ್ಯಾಸಗಳನ್ನು ಹೊಂದಿರುವವರಲ್ಲಿ, ಸ್ನೇಹ ಸಂಬಂಧಗಳು ಹುಟ್ಟಿ ಅರಳುತ್ತವೆ. ಯಾವೊಂದೂ ಹವ್ಯಾಸವಿಲ್ಲದೆ, ಕ್ರಮಬದ್ಧ ಜೀವನ ಇಲ್ಲವಾದರೆ ವ್ಯಕ್ತಿ ಒಂಟಿಯಾಗುತ್ತಾನೆ. ಇತರರು ಆತನಲ್ಲಿ/ಆಕೆಯಲ್ಲಿ ಆಕರ್ಷಣೆ ಕಳೆದುಕೊಳ್ಳುತ್ತಾರೆ. ಆದ್ದರಿಂದ ಕನಿಷ್ಠ ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ಹವ್ಯಾಸಗಳನ್ನು ಬೆಳೆಸಿ ಕೊಳ್ಳುವುದು, ಪ್ರತಿನಿತ್ಯ ಒಂದು ಘಂಟೆ ಕಾಲವಾದರೂ ಅದಕ್ಕಾಗಿ ವಿನಿಯೋಗಿಸುವುದು ಅಗತ್ಯವಾಗುತ್ತದೆ.

**೫. ಬುದ್ಧಿಮಟ್ಟ :** ಐ.ಕ್ಯೂ. ೭೦ಕ್ಕಿಂತ ಕಡಿಮೆ ಇದ್ದರೆ, ಎಲ್ಲಾ ಕೌಶಲಗಳ ಕೊರತೆಯ ಜೊತೆಗೆ, ಸಂಬಂಧ-ಕೌಶಲವೂ ಕಡಿಮೆ ಇರುತ್ತದೆಯಾಗಿ ಬುದ್ಧಿಮಾಂದ್ಯ ವ್ಯಕ್ತಿಗಳು ಇತರರ ಮೇಲೆ ತೀರಾ ಅವಲಂಬಿತರಾಗಿರು ತ್ತಾರೆ ಅಥವಾ ದೂರವೇ ಉಳಿಯುತ್ತಾರೆ. ಅರ್ಥಪೂರ್ಣ-ವೈವಿಧ್ಯಮಯ ಸಂಬಂಧ ಅವರಿಗೆ ದಕ್ಕುವುದಿಲ್ಲ. ಹಾಗೆಯೇ ಅತೀ ಬುದ್ಧಿವಂತರು (ಐ. ಕ್ಯೂ. ೧೩೦ಕ್ಕೂ ಹೆಚ್ಚು) ತಮ್ಮದೇ ಆದ ಆಸಕ್ತಿ-ಕೆಲಸ-ಸಾಧನೆಯಲ್ಲಿ ಮಗ್ನರಾಗಿ ಇತರರೊಡನೆ ಸಂಬಂಧಕ್ಕೆ ನಿರ್ಲಕ್ಷ್ಯ ತೋರಬಹುದು. ಇತರರಿಗೆ ಕೂಡ ಇವರ ಬಗ್ಗೆ ಭಯ, ಭಕ್ತಿ, ಆರಾಧನಾ ಭಾವನೆ ಇದ್ದು, ಸರಳ ಸಂಬಂಧ ಸ್ನೇಹವಿಟ್ಟುಕೊಳ್ಳಲು ಹಿಂಜರಿಯುತ್ತಾರೆ. ಹೀಗಾಗಿ ಅತಿ ಪ್ರತಿಭಾವಂತರು ಒಂಟಿಜೀವಿಗಳಾಗಿಯೇ ಉಳಿಯುವ ಸಾಧ್ಯತೆ ಹೆಚ್ಚು.

**೬. ಕಾಯಿಲೆ-ಅನಾರೋಗ್ಯ :** ಕಾಯಿಲೆ-ಅನಾರೋಗ್ಯ ಅಪರೂಪಕ್ಕೆ ಬಂದು ಸ್ವಲ್ಪ ಕಾಲವಿದ್ದರೆ ಅದು ಸಂಬಂಧ ಗಳನ್ನು ಬೆಸೆಯುತ್ತದೆ. ರೋಗಿಗೆ ಸಂಬಂಧಪಟ್ಟವರೆಲ್ಲರೂ ಉಪಚಾರ ಮಾಡಿ ನೆರವು [illegible] [illegible] ಭದ್ರಪಡಿಸುತ್ತಾರೆ. ಹೀಗಾಗಿ [illegible] [illegible]. [illegible]

> *ಇಂದಿನ ಸಮಾಜದಲ್ಲಿ, ಕುಟುಂಬಗಳಲ್ಲಿ ವ್ಯಕ್ತಿ-ವ್ಯಕ್ತಿ ನಡುವಿನ ಸಂಬಂಧ ಹಳಸುತ್ತಿದೆ. ಪ್ರೀತಿ-ವಿಶ್ವಾಸ-ಸಹಾನುಭೂತಿ-ಸದ್ ಸಹಕಾರಗಳ ಜಾಗವನ್ನು ಕೋಪ - ದ್ವೇಷ, ಅಪನಂಬಿಕೆ, ಅಸಹನೆ, ಅಸಹಕಾರಗಳು ಆಕ್ರಮಿಸಿಕೊಳ್ಳುತ್ತಿವೆ. ಮಾನವ ಸಂಬಂಧಗಳಲ್ಲಿ ವಾಣಿಜ್ಯ ಅಥವಾ ವ್ಯಾಪಾರೀ ಮನೋ ವೃತ್ತಿಯದೇ ಮೇಲುಗೈ. ಪರಿಣಾಮವಾಗಿ ಸಾಮಾಜಿಕ ಮೌಲ್ಯಗಳು ಎಳೆ ಎಳೆಯಾಗಿ ದುರ್ಬಲಗೊಳ್ಳುತ್ತಿವೆ. ಸಾಮಾಜಿಕ ಹಾಗೂ ಮಾನಸಿಕ ದೌರ್ಬಲ್ಯಕ್ಕೆ ಸಂಬಂಧಪಟ್ಟ ಪ್ರಶ್ನೆಗಳು, ಏಕೆ ಹೀಗಾಗುತ್ತಿದೆ ? ಈ ಪ್ರವೃತ್ತಿಗೆ ಕಾರಣಗಳಾವವೂ ಏನು ? ಇದಕ್ಕೆ ಪರಿಹಾರ ವಾದರೂ ಏನು ? ಇವುಗಳ ಬಗ್ಗೆ ಈ ಲೇಖನದಲ್ಲಿ ಕೆಲವು ಅಂಶಗಳನ್ನು ನಮಗೆ ಪರಿಚಯಿಸುವವರು ಹೆಸರಾಂತ ಮನಶ್ಶಾಸ್ತ್ರಜ್ಞರೂ, ವೈದ್ಯರೂ ಆದ ಡಾ॥ ಸಿ. ಆರ್. ಚಂದ್ರಶೇಖರ್ ಅವರು.*

ಲಾಭದ ಸವಿಯನ್ನು ವ್ಯಕ್ತಿ ಅನುಭವಿಸುತ್ತಾನೆ. ಆದರೆ ಕಾಯಿಲೆ ಪದೇ ಪದೇ ಬಂದರೆ, ದೀರ್ಘಕಾಲ ಉಳಿದರೆ ಅಥವಾ ಸಾಮಾಜಿಕ ಕಳಂಕ ಅಥವಾ ಅಸಹ್ಯವನ್ನುಂಟು ಮಾಡುವ ಕಾಯಿಲೆಗಳು (ಉದಾಹರಣೆಗೆ ಲೈಂಗಿಕ ರೋಗಗಳು, ಏಡ್ಸ್, ಮಾನಸಿಕ ರೋಗಗಳು, ಫಿಟ್ಸ್, ಚರ್ಮದ ಕಾಯಿಲೆಗಳು, ಕುಷ್ಟ, ಕ್ಯಾನ್ಸರ್, ಅಸ್ತಮಾ) ಸಂಬಂಧಗಳನ್ನು ಒಡೆಯುತ್ತವೆ. ರೋಗಿಯನ್ನು ಸಂಬಂಧಪಟ್ಟವರು ತಿರಸ್ಕರಿಸಬಹುದು/ದ್ವೇಷಿಸಬಹುದು. ಆದ್ದರಿಂದ ಆದಷ್ಟೂ ನಮ್ಮ ಶಾರೀರಕ ಮತ್ತು ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು.

**೭. ಹಣ ಸಂಪನ್ಮೂಲ ಸವಲತ್ತುಗಳು :** ಇವು ಕಡಿಮೆಯಾದಾಗ ಅಥವಾ ಹೆಚ್ಚಾದಾಗ ವ್ಯಕ್ತಿ-ವ್ಯಕ್ತಿ ನಡುವಿನ ಸಂಬಂಧಗಳಲ್ಲಿ ಬಿರುಕುಬಿಡುತ್ತದೆ. ಹಣವಿಲ್ಲದ ಬಡವನ ಸ್ನೇಹ ಸಂಬಂಧ ಯಾರಿಗೂ ಬೇಡ. ಬಡವ ಇತರರಿಂದ ಸಹಾಯವನ್ನು ಅಪೇಕ್ಷಿಸಿ, ಅದು ದೊರೆಯದಾಗ ಎಲ್ಲರನ್ನೂ ದ್ವೇಷಿಸತೊಡಗುತ್ತಾನೆ. ಶ್ರೀಮಂತನಿಗೆ ಹಣ-ಸಂಪತ್ತಿನ ಮದ ಏರಿದರೆ, ಆತನು ಎಲ್ಲರನ್ನೂ ದೂರ ಮಾಡುತ್ತಾನೆ. ಇತರರು ಆತನನ್ನು ಕಂಡು ಮತ್ಸರಪಡುತ್ತಾರೆ. ಹಣದಿಂದ ಸಂಬಂಧವನ್ನು ಅಳೆಯುವ ಶ್ರೀಮಂತ ಎಲ್ಲರ ಸಂಬಂಧಗಳನ್ನು ಕಳೆದುಕೊಳ್ಳುತ್ತಾನೆ. ಆದ್ದರಿಂದ ನಮಗೆ ಎಷ್ಟು ಅಗತ್ಯವೋ ಅಷ್ಟು ಹಣ-ಸಂಪತ್ತನ್ನು ಮಾತ್ರ ಹೊಂದುವುದು ಮುಖ್ಯವಾಗುತ್ತದೆ.

**೮. ವಯಸ್ಸು :** ಮಕ್ಕಳು, ಹದಿ ವಯಸ್ಸಿನವರು, ಇಳಿವಯಸ್ಕರು, ಸ್ನೇಹ ಸಂಬಂಧಗಳಿಗಾಗಿ ಹಾತೊರೆಯುತ್ತಾರೆ. ತಮ್ಮ ಸಮವಯಸ್ಕರ ಜೊತೆಯ ಒಡನಾಟದಿಂದ ಸಂತೋಷಪಡುತ್ತಾರೆ. ಆದರೆ ವಯಸ್ಕರು ತಮ್ಮ ಉದ್ಯೋಗ, ಕರ್ತವ್ಯ-ಸಾಧನೆ ಚಟುವಟಿಕೆಗಳಲ್ಲಿ ಮಗ್ನರಾಗಿ ಜನರ ಸಹವಾಸದಿಂದ ದೂರವಾಗುತ್ತಾರೆ.

**೯. ಮನಸ್ಸಿನ ರಕ್ಷಣಾ ತಂತ್ರಗಳು :** ಕಷ್ಟ ನಷ್ಟ, ನೋವು, ನಿರಾಶೆ, ಅತೃಪ್ತಿ ಒತ್ತಡಗಳಿಗೆ ಒಳಗಾದಾಗ ಮನಸ್ಸು ಅವುಗಳನ್ನು ನಿಭಾಯಿಸಲು ಅನೇಕ ರಕ್ಷಣಾ ತಂತ್ರಗಳನ್ನು ಬಳಸುತ್ತದೆ. ಅವುಗಳಲ್ಲಿ ಕೆಲವು ವ್ಯಕ್ತಿ-ವ್ಯಕ್ತಿ ಸಂಬಂಧಗಳಿಗೆ ಮಾರಕವಾಗುತ್ತವೆ. ಉದಾ :

ಅ. ಸ್ಥಳಾಂತರ : ಒಬ್ಬರ ಮೇಲಿನ ಸಿಟ್ಟನ್ನು ಇನ್ನೊಬ್ಬರ ಮೇಲೆ ವರ್ಗಾಯಿಸುವುದು. ಉದಾ: ತಾಯಿ ಅಥವಾ ಅಕ್ಕನ ಮೇಲಿನ ಸಿಟ್ಟನ್ನು ಗಂಡ, ಹೆಂಡತಿಯ ಮೇಲೆ ತೋರಿಸಬಹುದು. ಗಂಡನ ಮೇಲಿನ ಸಿಟ್ಟನ್ನು ಹೆಂಡತಿ, ಅತ್ತೆ ಮಾವಂದಿರ ಮೇಲೆ ಮಕ್ಕಳ ಮೇಲೆ ಪ್ರಕಟಿಸಬಹುದು.

ಆ. ದೂರುವುದು : ತನ್ನ ಕೊರತೆ-ನ್ಯೂನತೆಗಳನ್ನು ಒಪ್ಪಿಕೊಳ್ಳದೆ, ವಿಫಲತೆಗೆ ವ್ಯಕ್ತಿ ಇತರರನ್ನು ದೂರಿ, ಆಕ್ಷೇಪಿಸುವುದು.

ಇ. ನಿರಾಕರಿಸುವುದು : ಕಟು ಸತ್ಯವನ್ನು ಒಪ್ಪಿಕೊಳ್ಳಲಾಗದೇ, ಅದನ್ನು ನಿರಾಕರಿಸುವುದು.

ಈ. ಕಲ್ಪನೆಗಳು : ಕಲ್ಪನಾಲೋಕದಲ್ಲಿ ವಿಹರಿಸುತ್ತಾ, ವಾಸ್ತವಿಕ ಸಂಗತಿಗಳನ್ನು ಉದಾಸೀನ ಮಾಡುವುದು.

ಉ. ತಾರ್ಕೀಕರಣ : ತನ್ನ ತಪ್ಪು, ಬೇಜವಾಬ್ದಾರಿಗಳನ್ನು ತರ್ಕಬದ್ಧವಾಗಿ ಸರಿ ಎಂದೇ ವಾದಿಸುವುದು ಇತ್ಯಾದಿ.

ಕೆಲವು ರಕ್ಷಣಾ ಕ್ರಮಗಳು ಸಂಬಂಧಗಳನ್ನು ಉತ್ತಮಪಡಿಸಬಹುದು. ಉದಾ : ಸದಭಿರುಚಿಯ ಹಾಸ್ಯ, ಸೇವಾ ಮನೋಭಾವ, ತಪ್ಪಿದ ಒಂದು ಗುರಿಯ ಬದಲು ಬದಲಿ ಗುರಿಗಳನ್ನು ಸಾಧಿಸಿ ಸಂತೋಷಪಡುವುದು ಇತ್ಯಾದಿ.

### ವ್ಯಕ್ತಿ-ವ್ಯಕ್ತಿ ಸಂಬಂಧವನ್ನು ಉತ್ತಮಪಡಿಸಿಕೊಳ್ಳಲು ೧೨ ಸೂತ್ರಗಳು

RELATIONSHIP ಪದದಲ್ಲಿರುವ ಒಂದೊಂದು ಅಕ್ಷರ ಒಂದೊಂದು ಸೂತ್ರವನ್ನು ನಮಗೆ ಕೊಡುತ್ತದೆ.

೧. R = Respect others : ಯಾವ ಭೇದ ಭಾವವೂ ಮಾಡದೇ, ದೊಡ್ಡವರು-ಚಿಕ್ಕವರು, ಬಡವ-ಶ್ರೀಮಂತ ಎನ್ನದೆ ಎಲ್ಲರಿಗೆ ಗೌರವ ಕೊಡಬೇಕು.

೨. E = Expect less : ಇತರರಿಂದ ಆದಷ್ಟು ಕಡಿಮೆ ನಿರೀಕ್ಷೆ ಮಾಡಿ. ಇತರರು ಕೊಟ್ಟಿದ್ದಷ್ಟಕ್ಕೆ ತೃಪ್ತಿ ಇರಲಿ.

೩. L = Language : ನಾವು ಉಪಯೋಗಿಸುವ ಭಾಷೆ ಚೆನ್ನಾಗಿರಲಿ. ಮಾತು ಬಲ್ಲವನಿಗೆ ಜಗಳವಿಲ್ಲ. ಮೃದು ಮಾತು ಸ್ನೇಹವನ್ನು ಸಂಬಂಧವನ್ನು ವೃದ್ಧಿಸುತ್ತದೆ.

೪. A= Appreciate others : ಇತರರ ಒಳ್ಳೆಯ ಗುಣ, ಸಾಧನೆ, ಕೆಲಸಗಳನ್ನು ಶ್ಲಾಘಿಸಿ. ಅನಗತ್ಯ ಟೀಕೆ-ಟಿಪ್ಪಣಿಗಳನ್ನು ಮಾಡಲೇಬೇಡಿ.

೫. T = Team work and Take less ; give more : ಜೀವನದ ಘಟನೆಗಳನ್ನು, ಯಾವುದೇ ಕೆಲಸ ಕರ್ತವ್ಯಗಳನ್ನು ಮನೆಯವರೊಂದಿಗೆ ಸೇರಿ ಮಾಡಿ. ಉದ್ಯೋಗ ಸ್ಥಳದಲ್ಲೂ 'ಟೀಮ್ ಸ್ಪಿರಿಟ್' ಇರಲಿ. ಇತರರಿಗೆ ಕೊಡುವುದನ್ನು ಹೆಚ್ಚಿಸಿ.

೬. I = Insult nobody : ಯಾರನ್ನೂ ಅವಮಾನ ಮಾಡಬೇಡಿ. ಅವಮಾನಿತಗೊಂಡ ವ್ಯಕ್ತಿ ದುರ್ಬಲನಾದರೂ, ಅಪಾಯಕಾರಿಯಾಗಬಲ್ಲ.

೭. O = Open mind : ಮುಕ್ತ ಮನಸ್ಸು ಇರಲಿ. ಇತರರ ಅಭಿಪ್ರಾಯ ಅನಿಸಿಕೆಗಳನ್ನು ಕೇಳಿಕೊಳ್ಳಿ. ನಿಧಾನವಾಗಿ ಒಲಿಸಿಕೊಂಡು ಅವರ ಅಭಿಪ್ರಾಯಗಳನ್ನು ಬದಲಿಸಿ, ನಿಮ್ಮದನ್ನು ಒಪ್ಪಿಕೊಳ್ಳುವಂತೆ ಮಾಡಿ. ಆಗದಿದ್ದರೆ ಅಗ್ರೀ ಟು ಡಿಸಗ್ರೀ. ಭಿನ್ನಾಭಿಪ್ರಾಯ ಅಪರಾಧವೇನಲ್ಲ ಅಲ್ಲವೇ ?

೮. N = Negative approach & attitude : ಬೇಡ. ಇತರರ ಕೊರತೆ, ನ್ಯೂನತೆ, ವಿಫಲತೆಗಳನ್ನೇ ಎತ್ತಿ ಆಡಬೇಡಿ. ಇತರರು ಒಳ್ಳೆಯವರಲ್ಲ ಎನ್ನುವ ಭಾವನೆ ಬೇಡ.

೯. S = Support : ಕಷ್ಟ, ನಷ್ಟ ಸಮಸ್ಯೆಗಳ ಸಮಯದಲ್ಲಿ ಇತರರಿಗೆ ನೆರವಾಗಿ. ನಿಸ್ವಾರ್ಥದಿಂದ ಸಹಾಯ ಮಾಡಿ.

೧೦. H = Hobbies : ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಿ. ನಿತ್ಯ ಅದಕ್ಕಾಗಿ ಸ್ವಲ್ಪ ಸಮಯವನ್ನು ಮೀಸಲಾಗಿಡಿ.

೧೧. I = Improve your communication : ಮಾತು, ಬರಹ, ಇತ್ಯಾದಿ ಸಂವಹನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಿ. ನಿಮ್ಮ ಕಾರ್ಯಕ್ರಮ ಚಟುವಟಿಕೆಗಳ ಬಗ್ಗೆ ನಿಮ್ಮವರಿಗೆ ಮಾಹಿತಿ ನೀಡಿ.

೧೨. P = Punishment as a last weapon : ಶಿಕ್ಷೆಯನ್ನು ಕಟ್ಟಕಡೆಯ ಅಸ್ತ್ರವನ್ನಾಗಿ ಬಳಸಿ. ನಿಮ್ಮವರನ್ನು ಇತರರ ಮುಂದೆ ಹೀನಾಯವಾಗಿ ಎಂದೂ ಶಿಕ್ಷಿಸಲು ಪ್ರಯತ್ನಿಸಬೇಡಿ.

**ಡಾ|| ಸಿ. ಆರ್. ಚಂದ್ರಶೇಖರ್**
ಟೈಪ್-೫, ಬ್ಲಾಕ್ ೨, ಕ್ವಾರ್ಟರ್ಸ್ ನಂ. ೧೫, ನಿಮ್ಹಾನ್ಸ್ ಕ್ವಾರ್ಟರ್ಸ್, ಬೆಂಗಳೂರು- ೫೬೦ ೦೨೯

## ಕೀಲವಿಲ್ಲದ ತೇರು

ಯಾವ ಮುಖ ಹೊತ್ತು
ಬರಲಿ ಹೇಳು
ಸುತ್ತು ಕುಣಿಯುವ ಬೇತಾಳ
ಮೆಟ್ಟಿ ದಾಟುವುದು ಹೇಗ್ಹೇಳು ಊರ ಗಡಿಯ
ನಮ್ಮೂರ ತೇರಂತೆ
ತುಂಬಿದ್ಹೊಟ್ಟೆ ತುಳುಕಿಸುತ
ತಡೆದು ನಡೆವಾಗ ಹರಿದ ಬಳ್ಳಿ
ಬಳ್ಳಿಯನೆಲ್ಲ ಎಳೆದು
ಕಟ್ಟಿದೆ ನಿನ್ನ ಹರ್ಷ ರಥಕೆ
ಭಾರ ತಾಳದ ಹೆಜ್ಜೆ
ನೋಟದ ಗುರಿ ತಿಳಿಯದೆ ಹಿಂದಡಿ
ಇಡುತ ಸಾಗಿದವು ಮುಂದೇ



ಅಲ್ಲಿದ್ದರೂ ನೀನು
ಇಲ್ಲಾಡುವ ಮಾತು ದಿನಕೆ ಹೆಚ್ಚಾಗಿ
ಸೆಳೆತ ಹುಚ್ಚಾಗಿ
ಕಂಡವರ ಅಣಕಕ್ಕೆ
ಹುಸಿನಗೆ ನಸು ಮುನಿಸು
ಸಾವರಿಸಿ ಸಾಗಿತ್ತು
ಕೀಲವಿಲ್ಲದ ತೇರು ಚಲ್ಲಾಟ
ಚಟಪಟಿಕೆ ಸುದ್ದಿ ತಂದಿತು ಗಾಳಿ
ತಂತಿ ಮೈ ದುಂಬಿ
ಕೇಳಿ ಕುಸಿಯಿತು ಜೀವ
ಮುರಿದ ಮಂಚದಲಿ ಅಂಕುರಿಸಿದ ಬೀಜ
ಅಮ್ಮನ ತೊಡೆಯಲ್ಲಿ ಅಮ್ಮನೊಡಲಿನದು
ಮತ್ತೆ ಮಣ್ಣಿನಕಡೆಗೇ; ಪುಣ್ಯ-ಪಾಪದ ಕಥೆ
ನೆನಪಾಗುತಿವೆ ಮತ್ತೆ, ನಲಿವ ನಾಲಿಗೆ
ಹೊತ್ತ ಮುಖ !!

**ಶಶಿಧರ ತೋಡಕರ**
c/o. ಎಂ.ಸಿ. ಹಿಪ್ಪರಗಿ, ೪ನೇ ಅಡ್ಡರಸ್ತೆ, ಕಲ್ಯಾಣನಗರ, ಧಾರವಾಡ-೭

# ಸರ್ವಮಾನ್ಯ ಜೇನುತುಪ್ಪ



*ಜೇನು ನೊಣಗಳು ಅನಾದಿಕಾಲದಿಂದಲೂ ಮಧುರವಾಗಿ ಜೇನುತುಪ್ಪವನ್ನು ನಮಗೆ ಒದಗಿಸುತ್ತಾ ಬಂದಿವೆ. ಜೇನುತುಪ್ಪದಲ್ಲಿ ಹಲವಾರು ರೋಗನಿವಾರಕ ಹಾಗೂ ಪೌಷ್ಟಿಕ ಗುಣಗಳಿವೆ. ಆಯುರ್ವೇದ ಮತ್ತು ಯುನಾನಿ ವೈದ್ಯಕೀಯ ಪದ್ಧತಿಗಳಲ್ಲಿ ಇದಕ್ಕೆ ಪ್ರಮುಖ ಸ್ಥಾನವಿದೆ.*

ಅನಾದಿಕಾಲದಿಂದಲೂ ಜೇನು ನೊಣಗಳು ಮಧುರವಾದ ಜೇನುತುಪ್ಪವನ್ನು ನಮಗೆ ಒದಗಿಸುತ್ತಾ ಬಂದಿವೆ. ಜೇನುತುಪ್ಪ ಔಷಧೀಯ ಗುಣಗಳಿಗಾಗಿ ಹೆಸರು ಪಡೆದಿದೆ. ಇದರಲ್ಲಿ ಶೇ. ೮೦ರಷ್ಟು ಸಕ್ಕರೆಯ ಅಂಶವಿದೆ. ಸಕ್ಕರೆಯ ಅಂಶದಲ್ಲಿ ಶೇ. ೩೮ರಷ್ಟು ಲೆವ್ಯುಲೋಸ್, ಶೇ. ೨೧-೨೮ರಷ್ಟು ಡೆಕ್ಸ್ಟ್ರೋಸ್, ಮಾಲ್ಟೋಸ್ ಮತ್ತು ಇತರ ಸಕ್ಕರೆಯ ಅಂಶಗಳು ಶೇ. ೯ರಷ್ಟಿವೆ. ಕಿಣ್ವಗಳು ಮತ್ತು ವರ್ಣ ದ್ರವ್ಯಗಳು ಶೇ. ೨ರಷ್ಟಿವೆ. ಶೇ.೧ ಭಾಗ ಭಸ್ಮ ಮತ್ತು ಶೇ. ೧೮ರಷ್ಟು ನೀರು ಸೇರಿವೆ.

ಆಯುರ್ವೇದ ಮತ್ತು ಯುನಾನಿ ವೈದ್ಯಕೀಯ ಪದ್ಧತಿಗಳಲ್ಲಿ ಜೇನುತುಪ್ಪಕ್ಕೆ ಪ್ರಾಮುಖ್ಯ ಸ್ಥಾನ. ಜೇನುತುಪ್ಪಕ್ಕೆ ವಿರೇಚಕ, ಪೂತಿನಾಶಕ ಮತ್ತು ಉಪಶಾಮಕ ಗುಣಗಳಿವೆ. ಇದು ರಕ್ತದ ಹಿಮೋಗ್ಲೋಬಿನ್ ಉತ್ಪಾದನೆಯನ್ನು ವೃದ್ಧಿಸುತ್ತದೆ. ಶೀತ, ಕೆಮ್ಮು, ಜ್ವರಗಳನ್ನು ದೂರವಿರಿಸುತ್ತದೆ. ರಕ್ತವನ್ನು ಶುದ್ಧೀಕರಿಸುವುದಲ್ಲದೆ ನಾಲಿಗೆ ಮತ್ತು ಕರುಳಿನ ಹುಣ್ಣುಗಳನ್ನು ಗುಣಪಡಿಸುತ್ತದೆ. ಹೃದಯ ರೋಗಿಗಳು, ಅಜೀರ್ಣ ಮತ್ತು ಪೋಷಣೆಯಿಲ್ಲದವರು, ಸಿಹಿಮೂತ್ರ ರೋಗಿಗಳು ದಿನನಿತ್ಯ ಜೇನುತುಪ್ಪ ಸೇವಿಸುವುದರಿಂದ ಆರೋಗ್ಯ ಉತ್ತಮವಾಗುವುದುಂಟು. ಟೈಫಾಯ್ಡ್, ನ್ಯುಮೋನಿಯ, ಆಮಶಂಕೆಗಳಿಗೆ ಕಾರಣವಾಗುವ ರೋಗಾಣುಗಳನ್ನು ಜೇನುತುಪ್ಪ ನಾಶಮಾಡುತ್ತದೆ ಎಂದು ಹೇಳಲಾಗಿದೆ.

ಕೆಲಸಗಾರ ಜೇನು ನೊಣಗಳ ದೇಹದಲ್ಲಿರುವ 'ಫೆರಿಂಜಯಲ್' ಗ್ರಂಥಿಗಳಿಂದ 'ರಾಜಶಾಹಿ' ಎಂಬ ವಿಶೇಷ ಆಹಾರ ಉತ್ಪತ್ತಿಯಾಗುತ್ತದೆ. ಮುಂದೆ ರಾಣಿ ಜೇನು ನೊಣವಾಗಿ ಬೆಳೆಯುವ ಮರಿಗಳಿಗೆ ಮಾತ್ರ ರಾಜಶಾಹಿಯನ್ನು ನೀಡಲಾಗುತ್ತದೆ. ರಾಜಶಾಹಿಯಲ್ಲಿ 'ಪೆಂಟತೋನಿಕ್' ಮತ್ತು 'ಬಯೋಟಿನ್' ಜೀವಸತ್ವಗಳ ಅಂಶ ಅಧಿಕವಿರುತ್ತದೆ. ಇದರಲ್ಲಿರುವ 'ಬಯೋಪ್ಟೆರಿನ್' ಎಂಬ ಅಂತಸ್ಸ್ರಾವ ರಾಣಿ ಜೇನು ನೊಣದ ಬೆಳವಣಿಗೆಗೆ ಕಾರಣವಾಗಿದೆ. ರಾಜಶಾಹಿ ಸೌಂದರ್ಯ ಪ್ರಸಾದನಗಳೊಂದಿಗೂ ಉಪಯೋಗಿಸಲ್ಪಡುತ್ತದೆ.

ಜೇನು ನೊಣಗಳ ಚುಚ್ಚುವ ಕೊಂಡಿ ಒಂದು ಮಾರ್ಪಾಡಾದ ಅಂಡನಾಳ. ಆಗಲೇ ಕೊಂದ ಜೇನು ನೊಣಗಳ ಚುಚ್ಚುವ ಕೊಂಡಿಗಳಿಂದ ತಯಾರಿಸಿದ 'ಎಪಿಯಂ' ಎಂಬ ವಸ್ತು ಸಂಧಿವಾತಕ್ಕೆ ಉತ್ತಮ ಔಷಧಿ. ಸಾಕಷ್ಟು ಆಘಾತಕ್ಕೊಳಪಡಿಸಿದ ಜೇನು ನೊಣಗಳನ್ನು ಮದ್ಯಸಾರದಲ್ಲಿ ಮುಳುಗಿಸಿಟ್ಟು, ಸಾಕಷ್ಟು ಸಮಯದ ನಂತರ ಈ ದ್ರಾವಣವನ್ನು ಶುದ್ಧೀಕರಿಸಿ ಗಂಟಲುರೋಗ, ಜ್ವರ, ಜಲೋದರ, ಮೂತ್ರಕೋಶದ ತುರಿಕೆ ಮೊದಲಾದವುಗಳ ನಿವಾರಣೆಗಾಗಿ ಉಪಯೋಗಿಸಲ್ಪಡುತ್ತದೆ.

ಕೆಲಸಗಾರ ಜೇನು ನೊಣಗಳ ಹೊಟ್ಟೆಯ ಭಾಗದಲ್ಲಿರುವ ಗ್ರಂಥಿಗಳಲ್ಲಿ ಜೇನುಮೇಣ ಉತ್ಪತ್ತಿಯಾಗುತ್ತದೆ. ಜೇನುಮೇಣ ಸೌಂದರ್ಯ ವರ್ಧಕಗಳ ತಯಾರಿಕೆಯಲ್ಲಿ, ಪೈಂಟ್ - ಪಾಲಿಶ್‌ಗಳ ಉತ್ಪಾದನೆಯಲ್ಲಿ, ಪ್ರಯೋಗಶಾಲೆಯಲ್ಲಿ ಉಪಯೋಗಿಸಲ್ಪಡುವ ಒಂದು ಬಹೂಪಯೋಗಿ ವಸ್ತು.

ಜೇನುತುಪ್ಪ ಒಂದು ವಿಶಿಷ್ಟ ನೈಸರ್ಗಿಕ ಆಹಾರ. ಜೇನು ನೊಣಗಳು ಶ್ರಮಪಟ್ಟು ಹೂಗಳಿಂದ ಮಕರಂದವನ್ನು ಸಂಗ್ರಹಿಸಿ ಅದನ್ನು ಜೇನುತುಪ್ಪವಾಗಿ ಪರಿವರ್ತಿಸಿ ತಮ್ಮ ಮತ್ತು ಸಂಸಾರದ ಉಪಯೋಗಕ್ಕಾಗಿ ಜೋಪಾನವಾಗಿಡುತ್ತವೆ. ಮನುಷ್ಯನ ದೇಹಕ್ಕೆ ಉಪಯುಕ್ತವಾದ ಸುಮಾರು ೮೦ ವಸ್ತುಗಳು ಜೇನುತುಪ್ಪದಲ್ಲಿವೆ ಎಂದು ಹೇಳಲಾಗಿದೆ. ಜೇನುತುಪ್ಪದ ದಿನನಿತ್ಯದ ಸೇವನೆ ಮನುಷ್ಯನನ್ನು ಆರೋಗ್ಯವಂತನೂ, ದೀರ್ಘಾಯುವೂ ಹಾಗೂ ಬುದ್ಧಿವಂತನನ್ನಾಗಿ ಮಾಡಬಲ್ಲದು.

**ಪಿ. ಶಿವರಾಮ ರೈ**
೧೬, ಗುರುಪ್ರಸಾದ್ ಲೇನ್, ಕಂಕನಾಡಿ, ಮಂಗಳೂರು - ೫೭೫ ೦೦೨

## ಬೆಳ್ಳಿ ರೆಕ್ಕೆಯ ಹಕ್ಕಿ

ಮಂಜುದೂದರೆ ವಜನು ಕುಂತ
ಧೂಳು ಏಳದ ಬೀದಿ ಕಸಗುಡಿಸುತಿದ್ದವನ
ಹೊತ್ತಾರೆ ಹೊತ್ತಲ್ಲಿ ಕಸ ಮುಸುರೆ
ಬೆಳಗಲು ಕದ ತೆರೆದು ಬಂದೋರು.

ಕೆಂಬಾರಿನೊಳಗಾಸಿ ಬಂದಂತೆ ಕಂಡವನ
ಕೇಳಿದರು - ಯಾತಟ್ಟು ಯಾವೂರು ಕೇರಿಯೋ ?
ಊರು ಮುಚ್ಚಿದ್ದ ಕತ್ತಲಿನ ಕದ ತೆರೆದು
ಬಂದೋನು ನೀನೆಯೋ ಹಾಲಕ್ಕಿ ಜೋಡಿ ಕೂಗಿದಾಗ !

ದಿಕ್ಕು ದಿಕ್ಕಿಗೆ ಕಣ್ಣ ಬೆಟ್ಟು ಮಾಡಿ
ಕೈಮುಗಿದು ಬಾನಿಗೆ ಗೋಣೆತ್ತಿದ
ಕಿಸೆಯಿಂದ ಹಿಡಿ ತುಂಬೆ ತೆಗೆದಿತ್ತು
ಕಸದ ಗುಡ್ಡೆಯನ್ನೆತ್ತಿ ತಿಪ್ಪೆಗೆಸೆದ.

ನೀರಿದ್ದ ನೆಲದಲ್ಲಿ ಶಿವನಿತ್ತ ತುತ್ತಲ್ಲಿ
ಮುಕ್ಕಾಗದ ಅವನ ಪಾಲಿತ್ತು
ಕೊಟ್ಟವರ ಹೆಸರಲ್ಲಿ ಬೆಳಗು ಬೈಗಲ್ಲಿ
ಗುಡಿ ತೊಳೆದು ಹೂ ದೀಪ ಮುಡಿಸುತಿದ್ದ.

ಕೋಶ ಬಿಚ್ಚಿ ಆಡುವ ಮಾತು
ನೆಂದ ನೆಲದ ಗರಿಕೆ ಚಿಗುರು



ಶಿವನ ಮುಟ್ಟುವ ನಂದಿಕೋಲು
ತೇದು ತೆಗೆದ ಗಂಧಗಮಲು.

ಕೋಳಿ ಕೂಗಿದ ಒಡನೆ ಕಿನ್ನರಿಯ ಎದೆಗೆ
ಫಲವಾದ ಜಂಗಮರ ಸೊಲ್ಲಿಟ್ಟು ನುಡಿವ
ಅಕ್ಕಿ ತಾರೋ ಜೋಗಿ ಅಕ್ಕಿ ತಾರೋ
ಹಕ್ಕಿ ಹಾರೋ ಮುಂಚೆ ಅಕ್ಕಿ ತಾರೋ.

ಅಂದು ಮುಗಿದೊಡನೆ ಹಾಡು
ಎದೆಗೆ ಬರಬೇಕಿದ್ದ ಮೌನ
ತನ್ನೊಳಗೆ ತಾನೇ ತಾನಾದ
ಕಣ್ಣಿನಾಚೆಗು ಉಳಿದ ಬಯಲ ದೂರದಲಿತ್ತು.

ಬಂದ ದಾರಿಯೇ ಹೋಗೋ ದಾರಿಯೋ
ಅಲ್ಲಿಗೆ. ಅದು ಬೇರೆ ಇದು ಬೇರೆಯೊ ?
ಕತ್ತಲೊಳಗೆ ಹುಟ್ಟಿ ಬೆಳ್ಳಿ ರೆಕ್ಕೆಯ ಹಕ್ಕಿ
ಹಾಡಿತು - ಬಯಲಿಗೆ ಹೋಗಲು
ದಾರಿಯ ಚಿಂತೆ ಯಾಕೋ ?

ಸ. ರಘುನಾಥ

**ಹಣತೆ** (ಅಭಿನಂದನ ಗ್ರಂಥ)

*ಸಂ|| ಡಿ. ಎಸ್. ನಾಗಭೂಷಣ ಮತ್ತು ಇತರರು*

**ಪುಟ : 646** **ಬೆಲೆ : ರೂ. 300**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲುರಸ್ತೆ, ಬಳ್ಳಾರಿ - 583 103



*ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆ ನೀಡಿದ ಪ್ರತಿಭಾ ಸಂಪನ್ನ ಕವಿ ಜಿ. ಎಸ್. ಎಸ್. ಅವರಿಗೆ ಅವರ ಅಭಿಮಾನಿಗಳಿಂದ ನೀಡಿದ ಬಹುಮಾನ ಈ ಅಭಿನಂದನ ಗ್ರಂಥ. ಹಣತೆಯಿಂದ ಹಣತೆ ಹಚ್ಚಿಕೊಳ್ಳುವಂತೆ ಅವರ ಪ್ರಭಾವಲಯಕ್ಕೆ ಬಂದ ಎಲ್ಲರಲ್ಲೂ ಶ್ರೇಷ್ಠ ವ್ಯಕ್ತಿತ್ವ ರೂಪಿಸುವ ಸಾಮರ್ಥ್ಯವಿರುವುದು ಅವರ ಹಿರಿಮೆ. ಈ ಹಿರಿಯ ಸಾಹಿತಿಯನ್ನು ಹತ್ತಿರದಿಂದ ಬಲ್ಲ ಎಪ್ಪತ್ತಕ್ಕೂ ಹೆಚ್ಚು ಜನ ಅವರ ವ್ಯಕ್ತಿತ್ವದ ಪರಿಚಯ ನೀಡಿದ್ದಾರೆ.*

**ಶೋಭನಾ** (ಕವಿತೆಗಳು)

*ಮೋಹನ ಕುರುಡಗಿ*

**ಪುಟ : 86** **ಬೆಲೆ : ರೂ. 40**

**ಗೀತಾಂಜಲಿ ಪ್ರಕಾಶನ,** ತೋಟಗಂಟಿ, ಕೋಡಿಕೊಪ್ಪ ಅಂಚೆ, ಗದಗ ಜಿಲ್ಲೆ



*ಈ ಸಂಕಲನದಲ್ಲಿ ಕೆಲವೊಂದು ಕಿರು ಕವಿತೆಗಳಿವೆ. ಜೀವನದ ಒಂದು ಘಟ್ಟದಲ್ಲಿ ಪ್ರೀತಿ-ಪ್ರೇಮ ಎಂದು ಕನವರಿಸಿ ಹಾತೊರೆಯುವ ಮಾನವ ಸಹಜ ಭಾವನೆಗಳು ಹಾಡುಗಳಾಗಿ ರೂಪುಗೊಂಡಿವೆ. ಹರೆಯದ ಆಸೆ-ಆಕಾಂಕ್ಷೆಗಳಿಗೆ ಹಕ್ಕಿಗಳಂತೆ ಮೇರೆಯೇ ಇಲ್ಲದ ಆಕಾಶವನ್ನೊಮ್ಮೆ ಸುತ್ತುವ ಬಯಕೆ. ಸ್ವಚ್ಛಂದ ಬದುಕೊಂದನ್ನು ಆರಿಸಿಕೊಳ್ಳಲು ತವಕಿಸುವ ಮನುಷ್ಯನ ಮನಸ್ಸೊಂದು ಇಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತ ಅಲೆದಾಡುತ್ತಿದೆ.*



**ಕಾರಂತರ ಕಾದಂಬರಿಗಳು** (ವಿಮರ್ಶೆ)

*ಮಾಧವ ಕುಲಕರ್ಣಿ*

**ಪುಟ : 132** **ಬೆಲೆ : ರೂ. 45**

**ತನುಮನು ಪ್ರಕಾಶನ,** 'ತೃಪ್ತಿ', 42, 'ಜ' ಬ್ಲಾಕ್, 3ನೇ ತಿರುವು, ರಾಮಕೃಷ್ಣನಗರ, ಮೈಸೂರು - 570 023

*ಪ್ರಚಾರ-ಪ್ರಶಸ್ತಿಗಳ ಭರಾಟೆಯ ನಡುವೆ ಇರುವ ಸಾಹಿತ್ಯಾವಲೋಕನ ಹಾಗೂ ಸದ್ದಿಲ್ಲದ ಎಲೆಮರೆಯ ಹೂವಿನಂಥ ಸಾಹಿತ್ಯದ ತುಲನೆ – ಇಂದಿನ ವಿಮರ್ಶಕರಿಗಿರುವ ಬಹುದೊಡ್ಡ ಎರಡು ಗೊಂದಲಗಳು. ಸಾಹಿತ್ಯದಲ್ಲಿ ಮೌಲ್ಯ-ಚಿಂತನೆಗಳ ಪ್ರತಿಪಾದನೆ ಮಾಡಿದ ಕಾದಂಬರಿಕಾರ ತನ್ನ ಪಾತ್ರಗಳ ಮೂಲಕ ಅವುಗಳ ವಿಕಾಸಕ್ಕೆ ಖಚಿತ ಧ್ವನಿ ನೀಡಲು ಬದ್ಧನಾಗಿರಬೇಕಾಗುತ್ತದೆ. ಇವನ್ನು ಗಮನದಲ್ಲಿಟ್ಟು ಕಾರಂತರ 14 ಕಾದಂಬರಿಗಳ ಅಪರೂಪದ ವಿಮರ್ಶೆ ಇಲ್ಲಿದೆ.*

**ಅನಾವರಣ** (ಅಂಕಣ ಬರಹಗಳು)

*ಸಾರಾ ಅಬೂಬಕ್ಕರ್*

**ಪುಟ : 92** **ಬೆಲೆ : ರೂ. 36**

**ಚಂದ್ರಗಿರಿ ಪ್ರಕಾಶನ,** 2-21-1631/2, ಮೈಕ್ರೋವೇವ್ ಸ್ಟೇಷನ್ ರಸ್ತೆ, ಮಂಗಳೂರು - 575 006



*ಬದುಕಿನಲ್ಲಿ ಸ್ತ್ರೀಯರಿಗೂ ಪುರುಷರಷ್ಟೇ ಸಮಾನ ಅವಕಾಶ-ಹಕ್ಕುಗಳಿರಬೇಕೆಂದು ಒತ್ತಾಯಿಸುತ್ತಾ, ಸ್ತ್ರೀಯರ ಮೇಲಿನ ದೌರ್ಜನ್ಯದ ವಿರುದ್ಧ ಪ್ರತಿಭಟಿಸುತ್ತಾ ಬಂದ ಸಾರಾ ಅವರ ಚಿಂತನಶೀಲ ಬರಹ-ಭಾಷಣಗಳ ಸಂಗ್ರಹವಿದು. ಸ್ತ್ರೀಯರ ಕಷ್ಟಕೋಟಲೆಗಳನ್ನು, ಸಮಾಜದಲ್ಲಿ ಹೆಣ್ಣಿನ ಶೋಷಣೆಯ ಅನೇಕಾನೇಕ ಮುಖಗಳನ್ನು ಅವರು ಸಾಹಿತ್ಯದ ಮೂಲಕ ನಮ್ಮ ಕಣ್ಮುಂದೆ ತಂದು ನಿಲ್ಲಿಸಬಲ್ಲರು. ಸಮರ್ಥವಾದ ಸ್ತ್ರೀಪರ ಧ್ವನಿ ಇಲ್ಲಿದೆ.*

**ಹೂತಽದ ಹುಣಸಿ** (ಬೇಂದ್ರೆ ಕಾವ್ಯ ವಿಮರ್ಶೆ)

*ಡಾ|| ಜಿ. ಕೃಷ್ಣಪ್ಪ*

**ಪುಟ : 136** **ಬೆಲೆ : ರೂ. 50**

**ಶ್ರೀರಂಗ ಪ್ರಕಾಶನ,** ನಂ. ಬಿ-22, ಸಿ.ಎಫ್.ಟಿ.ಆರ್.ಐ. ಕಾಲೋನಿ, ಮೈಸೂರು - 570 013




*ಬೇಂದ್ರೆ, ಸಾಹಿತ್ಯ ಅನೇಕರಿಗೆ ಇಂದಿಗೂ ಕಬ್ಬಿಣದ ಕಡಲೆಯೇ. ಕವಿ ಭಾಷೆಯನ್ನು ಅರಿಯಲು ಅಷ್ಟಿಷ್ಟು ಕವಿ ಮನಸ್ಸು ಅಗತ್ಯವಾಗಿ ಇರಬೇಕು. ಸುಲಭವಾಗಿ ಅರ್ಥೈಸಲಾಗದ ಅವರ ಕಾವ್ಯದ ರಸಾನುಭವವನ್ನು, ಪದ-ಪದಗಳಲ್ಲಿ ಹುದುಗಿ ಅಲ್ಲಲ್ಲಿ ಕಣ್ಣಾಮುಚ್ಚಾಲೆಯಾಡುತ್ತಿರುವ ಪದಸಂಪತ್ತನ್ನು ಶ್ರೀಸಾಮಾನ್ಯನಿಗೆ ಅರ್ಥವಾಗುವಂತೆ ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಬೇಂದ್ರೆ, ಕಾವ್ಯ ಓದುವ, ಅಭ್ಯಾಸ ಮಾಡುವ ಎಲ್ಲರಿಗೂ ಈ ಕೃತಿ ಬೇಂದ್ರೆಯವರನ್ನು ಇನ್ನಷ್ಟು ತಿಳಿಸಿಕೊಡಬಲ್ಲುದು.*




**ಬೇರೊಂದು ಮರವೆರಡು**

*ಪ್ರೊ|| ಲಲಿತಾಂಬ ವೃಷಭೇಂದ್ರಸ್ವಾಮಿ*

**ಪುಟ : 186** **ಬೆಲೆ : ರೂ. 60**

**ಪ್ರಸಾದ ಪ್ರಕಾಶನ,** 'ಶಿವಪ್ರಸಾದ', 8ನೇ ಕ್ರಾಸ್, ಕಲ್ಯಾಣನಗರ, ಧಾರವಾಡ

*ಕುಟುಂಬಗಳಲ್ಲಿ ನೆಮ್ಮದಿ-ಸಂತೋಷಗಳು ನೆಲೆಸಲು ಗೃಹಿಣಿಯೋರ್ವಳೇ ಕಾರಣವಲ್ಲ. ಮನೆಯ ಎಲ್ಲ ಸದಸ್ಯರೂ ಹೊಂದಾಣಿಕೆ-ಸಾಮರಸ್ಯ ರೂಢಿಸಿಕೊಳ್ಳಬೇಕಾದ ಮಹತ್ವವನ್ನು ಕಥೆಗಳ ಮೂಲಕ ನಿರೂಪಿಸಲಾಗಿದೆ. ಯಶಸ್ವೀ ಪ್ರಾಧ್ಯಾಪಿಕೆ, ಉತ್ತಮ ಗೃಹಿಣಿಯೂ ಆಗಿರುವ ಲೇಖಕಿ ಇಲ್ಲಿ ಹೆಣೆದಿರುವ ಕಥೆಗಳು ಕಾಲ್ಪನಿಕವಲ್ಲ. ತಾವು ಸಮೀಪದಿಂದ ಗಮನಿಸಿದ ನಮ್ಮ ಸುತ್ತ ಇರುವ ದೈನಂದಿನ ಸಮಸ್ಯೆಗಳೇ ಆಗಿವೆ. ಕಥೆಗಳನ್ನೋದಿ ನಮ್ಮಲ್ಲೂ ಡೊಂಕಿದ್ದರೆ ತಿದ್ದಿಕೊಳ್ಳೋಣ.*



**ತಿಮ್ಮಜ್ಜಿಯ ಮ್ಯಾಗ್ಲುಂಡಿ** (ಗ್ರಾಮ ದರ್ಶನ)

*ಪ್ರಕಾಶರಾಜ್ ಮೇಹು*

**ಪುಟ : 176** **ಬೆಲೆ : ರೂ. 100**

**ಸಿರಿಗಂಧ ಪ್ರಕಾಶನ,** 432, 10ನೇ ತಿರುವು, 18ನೇ ಮುಖ್ಯರಸ್ತೆ, 2ನೇ ಹಂತ, ಜೆ.ಪಿ.ನಗರ, ಬೆಂಗಳೂರು - 560 078

*ಒಂದು ಗ್ರಾಮ್ಯ ಭಾಷೆಯೊಂದಿಗೆ ಮುಗ್ಧ ಜನಪದೀಯ ಬದುಕಿನ ಮಾನವ ಸಹಜ ಚಟುವಟಿಕೆಗಳು, ಒಳ್ಳೆಯ-ಕೆಟ್ಟ ಸಂಗತಿಗಳನ್ನು ತೆರೆದಿಡುತ್ತ, ಮಾತಿಗೆ ನಿಲುಕದ ಸೊಗಸನ್ನು ಸೂಸುತ್ತ ಕಳೆದುಹೋದ ಸಂಸ್ಕೃತಿಯೊಂದನ್ನು ನೆನಪಿಸುತ್ತವೆ. ಒಂದು ಹಳೆಯ ತಲೆಮಾರು ಹೇಗಿತ್ತೆಂಬ ದಾಖಲೆಯೊಂದಿಗೆ ಅಲ್ಲಿ ಹೊಸ ಪೀಳಿಗೆ ಕಾಣುತ್ತದೆ. ಗ್ರಾಮ ಸಮೂಹದಿಂದೆದ್ದ ವಿವಿಧ ಪಾತ್ರಗಳಲ್ಲಿ ಈಗಿನದು ಹೆಚ್ಚೋ ? ಹಳೆಯದೋ ? ತೂಗಿದಾಗ ತಕ್ಕಡಿ ಸಮನಾಗಿ ನಿಲ್ಲುತ್ತದೆ.*

**ನೆರಳಿನಷ್ಟೇ ಕತ್ತಲು** (ಕಥಾ ಸಂಕಲನ)

*ಕ್ಷಿತಿಜ ಬೀದರ್*

**ಪುಟ : 112** **ಬೆಲೆ : ರೂ. 50**

**ನೀಲಕಾವ್ಯ ಪ್ರಕಾಶನ,** ನಂ.3/4, ಮ್ಹಾಳಸಾ ನಿವಾಸ, ಅಬ್ಬಿಗೆರೆ, ಚಿಕ್ಕಬಾಣಾವರ ರಸ್ತೆ, ಬೆಂಗಳೂರು - 560 090




*ಈ ಸಂಕಲನ 15 ಕಥೆಗಳನ್ನೊಳಗೊಂಡಿದ್ದು ವಿವಿಧ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾದಂಥವುಗಳು. ಮಧ್ಯಮ ವರ್ಗದ ಜನರ ಬದುಕಿನ ಪರಿಯನ್ನು ಕಥೆಗಳ ಚೌಕಟ್ಟಿನೊಳಗೆ ತಂದು ಇತ್ತೀಚಿನ ಮಾತಿನ ಶೈಲಿಯೊಂದಿಗೆ ಹೇಳಲಾಗಿದೆ. ಸಾಮಾನ್ಯವಾಗಿ ಇಲ್ಲಿನ ಸಂಭಾಷಣೆ ಪ್ರತಿದಿನದ ಆವರ್ತನ ಸ್ವರೂಪದ ಪರಿಧಿಯಿಂದ ಮೇಲೆದ್ದು ಬರಲಾರದ ಸ್ಥಿತಿಯನ್ನು ಬಿಂಬಿಸುತ್ತಾ ಸಾಗಿದೆ.*

**- ಇಂದಿರಾ ಕುಮಾರಿ**

# ವಿಜ್ಞಾನ ಮತ್ತು ಜ್ಯೋತಿಷ್ಯ

ಬಿ. ಎಂ. ಪ್ರದೀಪ್

ಇಂದು ಜ್ಯೋತಿಷವನ್ನು ವಿಶ್ವವಿದ್ಯಾನಿಲಯಗಳಲ್ಲಿ ಒಂದು ವಿಜ್ಞಾನವಾಗಿ ಅಭ್ಯಸಿಸುವ ಬಗೆಗೆ ಸಾಕಷ್ಟು ವಿವಾದ ಏರ್ಪಟ್ಟಿದೆ. ಈ ನಮ್ಮ ಜಗತ್ತಿನಲ್ಲಿ ವಿಜ್ಞಾನ, ಕಲೆ, ಸಾಹಿತ್ಯ, ಧರ್ಮ ಹೀಗೆ ಹಲವು ದೃಷ್ಟಿಕೋನಗಳಿವೆ. ಇವು ಸಮಾಜದಲ್ಲಿ ತಮ್ಮದೇ ಸ್ಥಾನ ಹೊಂದಿವೆ ಹಾಗೂ ಅವು ಒಂದನ್ನೊಂದು ಪ್ರಭಾವಿಸುತ್ತವೆ. ಯುರೋಪಿನ ಕೈಗಾರಿಕಾ ಕ್ರಾಂತಿಯಿಂದ ಈಚೆಗೆ ವಿಜ್ಞಾನದ ಕೂಸಾದ ತಂತ್ರಜ್ಞಾನದ ಬಳಕೆಯಿಂದ ವಿಜ್ಞಾನದ ಜನಪ್ರಿಯತೆ ಹೆಚ್ಚಿದೆ. ಅಲ್ಲದೆ ಅದು ವಸ್ತುನಿಷ್ಠ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ ಸಹ. ಈ ಸ್ಥಾನಮಾನಕ್ಕೆ ಕಾರಣ ವಿಜ್ಞಾನ ಕಾಲಕಾಲಕ್ಕೆ ಮುತುವರ್ಜಿಯಿಂದ ಪರಿಷ್ಕರಿಸಿ ಕಾಯ್ದುಕೊಂಡು ಬಂದಿರುವ ಅದರ ವಸ್ತುನಿಷ್ಠ ಧೋರಣೆಗೆ ಪೂರಕವಾದ ಅನ್ವೇಷಣಾ 'ಪದ್ಧತಿ' ಎಂದು ಬಹಳಷ್ಟು ವಿಜ್ಞಾನಿಗಳು, ವಿಜ್ಞಾನ ತತ್ವಶಾಸ್ತ್ರಜ್ಞರು ಭಾವಿಸುತ್ತಾರೆ. ಇವರ ಪ್ರಕಾರ ವಿಜ್ಞಾನ ಮಾರ್ಗ ಮಾನವನ ಇತರ ಭೌತಿಕ ಪರಿಕರದಂತೆ, ಒಂದು ಬೌದ್ಧಿಕ ಪರಿಕರ. ಆದರೆ ಕೆಲವರ ಪ್ರಕಾರ ವಿಜ್ಞಾನ ಎಂದರೆ ವಿದ್ಯುಚ್ಛಕ್ತಿ, ಪರಮಾಣು ಬಾಂಬ್ ಮುಂತಾದ ವಿಜ್ಞಾನದ ಕೊಡುಗೆಗಳು ಮಾತ್ರ. ಈ ಕಾರಣಕ್ಕೆ ಅವರಿಗೆ, ವಿಜ್ಞಾನ ಒಳಿತು ಕೆಡುಕುಗಳ ಮಿಶ್ರಣ. ಇದರ ವಿಸ್ತರಣೆಯೇ ವಿಜ್ಞಾನಕ್ಕೆ ಇದಮಿತ್ಥಂ ಎಂಬ ಅಹಂ ಹಾಗೂ ಆಧುನಿಕ ಸಮಾಜದ ಸಮಸ್ಯೆಗಳಿಗೆ ವಿಜ್ಞಾನವೇ ಕಾರಣ ಎಂದು ಆರೋಪಿಸುವ ನಿಲುವು. ವಿಜ್ಞಾನದ ವಾಸ್ತವತೆಯ ಗ್ರಹಿಕೆಗೆ ಇದಮಿತ್ಥಂ ಎಂಬ ಅಹಂ ಆರೋಪಿಸುವ ಬದಲು, ವಿಜ್ಞಾನ ಸಾಧ್ಯತೆಯ ಅರಿವು ಸೂಚಿಸುತ್ತದೆ ಎನ್ನುವುದು ಹೆಚ್ಚು ಸಮಂಜಸ. ಅದೇನೇ ಇರಲಿ, ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ವಿಜ್ಞಾನ, ಸಾಹಿತ್ಯ, ಕಲೆ, ನೀತಿಶಾಸ್ತ್ರ ಹೀಗೆ ವಿಭಿನ್ನ ದೃಷ್ಟಿಕೋನಗಳು ಅಥವಾ ಜ್ಞಾನಶಾಖೆಗಳು ಸಮಾಜಕ್ಕೆ ಅಗತ್ಯ. ಆದರೆ ಇವುಗಳ ಮಧ್ಯೆ ವಿಭಜನೆ ರೇಖೆಯೊಂದು ಅಗತ್ಯವೇ ? ಅಗತ್ಯವೆಂದೇ ಆಯಾ ಜ್ಞಾನಶಾಖೆಗಳ ಬಗೆಗೆ ಕಾಳಜಿ ಇರುವವರು ಭಾವಿಸುತ್ತಾರೆ. ವಿಜ್ಞಾನ ತತ್ವಶಾಸ್ತ್ರಜ್ಞರು ಈ ಬಗೆಗೆ ಆಸಕ್ತಿ ವಹಿಸಿ ವಿವರಣೆಗಳನ್ನು ವಿಜ್ಞಾನ ಹಾಗೂ ವಿಜ್ಞಾನೇತರ ಎಂದು ವಿಭಜಿಸಲು ಮಾನದಂಡಗಳೇನಾದರೂ ಇವೆಯೇ ಎಂದು ಪ್ರಶ್ನಿಸಿಕೊಂಡಿದ್ದಾರೆ.

ವಿದ್ಯಮಾನಗಳ ಬಗೆಗೆ ಸಂಭವನೀಯ ಪ್ರಮೇಯ ಅಥವಾ ಪೂರ್ವ ಸಿದ್ಧಾಂತ ಮಂಡಿಸುವುದು ವಿಜ್ಞಾನದ ಉದ್ದೇಶವಲ್ಲವೆ ? ಪ್ರಮೇಯ ತಾಳೇ ನೋಡಿದ ಮೇಲೆ ಅದನ್ನು ಸ್ವೀಕರಿಸಲಾಗುತ್ತದೆ ಅಥವಾ ತಿರಸ್ಕರಿಸಲಾಗುತ್ತದೆ. ಹೀಗೆ ಸ್ವೀಕರಿಸಲ್ಪಡುವ ಪ್ರಮೇಯ ಈಗಾಗಲೇ ಸ್ಥಾಪಿತ ಸಿದ್ಧಾಂತಗಳಿಗೆ ಸಂಗತವಾಗಿರಬೇಕು ಮತ್ತು ಈಗಾಗಲೇ ತಿಳಿದ ವಾಸ್ತವಾಂಶಗಳಿಗೆ ಹೊಂದಿಕೊಳ್ಳಬೇಕು. ನಂತರವೇ ಅದು ಸಿದ್ಧಾಂತದ ಸ್ಥಾನ ಪಡೆಯುತ್ತದೆ. ಈ ಕಾರಣಕ್ಕೆ ಬಹುಸಂಖ್ಯಾಕ ವಿಜ್ಞಾನ ತತ್ತ್ವಶಾಸ್ತ್ರಜ್ಞರು ವಿಜ್ಞಾನ ಮತ್ತು ವಿಜ್ಞಾನೇತರ ಎಂಬ ವಿಭಜನೆ ರೇಖೆಗೆ ಸಂಗತತೆ ಮತ್ತು ಹೊಂದಿಕೆಗಳನ್ನು ಮಾನದಂಡಗಳು ಎಂದು ಭಾವಿಸುತ್ತಾರೆ. ಫೇಯರ್‌ಬೆಂಡ್ ಇಂತಹ ನಿಯಮಗಳು ಇಲ್ಲ ಎಂದು ವಾದಿಸುತ್ತಾನಾದರೂ ಅವನೂ ವಿಜ್ಞಾನ ಹಾಗೂ ವಿಜ್ಞಾನೇತರ ವಿಭಜನೆಯ ಅವಶ್ಯಕತೆಯನ್ನು ಗುರುತಿಸುತ್ತಾನೆ. ಆದರೆ ಈ ವಿಭಜನೆಯನ್ನು ಆಯಾ ಕಾಲದಲ್ಲಿ ಮರುಪರಿಶೀಲಿಸಬೇಕೆಂದು ಭಾವಿಸುತ್ತಾನೆ. ಪ್ರಕೃತಿಯನ್ನು ಅರ್ಥೈಸುವ ಪ್ರಯತ್ನದಲ್ಲಿ ವಿಜ್ಞಾನವು ತರ್ಕ, ಗಣಿತದಂತಹ ಹಲವು ಬೌದ್ಧಿಕ ಪರಿಕರಗಳನ್ನು ಆನುಷಂಗಿಕವಾಗಿ ರೂಪಿಸಿಕೊಂಡಿದೆ. ಅಲ್ಲದೆ ಬಳಸುವ ಪಾರಿಭಾಷಿಕ ಪದಗಳ ಅಸಂದಿಗ್ಧತೆ ಅಥವಾ ಸ್ಪಷ್ಟತೆ, ಹಲವು ಸ್ಪರ್ಧಾತ್ಮಕ ಪ್ರಮೇಯಗಳ ಮಧ್ಯೆ ಆಯ್ಕೆ ಮಾಡಲು ಆಕ್‌ಹಾಮ್ ರೇಜರ್‌ನಂತಹ ನಿಯಮಗಳನ್ನೂ ರೂಪಿಸಿಕೊಂಡಿದೆ. ಇಂತಹ ಬೌದ್ಧಿಕ ಹತ್ಯಾರಗಳು, ನಿಯಮಗಳು ತಮ್ಮ ವಸ್ತುನಿಷ್ಠತೆಯನ್ನು ಕಾಪಾಡಿಕೊಳ್ಳಲು ಹಾಗೂ ಪ್ರಕೃತಿಯನ್ನು ಸಾಧ್ಯವಾದಷ್ಟು ಹೆಚ್ಚು ನಿಖರವಾಗಿ ಅರ್ಥೈಸಲು ವಿಜ್ಞಾನಕ್ಕೆ ಅಗತ್ಯ ಎಂದು ವಿಜ್ಞಾನಿಗಳು, ವಿಜ್ಞಾನ ತತ್ತ್ವಶಾಸ್ತ್ರಜ್ಞರು ಭಾವಿಸಿದ್ದಾರೆ. ಜ್ಯೋತಿಷವು ವಿಜ್ಞಾನವೇ ಅಲ್ಲವೇ ಎಂದು ನಿರ್ಧರಿಸುವಾಗ ಇಂತಹ ಮಾನದಂಡಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

ಜ್ಯೋತಿಷವನ್ನು ಒಂದು ಜ್ಞಾನಶಾಖೆಯಾಗಿ ಅಭ್ಯಸಿಸಲು ಇರುವ ಮೊದಲ ಸಮಸ್ಯೆಯೆಂದರೆ ಅದನ್ನು ಯಾವ ಜ್ಞಾನಶಾಖೆಯಾಗಿ ಅಧ್ಯಯನ ಮಾಡಬೇಕೆಂಬುದು. ಅಧ್ಯಯನದ ಅನುಕೂಲಕ್ಕಾಗಿ ವಿಜ್ಞಾನವು ವಿಷಯಗಳನ್ನು ವಿಭಜಿಸುತ್ತದೆ. ಹೀಗಾಗಿ ನಮಗೆ ಪ್ರಕೃತಿ ವಿಜ್ಞಾನ ಹಾಗೂ ಸಾಮಾಜಿಕ ವಿಜ್ಞಾನ ಎಂಬ ಎರಡು ಬೃಹತ್ ವಿಭಜನೆಗಳು ಕಾಣಬರುತ್ತವೆ. ಮಾನವನ ಸಮಾಜವು ಪ್ರಕೃತಿಯ ಭಾಗವಲ್ಲ ಎಂದೇನೂ ಇದರ ಅರ್ಥವಲ್ಲ. ಬದಲಾಗಿ, ವಿಜ್ಞಾನ ತಾನು ಯಾವುದನ್ನು ಅಧ್ಯಯನ ಮಾಡುತ್ತದೆಯೋ ಅದರ ಬಗೆಗೆ ಮೂಲ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುವುದು ಸುಲಭವಷ್ಟೆ. ಭೂವಿಜ್ಞಾನದಲ್ಲಿ ಭೂಕಂಪಗಳ ಬಗ್ಗೆ ಅಧ್ಯಯನ ಮಾಡಲಾಗುತ್ತದೆ. ಆದರೆ, ಈ ಭೂಕಂಪ ಮಾನವನ ಮೇಲೆ ಹೇಗೆ ಪರಿಣಾಮ ಮಾಡಿತು, ಉದಾಹರಣೆಗೆ, ಗುಜರಾತ್ ಭೂಕಂಪ ಬೇರೆ ಬೇರೆ ಸಾಮಾಜಿಕ ಸ್ತರಗಳ ಮೇಲೆ ಹೇಗೆ ಪರಿಣಾಮ ಮಾಡಿತು ಎಂಬುದನ್ನು ಭೂ ವಿಜ್ಞಾನದಲ್ಲಿ ಅಧ್ಯಯನ ಮಾಡುವ ಬದಲು ಸಮಾಜಶಾಸ್ತ್ರದಲ್ಲಿ ಅಧ್ಯಯನ ಮಾಡುವುದು ಹೆಚ್ಚು ಅರ್ಥಪೂರ್ಣವಲ್ಲವೆ ? ಹಾಗಾದಾಗ ನಾವು ಆಯಾ ಜ್ಞಾನ ಶಾಖೆಗಳ ಪರಿಧಿಯಲ್ಲಿ ಅವನ್ನು ಅಧ್ಯಯನ ಮಾಡುವುದು ಅನುಕೂಲವಾಗುತ್ತದೆ. ಫಲಜ್ಯೋತಿಷವನ್ನು ಯಾವ ಜ್ಞಾನಶಾಖೆಯಾಗಿ ಅಭ್ಯಸಿಸಬೇಕು ? ಗ್ರಹಗಳಿಗೆ ಸಂಬಂಧಿಸಿದ್ದಾದ್ದರಿಂದ ಖಗೋಳಶಾಸ್ತ್ರದಲ್ಲಿಯೇ ? ಭೂಕಂಪ, ಪ್ರಳಯಗಳನ್ನೂ ಒಳಗೊಂಡು ಹಲವು ಹತ್ತು ಪ್ರಾಕೃತಿಕ ಆಗುಹೋಗುಗಳನ್ನು ಊಹಿಸುತ್ತದೆಯಾದ್ದರಿಂದ ಇನ್ನಾವುದೇ ಪ್ರಕೃತಿ ವಿಜ್ಞಾನದ ಶಾಖೆಯಲ್ಲಿಯೇ ? ಅಥವಾ ವ್ಯಕ್ತಿಗಳ, ದೇಶಗಳ, ಜಗತ್ತಿನ ಸಾಮಾಜಿಕ ಆಗುಹೋಗುಗಳನ್ನು ಊಹಿಸುತ್ತದೆಯಾದ್ದರಿಂದ ಸಮಾಜಶಾಸ್ತ್ರವಾಗಿಯೇ ? ಅದು ಯಾವುದಾದರೂ ಜ್ಞಾನಶಾಖೆಯ ಭಾಗವಾಗಬೇಕು ಎಂದು ಭಾವಿಸಿದಲ್ಲಿ ಆ ಜ್ಞಾನಶಾಖೆಗಳನ್ನು ಒಪ್ಪಿ ಅವು ಆಚರಿಸುತ್ತಿರುವ ಹಲವು ಪರಿಕಲ್ಪನೆಗಳಿಗೆ ಫಲಜ್ಯೋತಿಷ ಸಂಗತವಾಗಿದೆಯೇ ಅಥವಾ ಅವಕ್ಕೆ ಪರ್ಯಾಯವಾದ ಹೆಚ್ಚು ಸಂಗತ ಪರಿಕಲ್ಪನೆಗಳನ್ನು ಕೊಡಲಿಚ್ಛಿಸುತ್ತದೆಯೇ, ಕೊಟ್ಟಿದೆಯೇ ಎನ್ನುವ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಹಾಗಿಲ್ಲದಿದ್ದಲ್ಲಿ ಯಾವುದೇ ಒಂದು ಘಟನೆಗೆ ಕಾರಣ ಏನು ಎಂಬುದರ ಬಗೆಗಿನ ವಿವರಣೆಗಳು ಇಂತಹ ಇತರ ಜ್ಞಾನಶಾಖೆಗಳ ಹಾಗೂ ಫಲಜ್ಯೋತಿಷದ ವಿವರಣೆಗಳ ನಡುವಿನ ವೈರುಧ್ಯಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳುವುದು ? ವಿಜ್ಞಾನದ ವಿವರಣೆಯನ್ನೇ ಅಥವಾ ಜ್ಯೋತಿಷದ ವಿವರಣೆಯನ್ನೇ ?

ವಿಜ್ಞಾನಿಗಳು ಹಲವು ಜ್ಯೋತಿಷದ ನಂಬಿಕೆಗಳು, ಆದಿ ಗ್ರಹಿಕೆಗಳು ತಪ್ಪು, ಬಾಲಿಶ ಎಂದು ತೋರಿಸುತ್ತಾರೆ. ಮೀನ ರಾಶಿಯಲ್ಲಿ ಮಂಗಳವಿದೆ ಎಂದರೇನು ಎಂದು ಪ್ರಶ್ನಿಸುತ್ತಾ ಪ್ಯಾಟ್ರಿಕ್ ಮೂರ್‌ರವರು 'ಯಾವುದೇ ನಕ್ಷತ್ರಗಳಿಗಿಂತ ಸೂರ್ಯ, ಚಂದ್ರ, ಹಾಗೂ ಗ್ರಹಗಳು ಭೂಮಿಗೆ ಹತ್ತಿರವಾಗಿವೆ. ಹೀಗಾಗಿ ಮೀನರಾಶಿಯಲ್ಲಿ ಮಂಗಳವು ಇದೆ ಎಂದು ಹೇಳುವುದು ನಿಮ್ಮ ಬೆರಳೊಂದನ್ನೆತ್ತಿ ಮೋಡಕ್ಕೆ ನೇರವಾಗಿ ಹಿಡಿದು ಮೋಡದಲ್ಲಿ ನನ್ನ ಬೆರಳಿದೆ ಎಂದು ಹೇಳಿದಷ್ಟು ಹುಚ್ಚುತನವಾಗುತ್ತದೆ, ಎಂದಿದ್ದಾರೆ. ರಾಶಿಗಳ ಪರಿಕಲ್ಪನೆ ಹಲವು ಜ್ಯೋತಿರ್ವರ್ಷಗಳಿಂದ ಬೇರ್ಪಟ್ಟಿರಬಹುದಾದ ಹಲವು ನಕ್ಷತ್ರಗಳ ಗುಂಪಿಗೆ ಅವು ಸಮತಲದಲ್ಲಿವೆ ಎಂದು ಭಾವಿಸಿ ಕೊಟ್ಟ ಹೆಸರುಗಳು. ಹಿಂದೆ ನಕ್ಷತ್ರಗಳ ನಡುವಿನ ಅಗಾಧ ದೂರದ ಕಲ್ಪನೆಯಿಲ್ಲದ ಪುರಾತನರು ಹಾಗೆ ಭಾವಿಸಿದ್ದರಷ್ಟೆ. ಹಾಗೆಯೇ ಗ್ರಹಗಳು ಇಂತಹ ರಾಶಿಗಳಲ್ಲಿರುತ್ತವೆ ಎನ್ನುವುದು, ಗ್ರಹಗಳಿಗೆ ಶುಭ, ಅಶುಭ ಮುಂತಾದ ಗುಣಗಳನ್ನು



ಆರೋಪಿಸುವುದು, ಇಂದಿನ ಜ್ಞಾನದ ದೃಷ್ಟಿಯಿಂದ ಬಾಲಿಶ ಪರಿಕಲ್ಪನೆ ಎನಿಸಿಕೊಳ್ಳುತ್ತದೆ. ವಾಸ್ತವತೆಯಲ್ಲಿ ಇದಕ್ಕೆ ಯಾವ ಆಧಾರವೂ ಇಲ್ಲ. ಜ್ಯೋತಿಷ ಶಾಸ್ತ್ರಜ್ಞರು ಈ ಅಭಿಗ್ರಹಿಕೆಗಳ ಸತ್ಯಾಸತ್ಯತೆಯ ಬಗೆಗೆ ವಿವರಣೆಯನ್ನು ಕೊಡಲೆಳಸುವುದಿಲ್ಲ. ಬದಲಾಗಿ ತಮ್ಮ ಕಣಿ ನುಡಿಯುವ ಸಾಮರ್ಥ್ಯದ ಬಗೆಗೆ ಮಾತ್ರ ಹೇಳುತ್ತಾರೆ. ಇಂದಿನ ಜ್ಞಾನಕ್ಕೆ ಸಂಗತವಾಗದ ಅಭಿಗ್ರಹಿಕೆಗಳೇ ಸಾಕು ಅದು ವಿಜ್ಞಾನದ ಸ್ಥಾನಮಾನ ಪಡೆಯಲು ಅನರ್ಹ ಎಂದು ತೋರಿಸಲು ಎಂಬುದು ವಿಜ್ಞಾನಿಗಳ ನಿಲುವು. ಜ್ಯೋತಿಷ ಊಹಿಸಿದ ರೀತಿಯಲ್ಲಿ ಗ್ರಹಗಳು, ನಕ್ಷತ್ರಗಳು ಮಾನವನ ಬದುಕಿನ ಮೇಲೆ ಪ್ರಭಾವ ಬೀರುತ್ತವೆ ಎಂಬುದನ್ನು ವಿಜ್ಞಾನಿಗಳು ಅಲ್ಲಗಳೆಯುತ್ತಾರೆ.

ಒಂದು ವಿದ್ಯಮಾನದ ಬಗೆಗಿನ ವಿವರಣೆಯನ್ನು ಪಡೆಯುವಲ್ಲಿ ವಿಜ್ಞಾನ ಪದ್ಧತಿಯನ್ನು ಅಳವಡಿಸಿಕೊಂಡಲ್ಲಿ 'ಸಂಬಂಧಿತ' ಅವಲೋಕನಗಳಿಗೆ (ದತ್ತಾಂಶಗಳಿಗೆ) ವಿವರಣೆಯಾಗಿ ಪ್ರಮೇಯವನ್ನು ರೂಪಿಸಲಾಗುತ್ತದೆ. ಯಾವುದು 'ಸಂಬಂಧಿತ' ಎಂದು ನಿರ್ಣಯಿಸಲು ಆ ವಿದ್ಯಮಾನದ ಬಗೆಗಿನ ಪೂರ್ವ ಜ್ಞಾನ ಅಗತ್ಯವಾಗುತ್ತದೆ. ಇಲ್ಲಿಯೇ ಈಗಾಗಲೇ ಮಾನ್ಯವಾದ ಸಿದ್ಧಾಂತಗಳು ಪ್ರಸ್ತುತವಾಗುವುದು. ಒಂದೋ ಆ ಸಿದ್ಧಾಂತಗಳ, ವಿಚಾರಣೆಯಲ್ಲಿರುವ ವಿದ್ಯಮಾನದ ಬಗೆಗಿನ, ನಿಲುವುಗಳು ಅಸತ್ಯ, ಅಸಂಗತ ಎಂದು ತೋರಿಸಬೇಕು. ಇಲ್ಲವೆ, ಆ ಸಿದ್ಧಾಂತಗಳಿಗೆ ವಿರೋಧವಾಗದಂತೆ ಅಥವಾ ಸಂಗತವಾಗಿ ಕೊಡಬಯಸುವ ಹೊಸ ಪ್ರಮೇಯ ಇರಬೇಕು. ಈ ಅರ್ಥದಲ್ಲಿಯೇ ವಿಜ್ಞಾನದ ಇಂದಿನ ಲಭ್ಯ ಜ್ಞಾನಕ್ಕೆ ಜ್ಯೋತಿಷದ ಪರಿಕಲ್ಪನೆಗಳು ಸಂಗತವಾಗುವುದಿಲ್ಲ ಮತ್ತು ವಿಜ್ಞಾನ ಇಂದು ನಮ್ಮ ಮುಂದೆ ತೆರೆದಿಟ್ಟ ವಾಸ್ತವತೆಗೆ ಹೊಂದಿಕೆಯಾಗುವುದಿಲ್ಲ.

ಜ್ಯೋತಿಷ ಶಾಸ್ತ್ರಜ್ಞರ ಈ ಭವಿಷ್ಯ ಊಹಿಸುವ ಸಾಮರ್ಥ್ಯ ತಮ್ಮ ವಿರೋಧಿಗಳನ್ನು ಒಪ್ಪಿಸುವಲ್ಲಿ ಸಮರ್ಥವಾಗಿಲ್ಲ. ಹಾಗೆ ಜ್ಯೋತಿಷದ ಭವಿಷ್ಯ ನಂಬಲರ್ಹ ದತ್ತಾಂಶ ಒದಗಿಸಿದಲ್ಲಿ ಅದು ಆಯುರ್ವೇದದಂತಹ ಅನುಭವಜನ್ಯ ಜ್ಞಾನಗಳ ಸ್ಥಾನ ಪಡೆಯ ಬಹುದು. ವಿಜ್ಞಾನ ಕೇವಲ ಅವಲೋಕನಗಳಿಗೆ ಸೀಮಿತವಾಗದೆ ಅವಲೋಕಿತ ವಿದ್ಯಮಾನಗಳ ನಡುವಿನ ಸಹಸಂಬಂಧವನ್ನು ಗುರುತಿಸಿ ಅದನ್ನು ಇಂದು ಲಭ್ಯವಿರುವ ಜ್ಞಾನಕ್ಕೆ ಸಂಗತವಾಗಿ ವಿವರಿಸಬೇಕು ಎಂದು ಸೂಚಿಸುತ್ತದೆ. ಹೀಗಾದಲ್ಲಿ ಮಾತ್ರ ಮನುಷ್ಯನ ಜ್ಞಾನದ ಪರಿಧಿ ಹೆಚ್ಚುತ್ತದೆ. ಅನುಭವಜನ್ಯ ಜ್ಞಾನ ಒಂದನ್ನೊಂದು ಸತತವಾಗಿ ಅನುಸರಿಸುವ ಘಟನೆಗಳ ಬಗೆಗೆ ದತ್ತಾಂಶ ಕೊಡುತ್ತದಾದರೂ ಅವುಗಳ ಮಧ್ಯೆ ಇರಬಹುದಾದ ಸಂಬಂಧವನ್ನು ಇಂದಿನ ಜ್ಞಾನಕ್ಕೆ ಸಂಗತವಾಗಿ ವಿವರಿಸುವುದಿಲ್ಲ. ಈ ಕಾರಣಕ್ಕಾಗಿಯೇ ಜ್ಯೋತಿಷವು ವಿಜ್ಞಾನದ ದರ್ಜೆಗೆ ಏರುವುದಿಲ್ಲ. ವಿಜ್ಞಾನ ಅನುಭವಜನ್ಯ ಜ್ಞಾನವನ್ನು ನಿರಾಕರಿಸುವುದಿಲ್ಲ. ಸತತ ಅನುಕರಣೆ ಖಚಿತ ಸಂಬಂಧವನ್ನೇನೂ ಸೂಚಿಸುವುದಿಲ್ಲ. ಇಜಿಪ್ಶಿಯನ್ನರು ನೈಲ್ ನದಿಯ ಪ್ರವಾಹಕ್ಕೂ ಮತ್ತು ಸಿರಿಯಸ್ ನಕ್ಷತ್ರ ಸೂರ್ಯೋದಯಕ್ಕೆ ಮುನ್ನ ಉದಯವಾಗುವುದಕ್ಕೂ ಸಂಬಂಧ ಕಲ್ಪಿಸಿದ್ದರು. ಈ ಎರಡು ವಿದ್ಯಮಾನಗಳ ಮಧ್ಯೆ ಪೌರಾಣಿಕ ಸಂಬಂಧವನ್ನು ಸಹ ಬೆಸೆದಿದ್ದರು. ಆದರೆ ಅವೆರಡರ ಮಧ್ಯೆ ಅವರು ಊಹಿಸಿದ ಸಂಬಂಧ ಇರಲಿಲ್ಲ. ಈ ಕಾರಣಕ್ಕೆ ಪರಂಪರೆಯ ಅನುಭವಜನ್ಯ ಜ್ಞಾನವನ್ನು ಸೋಸುವಾಗ ಎಚ್ಚರಿಕೆ ಅಗತ್ಯವಾಗುತ್ತದೆ.

ಜ್ಯೋತಿಷದಲ್ಲಿ ದತ್ತಾಂಶದ ಸಂಗ್ರಹಣೆಗೆ ಇರುವ ಇನ್ನೊಂದು ಸಮಸ್ಯೆ ಅದು ಬಳಸುವ ಭಾಷೆ. ವಿಜ್ಞಾನದಲ್ಲಿ ಬಳಸುವ ಭಾಷೆ ಅಸಂದಿಗ್ಧ ಮತ್ತು ಸ್ಪಷ್ಟವಾಗಿರಬೇಕು. 'ಸಂಗಾತಿಯಿಂದ ಲಾಭ' ಎಂದು ಭವಿಷ್ಯ ನುಡಿದಲ್ಲಿ 'ಸಂಗಾತಿ' ಮತ್ತು 'ಲಾಭ' ಅಸ್ಪಷ್ಟ ಪದಗಳು ಎಂಬುದನ್ನು ಗುರುತಿಸಬೇಕು. ಈ ಪದಗಳು ಬೇರೆ ಬೇರೆಯವರಿಗೆ ಬೇರೆ ಬೇರೆ ಅರ್ಥ ಕೊಡಲು ಸಾಧ್ಯ. ಇಂತಹ ಹಲವು ಅಸ್ಪಷ್ಟ ಪದಗಳ ಬಳಕೆ ಫಲಜ್ಯೋತಿಷದಲ್ಲಿ ವಿಪುಲವಾಗಿ ದೊರೆಯುತ್ತದೆ. ಈ ಕಾರಣಕ್ಕೆ ಜ್ಯೋತಿಷ ಅನುಭವಜನ್ಯ ಜ್ಞಾನದ ದರ್ಜೆಗೆ ಏರಲಾರದು.

ಇನ್ನೊಂದು ಕಾರಣದಿಂದಲೂ ಜ್ಯೋತಿಷ ಸಮರ್ಥನೀಯವಲ್ಲ. ''ಗ್ರಹಗಳು ವ್ಯಕ್ತಿಯೊಬ್ಬನ ಜೀವನದಲ್ಲಿ ಯಾವುದೇ ಘಟನೆಗಳು ನಡೆಯಲು ಕಾರಣೀಭೂತವಾಗುವುದಿಲ್ಲ. ಬದಲಿಗೆ ಅವು ವ್ಯಕ್ತಿಯೊಬ್ಬ ತನ್ನ ಜೀವನ ಯಾತ್ರೆಯಲ್ಲಿ ತನ್ನ ಪೂರ್ವಜನ್ಮಗಳ ಕರ್ಮಗಳಿಗೆ ಅನುಸಾರವಾಗಿ ಭರಿಸಬೇಕಾದ ಹೊರೆಯನ್ನು ಸೂಚಿಸುತ್ತವೆಯಷ್ಟೆ.'' (ಡಾ॥ ಎಸ್. ಬಾಲಚಂದ್ರರಾವ್) – ಇಂತಹ ನಂಬಿಕೆಗಳನ್ನು ಹೊಂದಿದ ಯಾವುದೇ ಚಿಂತನೆಯು ಅದೆಷ್ಟು ಅಸಂಬದ್ಧ ಎಂದು ಬೇರೆ ಹೇಳಬೇಕಾಗಿಲ್ಲ.

ಈ ಕಾರಣಕ್ಕೆ ಜ್ಯೋತಿಷ ಮುಂತಾದ ಅಧ್ಯಯನವನ್ನು ವಿಜ್ಞಾನಿಗಳು ಈಗಾಗಲೇ ಸೂಚಿಸಿದಂತೆ ಭಾರತೀಯ ಪರಂಪರೆಯಲ್ಲಿ ಅಧ್ಯಯನ ಮಾಡುವುದಕ್ಕೆ ಅವಕಾಶ ಕಲ್ಪಿಸುವುದು ಒಳಿತೇ ಹೊರತು ವಿಜ್ಞಾನವಾಗಿಯಲ್ಲ.


ಬಿ. ಎಂ. ಪ್ರದೀಪ್
ಮನೆ ನಂ. ೧-೧೨-೫೩, ಡ್ಯಾಡಿ ಕಾಲನಿ, ರಾಯಚೂರು

# ಕಲಿಗಳ ಬೀಡು ಕಲ್ಯ



ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪುಟ್ಟ ತಾಲ್ಲೂಕು ಮಾಗಡಿ. ಜಿಲ್ಲಾ ಕೇಂದ್ರದಿಂದ ತಾಲ್ಲೂಕು ಕೇಂದ್ರಕ್ಕೆ ಅಂತರ ೫೧ ಕಿ. ಮೀ. ಗುಡ್ಡ ಬೆಟ್ಟಗಳ ಈ ತಾಲ್ಲೂಕಿನಲ್ಲಿ ಐತಿಹಾಸಿಕ ತಾಣಗಳನೇಕ. ಬೆಂಗಳೂರಿನ ಶಿಲ್ಪಿ ಇಮ್ಮಡಿ ಕೆಂಪೇಗೌಡ ಮತ್ತು ವಂಶಸ್ಥರು ಕ್ರಿ. ಶ. ೧೬೩೮ರಿಂದ ೧೭೨೮ರವರೆಗೆ ಮಾಗಡಿಯನ್ನು ತಮ್ಮ ಆಳ್ವಿಕೆಯ ಕೇಂದ್ರಬಿಂದುವಾಗಿರಿಸಿಕೊಂಡಿದ್ದರು. ಮಾಗಡಿ ಕುಣಿಗಲ್ಲು ರಸ್ತೆಯಲ್ಲಿ ಸುಮಾರು ಐದು ಕಿ. ಮೀ. ದೂರ ಮುಂದುವರಿದರೆ ಕಲ್ಯ ಕ್ರಾಸ್ ಸಿಗುತ್ತದೆ. ಅಲ್ಲಿಂದ ಮುಂದೆ ಕೆರೆಯಂಚಿನ ಸುಂದರ ರಸ್ತೆಯಲ್ಲಿ ಸಾಗುತ್ತಿದ್ದಂತೆ ಬೆಟ್ಟದ ಬುಡ ತಲುಪುತ್ತೀರಿ. ಸುಮಾರು ಒಂದು ಸಾವಿರ ಜನ ವಸತಿಯ ಕಲ್ಯ ಹಳ್ಳಿಯ ಬೆನ್ನಿನಲ್ಲೇ ಕಲ್ಯ ಬೆಟ್ಟ ಕಂಗೊಳಿಸುತ್ತದೆ. ಚಾರಿತ್ರಿಕ, ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವಾಗಿದ್ದ ಕಲ್ಯ ಇಂದು ಕಲ್ಲುಬಂಡೆಗಳ ಬೋಳು ಬೆಟ್ಟವಾಗಿ ಮಾತ್ರ ಉಳಿದಿದೆ.

ಶಾಸನಗಳಲ್ಲಿ ಕಲ್ಲೆಹ, ಕಲ್ಲೆಯವೆಂದು ಪ್ರಸ್ತಾಪಿತಗೊಂಡಿರುವ ಈ ಕಲ್ಯದಲ್ಲಿ ಬೌದ್ಧ ಧರ್ಮೀಯರೂ ಇದ್ದರಂತೆ. ಅನಂತರ ಜೈನರು, ಕಾಲಾನುಕ್ರಮದಲ್ಲಿ ಶ್ರೀ ವೈಷ್ಣವರು, ವೀರಶೈವರು ಕಲ್ಯವನ್ನು ತಮ್ಮ ಚಟುವಟಿಕೆಗಳ ಕೇಂದ್ರಸ್ಥಾನವಾಗಿರಿಸಿಕೊಂಡ ದಾಖಲೆಗಳಿವೆ. ಕಲ್ಯ ಹಳ್ಳಿಯಲ್ಲಿಂದು ಹನುಮಂತ, ಮಾರಮ್ಮನ ಗುಡಿಗಳ ಜತೆಗೆ ಆಧುನಿಕ ದೈವ ಅಯ್ಯಪ್ಪ ಗುಡಿಯೂ ಸೇರಿಕೊಂಡಿದೆ. ಬೆಟ್ಟದ ಮೇಲಿನ ಕಲ್ಲೇಶ್ವರ ಮಠವು ಸಹಜ ಶಿಲಾನಿರ್ಮಿತ ಗುಹೆಯೊಳಗೆ ಸ್ಥಿತವಾಗಿದೆ. ಲಂಟಾನಾ ಮುಳ್ಳುಪೊದೆಗಳಿಂದಾವೃತಗೊಂಡ ಶಿಲಾ ಗುಹೆಯ ಬಗಲಿಗೆ ವಿಶಾಲ ಹಜಾರ, ಪಡಸಾಲೆಗಳು ಕಲ್ಲುಕಂಬಗಳ ಸಹಾಯದಿಂದ ನಿರ್ಮಿತಗೊಂಡಿವೆ.

ಗುಹೆಯ ಶಿಥಿಲಗೊಂಡ ಪ್ರಾಕಾರದ ಗುಡಿಗಳಲ್ಲಿ ಸೂರ್ಯದೇವ, ಯಕ್ಷಿ, ಪದ್ಮಾವತಿ, ತೀರ್ಥಂಕರರ ಮೂರ್ತಿಗಳಿದ್ದುವಂತೆ. ಇವಾವುವೂ ಇಂದು ಗೋಚರಿಸುತ್ತಿಲ್ಲ. ಮುರುಕು ಗದ್ದುಗೆಯೊಂದನ್ನು ಪ್ರಕಾಂಡ ಪಂಡಿತ, ತೆಲುಗು ವೀರಶೈವ ಶರಣ ಪಾಲ್ಕುರಿಕೆ ಸೋಮನಾಥನ ಗದ್ದುಗೆ ಎಂದು ಗುರುತಿಸಲಾಗುತ್ತಿದೆ. ೬೪ ಶೀಲಗಳನ್ನು ಮೈಗೂಡಿಸಿಕೊಂಡಿದ್ದ ಸರ್ವಶೀಲೆ ಚೆನ್ನಕ್ಕನ ಕೀರ್ತಿ ಕೇಳಿ ಶರಣು ಬಂದ ಪಾಲ್ಕುರಿಕೆ ಸೋಮನಾಥನು ಕಲ್ಲೆಹದಲ್ಲೇ ಸಮಾಧಿಸ್ಥನಾದನೆಂದು ಚೆನ್ನಬಸವ ಪುರಾಣ ತಿಳಿಸುತ್ತದೆ. ವಿಸ್ತಾರವಾದ ಶಿಲೆಗಲ್ಲು ಚಾಚಿಕೊಂಡ ಗುಹೆಯಡಿಯಲ್ಲಿ ನೂರಾರು ಮಂದಿ ಕಲೆತು ಚರ್ಚಿಸಬಹುದಾದ ಸಹಜ ಶಿಲಾ ಚಪ್ಪರಕ್ಕೆ ಕೃತಕ ಗೋಡೆ ನಿರ್ಮಿಸಿ ಗುಹೆಯ ಸ್ವರೂಪ ನೀಡಲಾಗಿದೆ. ಶಿವರಾತ್ರಿಯ ಒಡ್ಡೋಲಗ ಸಂದರ್ಭದಲ್ಲಿ ಓಲಗ ನುಡಿಸಲು ಬಳಕೆಯಾಗುತ್ತಿದ್ದ ಓಲಗದ ದಿಬ್ಬ ಎಂದು ಪಕ್ಕದ ಪುಟ್ಟ ಗುಡ್ಡವನ್ನು ಕಲ್ಯದ ಜನ ಗುರುತಿಸುತ್ತಾರೆ. ಕಲಿ ದೇವರ ಗುಡಿ ಎಂದು ಗುರುತಿಸುವ ಗುಡ್ಡದ ಕೋರೆಯ ಸಹಜ ಶಿಲಾಗುಹೆಯ ಗುಡಿಯಲ್ಲಿ ಇಂದು ಪುಟ್ಟ ಲಿಂಗವೊಂದಕ್ಕೆ ಪೂಜೆ ಸಲ್ಲಿಸಲಾಗುತ್ತಿದೆ. ಇಂದು ಕಲ್ಯದ ಸ್ಮಾರಕ ಅವಶೇಷಗಳ ನಡುವೆ ಪೂಜೆಯ ಅರ್ಹತೆಯನ್ನು ಪಡೆದಿರುವ ಸೌಭಾಗ್ಯ ಇಂದು ಈ ದೇವರಿಗೆ ಮಾತ್ರ. ಉಳಿದ ಗುಡಿ, ಗದ್ದುಗೆ, ವಿಗ್ರಹಗಳಿಗೆ ದನಗಾಹಿ ಗಳಿಂದಲೇ ಫಲಪುಷ್ಪದ ಹಾರ ಒದಗಿದರೆ ಅದೇ ಸುದೈವ. ಕಲ್ಯದ ಬೆಟ್ಟ ಹಾಗೂ ಹಳ್ಳಿಗಳಲ್ಲಿ ದೊರಕುವ ಶಾಸನಗಳಲ್ಲಿ ಕ್ರಿ.ಶ. ೧೩೪೧ರದು ಮೊದಲನೆಯದು. ಹುಲೆಯನ ಹಳ್ಳಿಯ ವೀರಪಾಂಚಾಲನೆಂಬ ಮಾಂಡಲಿಕನಿಗೆ ವೀರಬಲ್ಲಾಳನು ನೀಡಿದ ದತ್ತಿ ವಿವರ ಈ ಶಾಸನದಲ್ಲಿದೆ. ಕ್ರಿ.ಶ. ೧೩೬೮ರ ಶಾಸನವೊಂದರಲ್ಲಿ ಅಹಿಂಸಾಪರ ಜೈನರಿಗೂ ಆಗತಾನೇ ತಲೆ ಎತ್ತಿದ ಶ್ರೀ ವೈಷ್ಣವ ಧರ್ಮೀಯರಿಗೂ ತಲೆದೋರಿದ 'ಧರ್ಮಯುದ್ಧ'ದಲ್ಲಿ ರಕ್ತಪಾತವಾದುದೂ, ಆಳರಸರು ನಡುವೆ ಪ್ರವೇಶಿಸಿ ಶಾಂತಿ ಸ್ಥಾಪಿಸಿದುದೂ ಪ್ರಸ್ತಾಪಿತವಾಗಿದೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಇದೇ ಶಾಸನ ಪುನಃ ಮೂಡಿದೆ. ಕ್ರಿ.ಶ. ೧೫೬೭ರ ಶಾಸನವೊಂದರಲ್ಲಿ ರಾಮರಾಜದೇವ ಮತ್ತು ಸದಾಶಿವರಾಯರ ಹೆಸರುಗಳ ಪ್ರಸ್ತಾಪವಿದೆ. ಕ್ರಿ.ಶ. ೧೫೩೧ರ ಶಾಸನದಲ್ಲಿ ವಿಜಯನಗರ ಸಾಮ್ರಾಜ್ಯಾಧೀಶ ಅಚ್ಯುತರಾಯನ ಉಲ್ಲೇಖವಿದೆ. ಆತ ತನ್ನ ಭಾವನ ಮಗ ಸಿಂಗರಾಜ ಒಡೆಯನ ಮೂಲಕ ಕಲ್ಲೇಶ್ವರ ದೇವರ ನಿತ್ಯ ಪೂಜೆಗೆ ಉಂಬಳಿ ನೀಡಿದ ಉಲ್ಲೇಖವದು.

ಕಲ್ಯ ಶಾಲೆಯ ಬಳಿ ಇರುವ ಕಲ್ಲೊಂದರ ತುದಿಯಲ್ಲಿ ತೀರ್ಥಂಕರರ ಪಡಿಯಚ್ಚು ಮೂಡಿದೆ. ಬುಡದಲ್ಲಿ ಹುಲಿಯನ್ನು ಕೊಲ್ಲುವ ವೀರನೊಬ್ಬನ ಚಿತ್ರ ಮೂಡಿದೆ. ಗೊಬ್ಬರ ಗುಂಡಿಯ ಬಳಿಯಲ್ಲಿ ಪುರಾತನ ಬಸ್ತಿಯೊಂದು ಇದ್ದ ಕುರುಹುಗಳು ಮಾತ್ರ ಜನರ ಬಾಯಲ್ಲಿದೆ. ಹಳ್ಳಿಯ ಹೊರಭಾಗದಲ್ಲಿ ಜನರು ಆಡುಕಲ್ಲು ಎಂದು ಕರೆಯುವ ಗುಂಡು ಶಿಲೆಯಿದು ಸುಮಾರು ಹತ್ತು ಮೀಟರ್ ಎತ್ತರದ ಏಕಶಿಲಾ ಗರುಡ ಸ್ತಂಭವಿದೆ.

> *ಧರ್ಮದ ಹೆಸರಿನಲ್ಲಿ ಒಬ್ಬರಿಗೊಬ್ಬರು ಕಲಿಗಳಂತೆ ಕಾದಾಡಿ ತಮ್ಮ ಏಕಸ್ವಾಮ್ಯ ಸ್ಥಾಪಿಸಹೊರಟ ಇತಿಹಾಸ ಭಾರತಕ್ಕೆ ಬಲು ಪ್ರಾಚೀನ. ಅಂತಹ ಸಂದರ್ಭದಲ್ಲಿ ಜಾಗೃತ ತಾಣ ಕಲ್ಯ. ನೋಡುಗರಿಗೆ ಬೋಳು ಬೆಟ್ಟದಂತೆ ದೂರಕ್ಕೆ ಗೋಚರಿಸುವ ಕಲ್ಯದ ಬೆಟ್ಟವು ಬುದ್ಧ, ಜೈನ, ಶೈವ, ಶ್ರೀವೈಷ್ಣವ ಹಾಗೂ ವೀರಶೈವ ಮಹಾತ್ಮರನ್ನು ಬಲುಹಿಂದಿನಿಂದ ಆಕರ್ಷಿಸುತ್ತಿತ್ತು. ಇಂದು ಕುರುಬರು-ದನಗಾಹಿಗಳಿಗಷ್ಟೇ ಸೀಮಿತವಾದ ತನ್ನ ಗುಹೆ, ಬೆಟ್ಟಗಳಿಂದ ಕಲ್ಯ ಪ್ರಕೃತಿ ರಮ್ಯ ತಾಣವೆನಿಸಿಕೊಂಡಿದೆ.*



*ಕಲ್ಯದ ಗುಡಿಯೊಂದರಲ್ಲಿರುವ ಎತ್ತಿದ ಕಾಲಿನ ಬಸವಣ್ಣನ ಉಬ್ಬುಶಿಲ್ಪ*



*ಕಲ್ಯ ಬೆಟ್ಟದ ಏರು ಪಾವಟಿಗೆಗಳು*

ಡಾ|| ಸತ್ಯನಾರಾಯಣ ಭಟ್ ಪಿ.

# ಬಂಧವಳಿದ...

> ನವ್ಯೋತ್ತರದ ಮುಖ್ಯ ವಿಮರ್ಶಕರು ಕೃತಿನಿಷ್ಠ ವಿಮರ್ಶೆಯ ಹೆಸರಿನಲ್ಲಿ ಕೃತಿಗೆ ಮಾತ್ರ ಅತೀ ಎನಿಸುವಷ್ಟು ಮಹತ್ವ ನೀಡಿ ಆ 'ಕೃತಿ'ಯ ಒಳದನಿ ಹಾಗೂ ಸತ್ವದ ದರ್ಶನವೇ ಮುಕ್ಕಾಗುವಂತೆ ಮಾಡಿರುವುದು ಕಣ್ಣೆದುರೇ ಇದೆ. ಮಾಸ್ತಿಯವರ ಕತೆ, ಕುವೆಂಪು, ಕಾರಂತರ ಕಾದಂಬರಿಗಳು, ಅಡಿಗರ ಕಾವ್ಯ, ಕಾರ್ನಾಡರ ನಾಟಕಗಳನ್ನು ಕುರಿತ ಆ ವಿಮರ್ಶೆಗಳನ್ನು ಓದಿದ ಮೇಲೆ ಮೂಲಕೃತಿ ಓದುವ ಅಗತ್ಯವೇ ಬೀಳುವುದಿಲ್ಲ. ಹೀಗಾಗದೆ, ವಿಮರ್ಶೆ ಕೇವಲ ದಿಕ್ಸೂಚಿಯಾಗಿ ಮೂಲಕೃತಿಗೆ ಓದುಗನನ್ನು ಸೆಳೆಯುವಂತಿರಬೇಕು. ವಿಮರ್ಶೆ ಕೃತಿಯನ್ನೇ ನಿರಾಕರಿಸುವಂತೆ ಮಾಡಬಾರದಲ್ಲವೆ ?

**ಕ**ಳೆದ ಶತಮಾನದ ತೊಂಬತ್ತರ ದಶಕದಲ್ಲಿ ಎನಿಸುತ್ತದೆ. ಜಿ. ಎಚ್. ನಾಯಕರು ಹೀಗೆ ಹೇಳಿದ ನೆನಪು: '''ಕುಸುಮ ಬಾಲೆ'ಯನ್ನು ವಿಮರ್ಶಿಸಲು ಈಗಿರುವ ವಿಮರ್ಶೆಯ ಮಾನದಂಡವನ್ನೇ ಬದಲಾಯಿಸಬೇಕೇನೋ.'' ಕಿ.ರಂ. ನಾಗರಾಜರು ಹೇಳುತ್ತಾರೆ, ''ಕುಸುಮಬಾಲೆಯನ್ನು ಒಬ್ಬರು ಹಾಡುತ್ತಾ ಹೋಗಬೇಕು, ಇಲ್ಲವೆ ಹೇಳುತ್ತಾ ಹೋಗಬೇಕು; ಉಳಿದವರು ಕೇಳಬೇಕು.''

ಹೀಗೇಕಾಯಿತು ? ಕನ್ನಡ ಸಾಹಿತ್ಯ ಲೋಕದಲ್ಲಿ 'ಒಡಲಾಳ' 'ದ್ಯಾವನೂರು' ಉಂಟುಮಾಡಿದ ಪಲ್ಲಟಗಳನ್ನಾಗಲೀ, ಹೊಸ ಗ್ರಹಿಕೆಗಳನ್ನಾಗಲೀ 'ಕುಸುಮಬಾಲೆ' ನೀಡಲಿಲ್ಲ. ಅದು 'ದಲಿತ ಪುರಾಣ' ಎಂದೇ ಕರೆಸಿಕೊಂಡಿತು. ಪುರಾಣ ಭಾವಸತ್ಯವನ್ನು ಹೇಳುತ್ತದೆ. ಅಂದಮೇಲೆ ಈವರೆಗೆ ದಲಿತ ಸಾಹಿತ್ಯಕ್ಕಿದ್ದ ಆಯಾಮವನ್ನು ಈ ಕೃತಿ ಪಡೆಯಿತು ಎನ್ನಬಹುದೆ ? ಪುರಾಣ ಬೇಕಿರುವುದು ಈ ದೇಶದ ಸುಳ್ಳು ಚರಿತ್ರಕಾರರಿಗೇ ವಿನಃ ದಲಿತರಿಗೆ, ಶೂದ್ರರಿಗೆ ಅಲ್ಲ. ಮನರಂಜನೆ, ಸಮುದಾಯ, ಅಭಿವ್ಯಕ್ತಿ ಯಾವ ಆಯಾಮದಿಂದ ನೋಡಿದರೂ ದಲಿತ-ಶೂದ್ರರು ಪುರಾಣದ ಜಾಡನ್ನೇ ಬಿಟ್ಟುಕೊಡುವುದು ಚಿಂತನಾರ್ಹ ಎನಿಸದೆ ?

ಇರಲಿ, ಮೂಲ ಪ್ರಶ್ನೆಗೆ ಬರುವ. 'ದಲಿತ ಪುರಾಣ' ಎಂದಾಕ್ಷಣ ಆ ಕೃತಿಯ 'ಬಂಧ-ರೂಪ, ಆಕೃತಿ' ಭಿನ್ನ ಎನಿಸಲಿಲ್ಲವೆ ? ಹಾಗಾದರೆ ಈವರೆಗಿನ ವಿಮರ್ಶೆಯಲ್ಲಿ ಅತ್ಯಂತ ಮುಖ್ಯ ಪಾತ್ರ ವಹಿಸಿದ್ದ 'ಬಂಧ' ಇದ್ದಕ್ಕಿದ್ದಂತೆ ಎಲ್ಲಿ ಹೋಯಿತು ? ಪ್ರಕಾರವೊಂದರ ಅಸ್ತಿತ್ವಕ್ಕೆ 'ಬಂಧ'ವೂ ಮುಖ್ಯವಲ್ಲವೇ ? ಜಿ. ಎಚ್. ನಾಯಕ, ಗಿರಡ್ಡಿಯವರಂತಹ ಮಹತ್ವದ ವಿಮರ್ಶಕರು ತಮ್ಮ ವಿಮರ್ಶೆಗಳಲ್ಲಿ ಬಂಧಕ್ಕೆ ನೀಡಿರುವ ಆದ್ಯತೆ ಕಣ್ಣೆದುರೇ ಇದೆ. ಅದು ಕತೆ, ಕಾದಂಬರಿ, ಕವಿತೆ, ನಾಟಕ, ಪ್ರಬಂಧ ಯಾವುದೇ ಆಗಲಿ, 'ಬಂಧ'ವಿಲ್ಲದೆ ಅದು ಇಂಥದೇ ಪ್ರಕಾರಕ್ಕೆ ಸೇರಿದ್ದು ಎಂದು ಹೇಗೆ ನಿರ್ವಚಿಸಲಾಗುತ್ತದೆ ?

ನವ್ಯೋತ್ತರದ ಮುಖ್ಯ ವಿಮರ್ಶಕರು ಕೃತಿನಿಷ್ಠ ವಿಮರ್ಶೆಯ ಹೆಸರಿನಲ್ಲಿ ಕೃತಿಗೆ ಮಾತ್ರ ಅತೀ ಎನಿಸುವಷ್ಟು ಮಹತ್ವ ನೀಡಿ ಆ 'ಕೃತಿ'ಯ ಒಳದನಿ, ಸತ್ವದ ದರ್ಶನವೇ ಮುಕ್ಕಾಗುವಂತೆ ಮಾಡಿರುವುದೂ ಕಣ್ಣೆದುರೇ ಇದೆ. ಮಾಸ್ತಿಯವರ ಕತೆ, ಕುವೆಂಪು, ಕಾರಂತರ ಕಾದಂಬರಿಗಳು, ಅಡಿಗರ ಕಾವ್ಯ, ಕಾರ್ನಾಡರ ನಾಟಕಗಳನ್ನು ಕುರಿತ ಆ ವಿಮರ್ಶೆಗಳನ್ನು ಓದಿದ ಮೇಲೆ ಮೂಲಕೃತಿ ಓದುವ ಅಗತ್ಯವೇ ಬೀಳುವುದಿಲ್ಲ. ಹೀಗಾಗದೆ, ವಿಮರ್ಶೆ ಕೇವಲ ದಿಕ್ಸೂಚಿಯಾಗಿ ಮೂಲಕೃತಿಗೆ ಓದುಗನನ್ನು ಸೆಳೆಯುವಂತಿರಬೇಕು. ವಿಮರ್ಶೆ ಕೃತಿಯನ್ನೇ ನಿರಾಕರಿಸುವಂತೆ ಮಾಡಬಾರದಲ್ಲವೆ ? ಈ ದಿಸೆಯಲ್ಲಿ ಲಂಕೇಶರ ವಿಮರ್ಶೆಯ ಮಾದರಿ ಅತ್ಯಂತ ಸೂಕ್ತವೆನಿಸುತ್ತದೆ. ಕಂಬಾರ, ಕಾರ್ನಾಡ್, ಕುವೆಂಪು, ಮಾಸ್ತಿ ಮೊದಲಾದ ಮುಖ್ಯ ಲೇಖಕರ ಕುರಿತ ಲಂಕೇಶರ ವಿಮರ್ಶೆ ಖಚಿತವಾಗಿದೆ, ಚಿಕ್ಕದಾಗಿದೆ, ಚೊಕ್ಕವಾಗಿದೆ, ಅನುಮಾನ ಏಳುವಂತಿದೆ. ಆ ಅನುಮಾನದ ಕಾರಣಕ್ಕಾಗಿಯೇ ಓದುಗನು ಲೇಖಕನ ಕೃತಿಯನ್ನು ಓದುವಂತೆ ಮಾಡುವಲ್ಲಿ ಸಫಲವಾಗಿದೆ.

ಹೀಗೆ ಬಂಧವೊಂದರ 'ಅಳಿವು' ಸಾಹಿತ್ಯ ಕೃತಿಯೊಂದರ ಸಂವಹನದ ಮೇಲೆ ಬೀರುವ ಪರಿಣಾಮವಾದರೂ ಎಂಥಹುದು ? ಸಾಹಿತ್ಯ ಕೃತಿಯೊಂದು ತಾನು ಇಂಥ ಪ್ರಕಾರಕ್ಕೆ ಸೇರಿದ್ದು ಎಂದು ಹೇಳುತ್ತಲೇ ಅದಕ್ಕೆ ಪೂರಕವಾಗಿ ಓದುಗನನ್ನು ಸಿದ್ಧವಾಗಿಸುತ್ತದೆ. ಆದರೆ ಹಾಡುವಂತಹ, ಹೇಳುವಂತಹ ಕೃತಿಯೊಂದು ತಾನು ಇರುವ ಪ್ರಕಾರಕ್ಕಿಂತ ಭಿನ್ನ ಆದಾಗ ಅದರ ಸಂವಹನ, ಪರಿಣಾಮದ ರೀತಿ ಏನು ? ಹೇಗೆ ?

'ಕುಸುಮಬಾಲೆ'ಯಿಂದ ಆರಂಭಗೊಂಡ ಈ ರೀತಿಯ ಮಾತುಗಳಿಗೆ ಇನ್ನೊಂದಿಷ್ಟು ನಿದರ್ಶನಗಳೂ ಇವೆ. ೧೯೮೭ರಲ್ಲಿ ಪ್ರಕಟವಾದ ಜಿ. ಎಸ್. ಎಸ್. ಸಮಗ್ರಕಾವ್ಯ ಕುರಿತ ಮುನ್ನುಡಿಯಲ್ಲಿ ಕೆ.ವಿ. ನಾರಾಯಣ ಕೂಡ ಸುಲಭವಾಗಿ 'ಅಂಥ ವಿಮರ್ಶೆಯ ಮಾನದಂಡಗಳು ನಮ್ಮಲ್ಲಿಲ್ಲವೆಂದು' ಹೇಳುತ್ತಾರೆ. ಹೀಗೆಂದರೇನು ? ಕವಿತೆ, ಕಾವ್ಯ, ಸಂಗ್ರಹವೊಂದರ ಹಂತಗಳು, ಬೆಳವಣಿಗೆ, ಅಭಿವ್ಯಕ್ತಿ, ಆಕೃತಿ ಈ ಹಿನ್ನೆಲೆಗೆ ಇನ್ನೆಂಥ ಮಾನದಂಡದ ಅಗತ್ಯವಿದೆ ? ಅದೂ ಸಾಮಾಜಕೀಯ ವಿಮರ್ಶೆ, ಸಂಸ್ಕೃತಿನಿಷ್ಠ ವಿಮರ್ಶೆ ಈ ಹೊತ್ತಿಗಾಗಲೇ ನಮ್ಮಲ್ಲಿ ಬೆಳೆದು ನಿಂತಿರುವಾಗ !

ಈ ಮಾತಿಗೆ ಇನ್ನೊಂದೆರಡು ನಿದರ್ಶನಗಳನ್ನು ನೀಡುತ್ತೇನೆ. 'ಗಾಂಧಿ ಬಂದ' ಇತ್ತೀಚಿನ ಉತ್ತಮ ಕೃತಿಗಳಲ್ಲೊಂದು. ಆದರೆ ಸಾಹಿತ್ಯ ಕೃತಿಯಾಗಿ ಅಲ್ಲ; ಮಾನವಶಾಸ್ತ್ರ ಕೃತಿಯಾಗಿ. ವಿಮರ್ಶಕರಾದ ಸಿ. ಎನ್. ರಾಮಚಂದ್ರನ್‌ರೊಡನೆ ಈ ಬಗ್ಗೆ ಮಾತನಾಡಿದಾಗ ಅವರೂ ಅದೇ ಮಾತು ಹೇಳಿದರು. ಕುವೆಂಪು ಕಾದಂಬರಿಯೊಂದನ್ನು ಕುರಿತು ಕುರ್ತುಕೋಟಿಯವರು, ''ವಿವರಗಳಲ್ಲಿ ಸೊಕ್ಕಿದೆ'' ಎಂದಿದ್ದರು. ಆದರೆ 'ವಿವರಗಳಲ್ಲಿ ಸೊಕ್ಕಿ'ರುವ ಕೃತಿ 'ಮಲೆಗಳಲ್ಲಿ ಮದುಮಗಳು' ಅಲ್ಲ; 'ಗಾಂಧಿ ಬಂದ'. ಉತ್ತಮ ಆರಂಭದ ನಂತರ ಸಾಹಿತ್ಯ ಕೃತಿಯ ಆಯಾಮವನ್ನು ಕಳಚಿಕೊಳ್ಳುವ ಈ ಕೃತಿ ಮಾನವಿಕ ವಿವರಗಳು, ಸಂಸ್ಕೃತಿ ಚಹರೆಗಳು, ಆಚರಣಾವಿಧಿಗಳಿಗೇ ಹೆಚ್ಚು ಅವಕಾಶ ನೀಡುವ ಮೂಲಕ ಕೃತಿಯಲ್ಲಿ ಸಾಹಿತ್ಯಕ ಆಯಾಮ ಅಥವಾ ಚಹರೆಯೇ ಇಲ್ಲವಾಗುತ್ತದೆ; ಕಡಿಮೆಯಾಗುತ್ತದೆ. ಕಂಬಳ, ಎಡೆ, ಊಟ, ಭೋಜನದ ತಿನಿಸುಗಳು, ಸಿದ್ಧತೆ ಇತ್ಯಾದಿಗಳೆಲ್ಲವೂ ಪೂರಕವಾಗಿ ಬರುವ ಬದಲು ಅವೇ ಮುಖ್ಯವೋ ಎಂಬಂತಾಗಿ ಕೃತಿಯ ಮುಖ್ಯ ನೆಲೆ ಮರೆಯಾಗುತ್ತದೆ, ಇಲ್ಲವೆ ಬದಿಗೆ ಸರಿಯುತ್ತದೆ. ಅದ್ರಾಮನ ಸಾವೂ ಕೂಡಾ ವಸ್ತು ಸಹಜವಾಗಿ ನಿರ್ವಹಣೆಯಾಗಿಲ್ಲ ಎನಿಸುತ್ತದೆ. ಹೀಗಿರುವಾಗ ಈ ಕೃತಿಯ 'ಬಂಧ'ವೂ ಈಗ ನಡೆದಿರುವ ಕೃತಿ ವಿಮರ್ಶೆಯಲ್ಲಿ ಮುಖ್ಯಾಂಶವಾಗಬೇಕಿತ್ತು. ಏಕೆಂದರೆ ಈವರೆಗಿನ ಪರಿಚಿತ 'ಕಾದಂಬರಿ' ಬಂಧಕ್ಕೆ ಕೃತಿ ಹೊಂದಿಕೊಂಡು ಮಾನವಿಕ ಅಧ್ಯಯನದ ಆಯಾಮದತ್ತ ಚಲಿಸಿದೆ.

ಅದೇ ರೀತಿ ಕಾ. ತ. ಚಿಕ್ಕಣ್ಣನವರ 'ದಂಡೆ' (೧೯೯೯) ಕಾದಂಬರಿ(?)ಯಲ್ಲಿ ಕವಿತೆಗಳ ನೆಯ್ಗೆ, ಹೊಂದಿಕೆ ಇದೆ. ಇದು ಮತ್ತೂ ತೊಡಕಿನ ಪ್ರಯೋಗ. ಇದು ಓದಿಗಾಗಲೀ, ಗ್ರಹಿಕೆಗಾಗಲೀ ಉಂಟಾಗುವ ತೊಡಕಲ್ಲ; ಕೃತಿಯೊಂದರ ಸಮಗ್ರ ಗ್ರಹಿಕೆಗೇ ತಡೆಯುಂಟು ಮಾಡಬಹುದಾದ ಸಾಧ್ಯತೆಯನ್ನೊಳಗೊಂಡಿದೆ ಮತ್ತು ಇಂಥ ನಿರ್ವಹಣೆಯಿಂದ ಕಾದಂಬರಿಕಾರ/ ಕೃತಿಕಾರ ಸಾಧಿಸಿದ್ದಾದರೂ ಏನು ?

ಕಾಳೇಗೌಡ ನಾಗವಾರರ ಕೆಲವು ಸಣ್ಣಕತೆಗಳು ತಮ್ಮ ಒಡಲಲ್ಲಿ 'ಕವಿತೆ'ಯ ಭಾಗಗಳಿಗೆ ಜೋತುಬಿದ್ದಿವೆ. ಇದು ಮತ್ತೂ ವಿಚಿತ್ರ ! ಸಣ್ಣಕತೆಯೇ ಒಂದು ಭಾವಗೀತೆ. ಅದರ ಖಚಿತ ನಿರ್ವಹಣೆ ಅಸಾಧ್ಯವಾದಾಗ ಮಾತ್ರ ಇಂಥ ಪ್ರಯತ್ನಗಳು ಇಲ್ಲವೇ ಸರ್ಕಸ್‌ಗಳು ಫಲಿಸಬಹುದೆ ? ಮತ್ತು ಈ 'ರೀತಿ' ಕತೆ ಓದಿಗೆ, ಪರಿಣಾಮಕ್ಕೆ, ಸಂವಹನಕ್ಕೆ ಯಾವುದೇ ನೆಲೆಯನ್ನು ನೀಡುವುದಿಲ್ಲ.

ಮೇಲಿನ ಚರ್ಚೆಯಲ್ಲಿ ನಾನು ಹೇಳಬಯಸಿದ್ದು ಒಂದು ಸಾಹಿತ್ಯ ಪ್ರಕಾರ ತನಗೆ ಸಹಜವಾದ ಅಭಿವ್ಯಕ್ತಿ ಮತ್ತು ಓದನ್ನು ಕೂಡ ಸಿದ್ಧಗೊಳಿಸಿಕೊಂಡಿರುತ್ತದೆ ಎಂದು. ಕವಿತೆಯ ಓದಿಗೂ, ಸಣ್ಣಕತೆಯ ಓದಿಗೂ ಅಂತಹ ವ್ಯತ್ಯಾಸವಿಲ್ಲದಿದ್ದರೂ, ಕವಿತೆ ಎರಡನೆ, ಮೂರನೇ ಓದನ್ನು ಬಯಸುತ್ತದೆ. ಕಾದಂಬರಿ ಸತತ ಓದನ್ನು ನಿರಾಕರಿಸಿದರೆ, ನಾಟಕ ಓದಿನ ಜೊತೆ ಮತ್ತೊಂದು ಬಯಕೆಯನ್ನು, ವಿಶ್ಲೇಷಣೆಯ ಆಯಾಮವನ್ನೂ ಸಹಜವಾಗಿಯೇ ಒಳಗೊಂಡಿರುತ್ತದೆ. ಹೀಗಿರುವಾಗ ಕೃತಿಯೊಂದರ ಬಾಹ್ಯರೂಪು ಮುಖ್ಯವಲ್ಲವೆ ? ಬಾಹ್ಯರೂಪು ಅಥವಾ ಪ್ರಕಾರ ಕೃತಿಯ ಅಂತಸ್ಸತ್ವಕ್ಕೆ ಪೂರಕವೆನಿಸದೆ ? ವಿಮರ್ಶೆಯ ಪ್ರಕಾರ ಮತ್ತು ಸತ್ವದ ತಿರುಳಿನೆಡೆ ಓದುಗನನ್ನು ಕರೆದೊಯ್ಯಬೇಕಲ್ಲದೆ, ಇಡೀ ವಿವರವನ್ನು ನೀಡಬೇಕೆ ? ಇಂಥ ಪ್ರಶ್ನೆಗಳು ಸಹಜವಾಗಿಯೇ ಸದ್ಯದ ಓದುಗ ಮತ್ತು ವಿಮರ್ಶಕನನ್ನು ಸಮಾಜಮುಖೀ ಅಭಿವ್ಯಕ್ತಿ ಮತ್ತು ಸಾಮಾಜಿಕ ವಿಮರ್ಶೆಯ ನೆಲೆಯತ್ತ ನಿರ್ದೇಶಿಸುತ್ತವೆ. ಹಾಗಾಗಿ 'ಬಂಧದ' ಅಳಿವು ಕೃತಿಯ ಯಶಸ್ಸಿಗೆ ಮತ್ತು ಸಂವಹನದ ತೊಡಕಿಗೆ ಕಾರಣವಾಗದಿರಲಿ ಎಂಬುದೇ ಈ ಚರ್ಚೆಯ ಆಶಯವಾಗಿದೆ.

**ಡಾ|| ಸಿಎಸ್. ಪ್ರಸಾದಸ್ವಾಮಿ**
ಮುಖ್ಯರು : ಕನ್ನಡ ವಿಭಾಗ, ಸರ್. ಎಂ. ವಿ. ಸರ್ಕಾರಿ ವಿಜ್ಞಾನ ಕಾಲೇಜು, ಭದ್ರಾವತಿ - ೫೭೭ ೩೦೧

# ವಿನಾಶದ ಅಂಚಿನಲ್ಲಿರುವ ಪಕ್ಷಿಗಳು

*ನಮ್ಮ ದೇಶವೂ ಸೇರಿದಂತೆ ಜಗತ್ತಿನೆಲ್ಲೆಡೆ ಪ್ರಕೃತಿ ನಾಶ ಮತ್ತು ಪರಿಸರ ಮಾಲಿನ್ಯ ಭಯಂಕರ ಹಾಗೂ ಅತಿ ಹಾನಿಕರ ಸ್ಥಿತಿಯನ್ನು ತಲುಪುತ್ತಿದೆ. ಆಕಾಶವನ್ನು ವರ್ಣರಂಜಿತಗೊಳಿಸುವ, ನಮ್ಮ ಅನಿಸಿಕೆಗಳಿಗೆ ರೆಕ್ಕೆಪುಕ್ಕ ಮೂಡಿಸುವ ಪಕ್ಕಿಗಳ ಬಳಗಕ್ಕೂ ಈ ಮಾತು ಅನ್ವಯಿಸುತ್ತದೆ. ಈ ದುಃಸ್ಥಿತಿಗೆ ಕಾರಣಗಳಾದರೂ ಏನು, ಪರಿಹಾರವಾದರೂ ಇದೆಯೇ ಎಂಬುದಕ್ಕೆ ಉತ್ತರ ಹುಡುಕುವ ಇಲ್ಲಿನ ಪ್ರಯತ್ನ ಶ್ರೀ ಎಚ್. ಗವಿಸಿದ್ದಯ್ಯ ಅವರದು.*



ಸಿಂಹ, ಹುಲಿ, ಆನೆ ಮುಂತಾದ ವನ್ಯ ಪ್ರಾಣಿಗಳ ಸಂಖ್ಯೆ ಕ್ಷೀಣಿಸುತ್ತಿರುವಂತೆ ವಿವಿಧ ಬಗೆಯ ಅನೇಕ ಪಕ್ಷಿಗಳ ಸಂಖ್ಯೆಯೂ ಸಹ ಗಣನೀಯ ಪ್ರಮಾಣದಲ್ಲಿ ಕ್ಷೀಣಿಸುತ್ತಿದೆ.

ಗರುಡ, ಡೇಗೆ, ರಣಹದ್ದು, ಹಾರಿಯರ್ಸ್ (ಬೇಟೆ ಪಕ್ಷಿ) ಹದ್ದು ಮುಂತಾದ ಪಕ್ಷಿಗಳಿಂದು ವಿನಾಶದ ಅಂಚಿನಲ್ಲಿವೆ. ಇವುಗಳನ್ನು ಹಿಂಸ್ರ ಪಕ್ಷಿಗಳೆಂದು ಕರೆಯುತ್ತಾರೆ. ಈ ಪಕ್ಷಿಗಳು ತಮ್ಮ ಹಾರುವ ವೇಗ, ಸೊಗಸು, ಸೂಕ್ಷ್ಮ ನೋಟ ಮುಂತಾದ ಲಕ್ಷಣ ಮತ್ತು ಗುಣಗಳನ್ನು ಹೊಂದಿದ್ದು, ಧೈರ್ಯ ಮತ್ತು ಗಾಂಭೀರ್ಯಗಳ ಕುರುಹಾಗಿವೆ.

ಒಂದು ಕಾಲದಲ್ಲಿ 'ಗೌಜಗ, ಕಾಡುಕೋಳಿ' ಮುಂತಾದವುಗಳನ್ನು ಬೇಟೆಯಾಡಲು ಹಿಂಸ್ರ ಪಕ್ಷಿಗಳಿಗೆ ತರಪೇತು ನೀಡಿ ಬಳಸುತ್ತಿದ್ದರು.

ಪ್ರಪಂಚದ ಬಹುತೇಕ ಕಡೆಗಳಲ್ಲಿ ಕಂಡುಬರುವ ಈ ಪಕ್ಷಿಗಳು ಅಲ್ಲಿನ ಪರಿಸರಕ್ಕೆ ಹೊಂದಿಕೊಂಡು ಬದುಕುವ ಸಾಮರ್ಥ್ಯವನ್ನು ಪಡೆದಿವೆ. ದಟ್ಟವಾದ ಅರಣ್ಯ ಪ್ರದೇಶ, ಮರಳುಗಾಡು, ಜೌಗು ಪ್ರದೇಶ ಮುಂತಾದ ಪ್ರದೇಶಗಳಲ್ಲಿ ಅವು ವಾಸಿಸಬಲ್ಲವು.

ನಮ್ಮ ದೇಶದಲ್ಲಿ ಕಂಡುಬರುವ ಹಿಂಸ್ರಪಕ್ಷಿಗಳಲ್ಲಿ ನೂರಾರು ಪ್ರಭೇದಗಳಿವೆ.

ಹೊಲದ ಬಯಲುಗಳಲ್ಲಿ ಈ ಪಕ್ಷಿಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದ ಕಾಲವೊಂದಿತ್ತು. ಆದರಿಂದು ಅವು ಅಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿಲ್ಲ ; ಕಾರಣ, ಅವುಗಳ ಸಂಖ್ಯೆ ದಿನೇ ದಿನೇ ಕ್ಷೀಣಿಸುತ್ತಿದೆ. ಕೆಲವು ಪ್ರಭೇದದ ಪಕ್ಷಿಗಳು ವಿನಾಶದ ಅಂಚನ್ನು ತಲುಪಿದ್ದರೆ, ಮತ್ತೆ ಕೆಲವು ಬದಲಾಗುತ್ತಿರುವ ಪರಿಸರಕ್ಕೆ ಹೊಂದಿಕೊಳ್ಳದೆ ತೊಳಲಾಡುತ್ತಿವೆ.

ಹಿಂಸ್ರಪಕ್ಷಿಗಳು ಮಾಂಸಾಹಾರಿಗಳು. ಪ್ರಮುಖವಾಗಿ ಕೀಟ, ಹಲ್ಲಿ, ಹಾವು, ಪಕ್ಷಿ, ಇಲಿ ಮತ್ತು ಸಣ್ಣ ಪುಟ್ಟ ಜಿಂಕೆಗಳನ್ನೂ ಸಹ ತಿಂದು ಜೀವಿಸುತ್ತವೆ.

ವರ್ಷಕ್ಕೊಮ್ಮೆ ಮೊಟ್ಟೆಯಿಟ್ಟು ಮರಿಮಾಡುವ ಈ ಜೀವಿಗಳು ಎತ್ತರ ಮತ್ತು ಕಡಿದಾದ ಬಂಡೆಗಳ ಬಿರುಕುಗಳಲ್ಲಿ ವಾಸಿಸುತ್ತವೆ. ಎತ್ತರವಾದ ಮರಗಳಲ್ಲಿ ಗೂಡುಗಳನ್ನು ಕಟ್ಟುತ್ತವೆ. ಇಷ್ಟಾದರೂ ಸಹ ಇತರೇ ಪಕ್ಷಿಗಳಂತೆ ಅವುಗಳ ಸಂಖ್ಯೆ ಬೆಳೆಯುತ್ತಿಲ್ಲ ; ವಿಶ್ವದ ಎಲ್ಲ ಕಡೆಗಳಲ್ಲಿ ಅವುಗಳ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿದೆ.

ಈ ಪಕ್ಷಿಗಳ ಸಂಖ್ಯೆ ಕ್ಷೀಣಿಸಲು ಕಾರಣ :

ಅವುಗಳ ಆಹಾರಕ್ಕೆ ಮೂಲವಾದ ಕೀಟ ಮತ್ತು ಪ್ರಾಣಿಗಳ ಸಂಖ್ಯೆ ಕಡಿಮೆಯಾಗುತ್ತಿರುವುದು ಒಂದು ಕಡೆಯಾದರೆ, ವಾಸಸ್ಥಾನ, ಗೂಡುಗಳನ್ನು ಕಟ್ಟಲು ಎತ್ತರವಾದ ಮರಗಳ ಕೊರತೆ, ಅರಣ್ಯ ನಾಶ ಅಲ್ಲದೆ, ಇತರೇ ಪಕ್ಷಿಗಳನ್ನು ಬೇಟೆಯಾಡಲು ಈ ಪಕ್ಷಿಗಳಲ್ಲಿ ಕೆಲವನ್ನು ಬಳಸುವುದು ಮತ್ತು ಪಂಜರದಲ್ಲಿಡುವುದೂ ಇವುಗಳ ಸಂಖ್ಯೆ ಕ್ಷೀಣಿಸುವುದಕ್ಕೆ ಕಾರಣವಾಗಿದೆ. ಅಂಟುರೋಗ ಹರಡಿ ಈ ಪಕ್ಷಿಗಳು ಬಹು ಬೇಗ ಸಾಯುತ್ತವೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ಕೀಟನಾಶಕಗಳ ಇತಿಮಿತಿಯಿಲ್ಲದ ಬಳಕೆಯೂ ಇವುಗಳ ವಿನಾಶಕ್ಕೆ ಕಾರಣವಾಗಿದೆ.

ಕೀಟನಾಶಕಗಳು, ಕೀಟಗಳ. ಶರೀರವನ್ನು ಪ್ರವೇಶಿಸಿ, ತನ್ಮೂಲಕ ಹಿಂಸ್ರ ಪಕ್ಷಿಗಳ ಶರೀರವನ್ನು ಪ್ರವೇಶಿಸುತ್ತವೆ. ಅತಿಯಾದ ಕೀಟನಾಶಕದ ಶೇಖರಣೆಯೂ ಸಹ ಪಕ್ಷಿಗಳ ಮೊಟ್ಟೆಯ ಕೋಶದ ಮೇಲೆ ಘೋರವಾದ ಪರಿಣಾಮ ವನ್ನುಂಟುಮಾಡುತ್ತದೆ. ಇದರಿಂದಾಗಿ ಈ ಪಕ್ಷಿಗಳ ವಂಶಾಭಿವೃದ್ಧಿಗೆ ಸಾಕಷ್ಟು ಪ್ರಮಾಣದಲ್ಲಿ ಧಕ್ಕೆಯುಂಟಾಗುತ್ತದೆ.

ಕೀಟನಾಶಕಗಳು ಅನೇಕ ವಿಧವಾದ ಹಾನಿಕಾರಕ ಕೀಟಗಳನ್ನು ಕೊಲ್ಲುತ್ತವೆ ನಿಜ. ಆದರೆ ಜೊತೆಗೆ ಜೀರುಂಡೆಗಳೂ ಸಹ ಬಲಿಯಾಗುತ್ತವೆ. ಜೀರುಂಡೆಗಳು ಹಿಂಸ್ರ ಪಕ್ಷಿಗಳ ಜೀವನದಲ್ಲಿ ವಿಶೇಷ ಪಾತ್ರ ವಹಿಸುವ ಕೀಟಗಳು. ಪಕ್ಷಿಗಳಲ್ಲಿ ರೋಗ ಹರಡಲು ಕಾರಣವಾದ ಕ್ರಿಮಿಗಳನ್ನು ಕೊಲ್ಲುವಂಥ ಜೀರುಂಡೆಗಳ ಸಂಖ್ಯೆ ನಶಿಸಿದರೆ, ಅದರ ಘೋರ ಪರಿಣಾಮ ಹಿಂಸ್ರ ಪಕ್ಷಿಗಳ ಮೇಲೂ ಉಂಟಾಗುವುದು.

ಆಶಾಕಿರಣ : ಪಾಶ್ಚಿಮಾತ್ಯ ದೇಶಗಳಲ್ಲಿಂದು ರಾಸಾಯನಿಕ ಮತ್ತು ಕೀಟನಾಶಕಗಳ ಬಳಕೆ ಕಡಿಮೆಯಾಗಿ, ಹಸಿರೆಲೆ ಗೊಬ್ಬರದ ಬಳಕೆ ಹೆಚ್ಚುತ್ತಿದೆ. ಹಿಂಸ್ರಪಕ್ಷಿಗಳ ಸಂತತಿ ಈ ಸುಂದರ ಭೂಮಿಯಲ್ಲಿ ಉಳಿದು ಬೆಳೆಯಲು ಇದೊಂದು ಆಶಾದಾಯಕ ಬೆಳವಣಿಗೆ ಎನ್ನಬಹುದು.

ಎಚ್. ಗವಿಸಿದ್ದಯ್ಯ
ಅಧ್ಯಾಪಕರು, [illegible]
[illegible]

ಸುದ್ದಿ ಚಿತ್ರ



ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖಾ ನೌಕರರ ಸಂಘ ಹಾಗೂ ನವಕರ್ನಾಟಕ ಜಂಟಿಯಾಗಿ ನಂಜನಗೂಡಿನ ಹಿರಿಯ ನ್ಯಾಯಾಲಯ ಸಂಕೀರ್ಣದಲ್ಲಿ ಏರ್ಪಡಿಸಿದ್ದ ಪುಸ್ತಕ ಪ್ರದರ್ಶನದ ಉದ್ಘಾಟನೆಯ ದೃಶ್ಯ. ಚಿತ್ರದಲ್ಲಿ ಎಡದಿಂದ ಬಲಕ್ಕೆ ಶ್ರೀ ಸತ್ಯನಾರಾಯಣ, ಶ್ರೀ ಎನ್. ಕೆ. ಸೋಮರಾಜು, ಶ್ರೀ ಬಿ. ಮಹದೇವಪ್ಪ ಮತ್ತು ಶ್ರೀಮತಿ. ಎನ್. ಆರ್. ಪದ್ಮ.



'ಗಾಂಧಿ ಮತ್ತು ಅಂಬೇಡ್ಕರ್' ಒಂದು ಚಿಕ್ಕ ಪುಸ್ತಕ ಎಂದೆನಿಸಿದರೂ ಅದರ ವೈಚಾರಿಕ ಧೋರಣೆ ಮತ್ತು ಸಂದರ್ಭ ಅಪೇಕ್ಷಣೀಯವಾಗಿದೆ. ಹಾಗೆಯೇ ಅದೊಂದು ಗಂಭೀರ ಚಿಂತನೆಯ ಪೀಠಿಕೆಯಾಗಿದೆ.

ವಸಾಹತೋತ್ತರ ಸಂದರ್ಭದಲ್ಲಿ ನಿಂತು ಚರಿತ್ರೆಯನ್ನು ನೋಡುವಾಗಿನ ಉದ್ದೇಶವೂ ಕೂಡ ಇಲ್ಲಿಯ ಚಿಂತನೆಯ ಹಿಂದಿದೆ.

''ಇಂದು ಭಾರತ ಸಂದಿಗ್ಧ ಸ್ಥಿತಿಯಲ್ಲಿ ಸಿಲುಕಿದೆ. ಲೋಕದಲ್ಲಿ ತನ್ನ ಬದುಕಿಗಾಗಿ ಮಾರ್ಕ್ಸ್ ಮತ್ತು ಮಾವೋತ್ಸೆ ತುಂಗರು ನಿರ್ಮಿಸಿದ ಹಾದಿಯಲ್ಲಿ ನಡೆಯಬೇಕು. ಇಲ್ಲವೇ ಗಾಂಧಿ ಮತ್ತು ಅಂಬೇಡ್ಕರ್ ನಿರ್ಮಿಸಿದ ಮಾರ್ಗವೇ ತನಗೆ ಏಕೈಕ ಪರ್ಯಾಯ ಮಾರ್ಗ ಎಂಬುದನ್ನು ತಿಳಿಯಬೇಕು. ಈ ಆಯ್ಕೆ ಮತ್ತೆ ದಲಿತ ಜನಾಂಗದ ಬೆಂಬಲವನ್ನೇ ಆಧರಿಸಿ ನಿಂತಿದೆ'' (ಪು. ೪೫). ಹಾಗೆಯೇ.....

''ಅಲ್ಲದೆ ಗಾಂಧೀಜಿಯವರು ಕಾಂಗ್ರೆಸ್ಸಿನ ರಾಷ್ಟ್ರೀಯ ನಾಯಕರು ಆದ ಕಾರಣಕ್ಕಾಗಿ ಅಸ್ಪೃಶ್ಯರ ಸರ್ವ ಸಮಸ್ಯೆಗಳಿಗೂ ಅವರೊಬ್ಬರಿಂದಲೇ ಪರಿಹಾರವನ್ನೇಕೆ ನಿರೀಕ್ಷಿಸಬೇಕು ? ಹಾಗೆ ನಿರೀಕ್ಷಿಸುವುದರಿಂದ ಅವರಿಗಿದ್ದ ಮಿತಿಗಳನ್ನೆಲ್ಲ ಮರೆಯುತ್ತಿದ್ದೇವೆ ಎಂದು ಇಂದಿನ ಪೀಳಿಗೆಯವರಿಗಾದರೂ ಅನಿಸುವುದಿಲ್ಲವೆ ?'' (ಪು. ೫೯).

ಇಂಥ ಉದ್ದೇಶದಿಂದ ಹೊರಟ ಲೇಖಕ ಈ ಇಬ್ಬರು ಮಹಾತ್ಮರಿಂದಲೂ ದೂರ ನಿಂತು ವಿಷಯ ವಿಶ್ಲೇಷಣೆ ಮತ್ತು ಸಂಶ್ಲೇಷಣೆ ಮಾಡುವುದರಲ್ಲಿ ಶಕ್ತರಾಗಿದ್ದಾರೆ.

ಮಹಾತ್ಮ ಗಾಂಧೀಜಿ ಮತ್ತು ಡಾ|| ಬಿ. ಆರ್. ಅಂಬೇಡ್ಕರ್ ಇಬ್ಬರೂ ನಮ್ಮ ಚರಿತ್ರೆ ಸೃಷ್ಟಿಸಿದ ಮಹಾಚೇತನವಾಗಿದ್ದಾರೆ. ಅವರು ಒಂದೇ ಕಾಲದಲ್ಲಿ ಮತ್ತು ಒಂದೇ ಸನ್ನಿವೇಶದಲ್ಲಿ ಮೂಡಿಬಂದ ವ್ಯಕ್ತಿಗಳಾಗಿದ್ದಾರೆ. ಆದರೆ ಅವರು ಕ್ರಮಿಸುವ ಹಾದಿಯಲ್ಲಿ ಮಾತ್ರ ಉತ್ತರ ಮತ್ತು ದಕ್ಷಿಣ ಧ್ರುವಗಳ ಅಂತರವಿದೆ. ಇದು ಒಂದು ಕುತೂಹಲಕಾರಿ ಸಂಗತಿಯಾಗಿದೆ. ಹೀಗೆ ಯಾಕೆ ?

ಭಾರತ ಇಂಗ್ಲಿಷ್ ವಸಾಹುತಶಾಹಿಯಡಿಯಲ್ಲಿತ್ತು. ಹಾಗೆಯೇ ದಲಿತರು ಹಿಂದೂ ವರ್ಣಧರ್ಮದ ವಸಾಹತುಶಾಹಿಯಲ್ಲಿದ್ದರು. ಈ ಎರಡು ವಸಾಹತುಶಾಹಿಗಳು ಏಕಕಾಲದಲ್ಲಿ ಸಂಘರ್ಷದಲ್ಲಿ ತೊಡಗಿದ್ದವು. ಆದ್ದರಿಂದಲೇ ಗಾಂಧೀಜಿ ಅವರ ಹೋರಾಟ ಇಂಗ್ಲಿಷ್ ವಿರುದ್ಧವಾಗಿದ್ದರೆ ಅಂಬೇಡ್ಕರರ ಹೋರಾಟ ಹಿಂದೂ ಬ್ರಾಹ್ಮಣ್ಯದ (ಬ್ರಾಹ್ಮಣ್ಯ ಒಂದು ತತ್ವ ಅನ್ನುವ ಅರ್ಥದಲ್ಲಿ ಮಾತ್ರ ; ಅಂಬೇಡ್ಕರ್ ಒಬ್ಬ ಬ್ರಾಹ್ಮಣ ಮೇಲ್ವರ್ಗದ ವ್ಯಕ್ತಿ ಅಥವಾ ದಲಿತೇತರ ಅನ್ನುವ ಕಾರಣಕ್ಕಾಗಿಯೇ ಯಾರನ್ನೂ ದ್ವೇಷಿಸುತ್ತಿದ್ದಿಲ್ಲವೆನ್ನುವ ಸಂಗತಿಯನ್ನು ನೆನಪಿನಲ್ಲಿಡಬೇಕು) ವಿರುದ್ಧವಾಗಿತ್ತು. ಸ್ವಾತಂತ್ರ್ಯ ಬಂದೊಡನೆ ಉಳಿದದ್ದೆಲ್ಲಾ ಸರಿಹೋಗುತ್ತದೆಂಬುದು ಗಾಂಧೀಜಿ ಅವರ ಆಲೋಚನೆಯಾಗಿರುವುದಾದರೆ ಈ ಒಳಗಿನ ಗುಲಾಮಗಿರಿ ಮೊದಲು ಹೋಗಲಿ, ಒಂದಾಗಿಯೇ ಬ್ರಿಟಿಷರ ವಿರುದ್ಧ ಹೋರಾಡುವ



ಪುಟ ೬೪ ರೂ. ೨೦/-

ನವಕರ್ನಾಟಕ ಪ್ರಕಾಶನ - ೧೯೯೮

ಆಲೋಚನೆ ಅಂಬೇಡ್ಕರರದ್ದಾಗಿದ್ದಾದರೆ ತಪ್ಪೇನೂ ಇರದು. ಗಾಂಧೀಜಿ ಅವರ ಸ್ವಾತಂತ್ರ್ಯ ಬಂದ ಮೇಲೆ ಎಲ್ಲಾ ಸರಿಯಾಗುತ್ತದೆ (ಬಡವರ ಕಣ್ಣೀರು ಉದುರಬಾರದು) ಎಂಬ ಆಶಯ ಎಷ್ಟು ಸುಳ್ಳಾಗಿದೆ ಎಂಬುದು ಈಗ ನಮಗೆ ನಿಚ್ಚಳವಾಗಿ ಅರಿವಾಗಿದೆ. ಅದನ್ನು ಮೊದಲೇ ಊಹಿಸಿದ್ದ ಅಂಬೇಡ್ಕರ್ ಮೊದಲು ದಲಿತರ ವಿಮೋಚನೆ ಆದ ಹೊರತು ಏನೂ ಆಗದು. ಬ್ರಿಟಿಷರ ಸಹಾಯದಿಂದ ದಲಿತರ ವಿಮೋಚನೆ ಮಾಡುತ್ತೇನೆ ಎಂದುಕೊಂಡಿದ್ದರಾದರೂ ಅದು ಸತ್ಯವಲ್ಲ ಎಂಬ ಅರಿವು ಆಗಲೇ ಬಂದುಬಿಟ್ಟಿತ್ತು. ಆದ್ದರಿಂದಲೇ ಅವರು ದುಂಡುಮೇಜಿನ ಸಮ್ಮೇಳನದಲ್ಲಿ ಬ್ರಿಟಿಷ್ ಆಧಿಪತ್ಯದಿಂದ ದಲಿತರಿಗೆ ಏನೂ ಆಗಲಾರದು. ಒಂದು ಸ್ವತಂತ್ರವಾದ ಸರಕಾರ ಭಾರತಕ್ಕೆ ಬರಬೇಕು. ಆದ್ದರಿಂದ ಇಂಗ್ಲಿಷರು ಬೇಗ ಗಂಟು ಮೂಟೆ ಕಟ್ಟುವುದೊಳ್ಳೆಯದೆಂದು ಅಂಬೇಡ್ಕರ್ ಗುಡುಗಿದರು. ಇದನ್ನು ತಿಳಿದ ಗಾಂಧೀಜಿ ದಂಗಾಗಿಹೋದರು.

ಹೀಗೆ ಸ್ವಾತಂತ್ರ್ಯ ಗಳಿಸುವಲ್ಲಿ ಅಂತರ್ಯದಲ್ಲಿ ಈ ಎರಡು ಶಕ್ತಿಗಳೂ ಪೂರಕವಾಗಿದ್ದವು ಎಂಬ ಆತ್ಯಂತಿಕ ಸತ್ಯವನ್ನು ಮನವರಿಕೆ ಮಾಡುವಲ್ಲಿ ಲೇಖಕರು ಮಹತ್ತನ್ನು ಸಾಧಿಸಿದ್ದಾರೆ. ಆದ್ದರಿಂದಲೇ ಈ ಎರಡು ತಾತ್ವಿಕತೆಗಳ ಸರಿಯಾದ ವಿಶ್ಲೇಷಣೆ ಇಂದಿನ ಅಗತ್ಯ ಎಂಬುದರ ಕಡೆ ದಲಿತರ ಮನಸ್ಸನ್ನು ಮ.ನ.ಜ. ಅವರು ಒಲಿಸ ಬಯಸುತ್ತಾರೆ. ಹಾಗೆಯೇ ಅದರ ಪ್ರಕ್ರಿಯೆಯಾಗಿ ಸವರ್ಣರಿಗೆ ಅಂಬೇಡ್ಕರರ ಸಿಟ್ಟಿನ ಮೂಲದಲ್ಲಿರುವ ಕಳಕಳಿ ಮತ್ತು ನ್ಯಾಯಶೀಲತೆಯನ್ನು ಪರಿಚಯಿಸುತ್ತಾರೆ. ಇದಕ್ಕೆ ಬೇಕಾಗುವ ಸಂಗತಿಗಳನ್ನು ಬಹಳ ಅಚ್ಚುಕಟ್ಟಾಗಿ ಮತ್ತು ಅನೇಕ ಮೂಲಗಳಿಂದ ಲೇಖಕರು ಸಂಘಟಿಸಿದ್ದಾರೆ. ಅದೇ ಸಂದರ್ಭದಲ್ಲಿ ಲೇಖಕರು ಗಾಂಧೀಜಿಯ ವರ್ಣಮಯ ವ್ಯಕ್ತಿತ್ವವನ್ನು ಕುಬ್ಜಗೊಳಿಸಿಲ್ಲ.

''ಗಾಂಧೀಜಿಯ ಅಹಿಂಸಾ ಸಂಗ್ರಾಮವು ಮೂಲತಃ ಅತ್ಯಂತ ಸಾಮಾನ್ಯರನ್ನೂ ಸಾಮಾನ್ಯ ಜನಸಮುದಾಯವನ್ನೂ ಆಧರಿಸಿತ್ತು. ಆದ್ದರಿಂದ ಆ ಮಹಾಸಂಗ್ರಾಮದಲ್ಲಿ ಪ್ರತಿಯೊಬ್ಬ ಸಾಮಾನ್ಯ ವ್ಯಕ್ತಿಯೂ ನೇರವಾಗಿ ಭಾಗಿಯಾಗುವುದರಿಂದ ಭಾರತವು ಗುಲಾಮಗಿರಿಯಿಂದ ಮುಕ್ತಿ ಪಡೆದು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಲು ಸಾಧ್ಯವಿತ್ತೆಂದು ಅವರು ನಂಬಿದ್ದರು... ಸನ್ಯಾಸಿ ವೇಷದ ಗಾಂಧೀಜಿ ತಮ್ಮ ಸಂಗ್ರಾಮಕ್ಕೆ ಜನಸಾಮಾನ್ಯರನ್ನು ಜಾಗೃತಗೊಳಿಸುವುದರ ಮೂಲಕ ಅವರಲ್ಲಿದ್ದ ಅಲಕ್ಷ್ಯ ಭಾವನೆ ಮತ್ತು ಸೋಮಾರಿತನವನ್ನು ಹೋಗಲಾಡಿಸಲು ಬಹುವಾಗಿ ಶ್ರಮಿಸಿದರು. ಯಾವ ಜನತೆಯಲ್ಲಿ ರಾಷ್ಟ್ರೀಯ ಭಾವನೆಗಳ ಗಂಧಗಾಳಿಯೂ ಇರಲಿಲ್ಲವ್ರೋ ಅವರಲ್ಲಿ ಅದರ ಬೀಜಾಂಕುರ ಮಾಡಲು ಮಾನವಸಾಧ್ಯವಾದ ಸರ್ವಪ್ರಯತ್ನವನ್ನೂ ಸಾಧ್ಯವೆನಿಸುವ ಸಕಲ ತಂತ್ರಗಳನ್ನೂ ಅವರು ಕೈಗೊಂಡರು'' (೧೪) ಎಂಬ ಸತ್ಯವನ್ನು ಗಾಂಧೀಜಿಯ ಬಗ್ಗೆ ತಿಳುಹುವಂತೆ :

''ಅಸ್ಪೃಶ್ಯತೆಯು ಜಾತಿಪದ್ಧತಿಯ ಒಂದು ಪರಿಣಾಮ. ಜಾತಿಗಳಿರುವವರೆಗೆ ಜಾತಿಭ್ರಷ್ಟರಾದ ಅಸ್ಪೃಶ್ಯರೂ ಇರುತ್ತಾರೆ. ವರ್ಣವ್ಯವಸ್ಥೆಯನ್ನು ಬುಡಮೇಲು ಮಾಡದೆ ಅಸ್ಪೃಶ್ಯತೆಗೆ ಪರಿಹಾರ ದೊರಕಲಾರದು'' ಎಂಬ ಅಂಬೇಡ್ಕರರ ತಾತ್ವಿಕತೆಯ ಖಾಸಾತನವನ್ನು ಲೇಖಕರು ತಿಳಿಸಿಕೊಡುತ್ತಾರೆ. ಭಾರತದಲ್ಲಿ ಪುರೋಹಿತಶಾಹಿ ವಿರುದ್ಧ ನಡೆದ ಅನೇಕ ಪ್ರತಿಭಟನೆ ಮತ್ತು ಸುಧಾರಣಾ ಚಳುವಳಿಗಳ ದೀರ್ಘ ಚರಿತ್ರೆಯು ಉಜ್ವಲ ಸ್ವರೂಪದ್ದಾಗಿತ್ತು. ಲೇಖಕರು ಅದನ್ನು ಮನ್ನಿಸಿದ್ದಾರೆ.

ಲೇಖಕರು ತಮ್ಮ ವಿಶ್ಲೇಷಣೆಯ ಆಶಯವನ್ನು 'ನಮ್ಮ ಮುಂದೆ ಮಾರ್ಕ್ಸ್ ಮತ್ತು ಮಾವೋತ್ಸೆ ತುಂಗರ ಮಾರ್ಗ ಅಥವಾ ಗಾಂಧಿ ಮತ್ತು ಅಂಬೇಡ್ಕರರ ಮಾರ್ಗ ಒಂದರ ಆಯ್ಕೆ ಅನಿವಾರ್ಯ', ಎನ್ನುತ್ತಾರೆ. ಅದರಲ್ಲಿ ಒಲವು ಇರುವುದು ಎರಡನೆಯದಕ್ಕೆ ಎಂಬುದು ಅವರ ಇಂಗಿತವಾಗಿದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅದಷ್ಟೇ ಸಾಲದೆನ್ನಿಸುತ್ತದೆ. ''ಊಳಿಗಮಾನ್ಯ ಸಂಸ್ಕೃತಿಗೆ ಆಧಾರವಾದ ಆಸ್ತಿ ಸಂಬಂಧಗಳು ಬದಲಾಗದೆ ಕೇವಲ ಬುದ್ಧಿಯ ಮಟ್ಟದಲ್ಲಿ ಇಂದಿನ ವ್ಯವಸ್ಥೆ ಬದಲಾಗುವ ಸಂಭವವೂ ಇಲ್ಲ. ಆದರೆ ಸಂವಿಧಾನದಲ್ಲಿ ಪರ್ಯಾಯ ಆಸ್ತಿ ಸಂಬಂಧಗಳನ್ನು ಪುರಸ್ಕರಿಸಲಾಗಿಲ್ಲ'' (ಪು. ೪) ಎಂದು ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಡಾ|| ಜಿ. ಆರ್. ಅವರ ಮಾತು ಏನನ್ನು ಧ್ವನಿಸುತ್ತದೆ? ಆದ್ದರಿಂದಲೇ ಇಂದಿನ ಸಂದರ್ಭವು ಎಷ್ಟು ಸಂಕೀರ್ಣವಾಗಿದೆಯೆಂದರೆ ಮಾರ್ಕ್ಸ್-ಮಾವೋರನ್ನು ಒಳಗೊಳ್ಳಬೇಕಾಗುತ್ತದೆ ಎಂಬುದೇ ಅದರ ಅಂತರ್ಯವಾಗಿದೆ.

ಈ ಚಿಕ್ಕ ಪುಸ್ತಕ ತೆರೆದು ತೋರುವ ವಿವರಗಳು ಇಷ್ಟೇ ಅಲ್ಲ, ಓದಿನ ಪ್ರಕ್ರಿಯೆಯಲ್ಲಿ ಇನ್ನೂ ಹೆಚ್ಚು ಪ್ರಶ್ನೆಗಳನ್ನು, ವಿವರವನ್ನು ನಮ್ಮ ಮುಂದಿಡುತ್ತದೆ. ಆದ್ದರಿಂದ ಪುಸ್ತಕದ ಓದು ಒಂದು ಸಾರ್ಥಕ ಕ್ರಿಯೆ ಮತ್ತು ಬೌದ್ಧಿಕ ಕ್ರಿಯೆಗೆ ಪ್ರೇರಣೆಯನ್ನೊದಗಿಸುತ್ತದೆ.

ಡಾ|| ಆರ್. ವಿ. ಭಂಡಾರಿ
ಅರೆಅಂಗಡಿ - ೫೮೧ ೪೩೦, ಹೊನ್ನಾವರ - ಉ. ಕ.

# ಇತಿಹಾಸವೋ ಪುರಾಣವೋ

**ಭಾ**ರತವಿನ್ನೂ ಬ್ರಿಟಿಷರ ವಸಾಹತು ಆಗಿದ್ದ ಕಾಲದಲ್ಲಿ ಕೆಲವು ಓರಿಯೆಂಟಲಿಸ್ಟರು ಭಾರತೀಯರಿಗೆ ಇತಿಹಾಸ ಪ್ರಜ್ಞೆ ಎನ್ನುವುದು ಗೊತ್ತಿಲ್ಲ, ಅವರು ಪುರಾಣಗಳನ್ನು ನಂಬುವವರು ಎಂದು ಪ್ರತಿಪಾದಿಸಿದ್ದರು. ಭಾರತೀಯರಲ್ಲಿ ಇತಿಹಾಸ ಪ್ರಜ್ಞೆ - ಇತ್ತು / ಇಲ್ಲ ಎಂಬ ವಿಷಯವಾಗಿ ಬಹಳ ಹಿಂದೆಯೇ ರಾಷ್ಟ್ರೀಯವಾದಿ ಚಿಂತಕರು ಬಹಳಷ್ಟು ಶಾಯಿಯನ್ನು ಹರಿಸಿದ್ದಾರೆ. ಮಿದುಳು, ನಾಲಿಗೆ, ಲೇಖನಿಗಳನ್ನು ಸಾಕಷ್ಟು ಮಸೆದಿದ್ದಾಗಿದೆ. ಆದರೆ ಈ ಮಂಥನದ ಫಲವೇನು ? ಅಂದಿನಿಂದ ಇಂದಿನವರೆಗೂ ಭಾರತದ ಸಕಲ ಸಂಸ್ಕೃತಿಯ ಗುತ್ತಿಗೆ ಸಂಸ್ಕೃತ ಸಾಹಿತ್ಯದಲ್ಲಿದೆ ಎಂದು ಭಾರತೀಯರು ನಂಬಿದ್ದು ಸಂಸ್ಕೃತ ಸಾಹಿತ್ಯದ ಚರಿತ್ರೆ ಬರೆದವರೂ, ಅದರ ಪಾಠ ಹೇಳುವವರೂ 'ಪಶ್ಚಿಮ ಬುದ್ಧಿ'ಯನ್ನು ಖಂಡಿಸುವುದಕ್ಕೆ ಬಹಳ ಶ್ರಮಪಡುತ್ತಾ ಬಂದಿದ್ದಾರೆ. - ಮಹಾಭಾರತಕ್ಕೆ ಆಖ್ಯಾನ ಎಂದು ಕರೆದಿರುವುದೇ ಇತಿಹಾಸದ ಅರಿವು ನಮ್ಮವರಿಗೆ ಇತ್ತು ಎಂಬುದಕ್ಕೆ ಕುರುಹಲ್ಲವೇ ? 'ಇತಿಹಾಸ - ಪುರಾಣ' ಎಂಬ ಜೋಡಿ ಪದಗಳು ಪ್ರಾಚೀನರ ಕಲಿಕೆಯ ಎರಡು ವಿಭಿನ್ನ ಜ್ಞಾನ ಶಾಖೆಗಳೇ ಹೊರತು ಒಂದೇ ಅಲ್ಲ. - ಬಾಣನ 'ಹರ್ಷಚರಿತ', ಕಲ್ಹಣನ 'ರಾಜತರಂಗಿಣಿ'ಗಳಂಥ ಐತಿಹಾಸಿಕ ಕೃತಿಗಳು ಹುಟ್ಟಿರುವುದು ಚಾರಿತ್ರಿಕ ಪ್ರಜ್ಞೆಯಿದ್ದುದರಿಂದಲೇ ಅಲ್ಲವೇ - ಮುಂತಾದ ನಿದರ್ಶನಗಳನ್ನು ಕೊಟ್ಟು ನಮ್ಮ ಹಳಬರಲ್ಲಿ ಚರಿತ್ರೆಯ ಬಗ್ಗೆ ಕಳಕಳಿ ಇತ್ತೆಂದು ಸಮರ್ಥಿಸಲು ಯತ್ನಿಸುತ್ತಾರೆ.

ಇಂಥ ವಾದವಾದರೂ ವಾಸಿ. ಏಕೆಂದರೆ ಸ್ವಂತ ಪರಂಪರೆಯಲ್ಲಿ ಏನಿದೆ ಎಂದು ನೋಡುವಷ್ಟು ವೈಚಾರಿಕ ಪ್ರಾಮಾಣಿಕತೆ ಇದರ ತಳದಲ್ಲಿದೆ. ಆದರೆ ಇನ್ನೂ ಕೆಲವು ಮಂದಿ ವ್ಯಾಸ, ವಾಲ್ಮೀಕಿ, ಭಾಸ, ಕಾಳಿದಾಸ, ಶೂದ್ರಕರಂಥ ನಮ್ಮ ಪರಂಪರೆಯ ಅತ್ಯಂತ ಪ್ರಮುಖರೂ, ಪ್ರಸಿದ್ಧರೂ ಆದ ಕವಿಗಳ ಬಗ್ಗೆ ಕೂಡ ಖಚಿತವಾಗಿ ನಮಗೆ ಏನೂ ಗೊತ್ತಿಲ್ಲ ಎಂಬುದಕ್ಕೆ ಬೇರೆ ರೀತಿಯ ಸಮರ್ಥನೆ ನೀಡುವುದುಂಟು. ಭಾರತದ ಪ್ರಾಚೀನ ಕವಿಗಳೆಲ್ಲ ಅತ್ಯಂತ ವಿನಯವಂತರು. ತಮ್ಮ ಹೆಸರು ಹೇಳಿದರೂ ಎಲ್ಲಿ ಅದು 'ಅಹಂಕಾರ'ವೆನ್ನಿಸೀತೋ ಎಂದು ಅವರಲ್ಲಿ ಸಂಕೋಚವಿತ್ತು. ಆದ್ದರಿಂದ ತಮ್ಮ ಈ ವಿನಮ್ರ ಭಾವನೆಯಿಂದಾಗಿ ಅವರುಗಳು ತಮ್ಮ ಕೃತಿಗಳಲ್ಲಿ ತಮ್ಮ ಬಗ್ಗೆ ಹೇಳಿಕೊಂಡಿಲ್ಲ – ಎನ್ನುವುದು ಇಂಥವರು ಕೊಡುವ ವಿವರಣೆ.

(ಮೇಲೆ ಹೇಳಿದ ಕವಿಗಳೆಲ್ಲ ಉದ್ದಾಮ ವೈದಿಕ - ಬ್ರಾಹ್ಮಣ ಪರಂಪರೆಯವರು ಎಂದೇ ಸಂಸ್ಕೃತದ ಔಪಚಾರಿಕ ಶಿಕ್ಷಣದಲ್ಲಿ ಇವರ ರಚನೆಗಳಿಗೆ ಮಾತ್ರ ಮಹತ್ವವನ್ನು ಪಂಡಿತರು ಕೊಡುತ್ತಾ ಬಂದಿದ್ದಾರೆ. ಬೌದ್ಧ / ಜೈನ ಪರಂಪರೆಯ ಯಾವ ಕವಿಯ ಕೃತಿಯನ್ನೂ ಸಂಸ್ಕೃತ ಪಾಠಶಾಲೆಯ ಅಥವಾ ಶಾಲಾ/ಕಾಲೇಜು ಭಾಷಾ ಕಲಿಕೆಯಲ್ಲಿ ಪಠ್ಯವಾಗಿ ಆರಿಸುವುದಿಲ್ಲ ಎಂಬುದನ್ನು ಗಮನಿಸಬಹುದು). ಆದರೆ ಈ ವ್ಯಾಸ, ವಾಲ್ಮೀಕಿ ಮೊದಲಾದವರನ್ನು ವೈದಿಕ - ಬ್ರಾಹ್ಮಣ ಪರಂಪರೆಯವರೇ ಎಂದು ನಾವು ಒಪ್ಪಿದರೆ, ಬ್ರಾಹ್ಮಣ ಧರ್ಮದಲ್ಲಿ ಸ್ವನಾಮ ಕೀರ್ತನೆಯು ಅವಿನಯ, ಅಹಂಕಾರ ಆಗಬಲ್ಲದೆ ಎಂಬ ಅನುಮಾನ ಹುಟ್ಟುತ್ತದೆ. ಏಕೆಂದರೆ ಬ್ರಾಹ್ಮಣ ಸಮುದಾಯದವರು ಪರಸ್ಪರರಿಗೆ ತಮ್ಮನ್ನು ಪರಿಚಯಿಸಿಕೊಳ್ಳುವಾಗ ಇಲ್ಲವೆ ನಮಸ್ಕರಿಸುವಾಗ ತಮ್ಮ ಗೋತ್ರ ಪ್ರವರವನ್ನು ಹೇಳಿ, ಕೊನೆಯಲ್ಲಿ ತಮ್ಮ ಹೆಸರನ್ನೂ ಹೇಳಿ '.... ಶರ್ಮಾS ಹಂ ಭೋ ಅಭಿವಾದಯೇ' ಎಂದು ನಮಸ್ಕರಿಸುತ್ತಾರೆ. ಈ ನಮಸ್ಕಾರ ವಿಧಿ ಒಂದು ಧಾರ್ಮಿಕ ಹಾಗೂ ಸಾಮಾಜಿಕ ಶಿಷ್ಟಾಚಾರ ಕೂಡ. ಇದರಲ್ಲಿ ಯಾರೂ ಯಾವ ಅಹಂಕಾರವನ್ನೂ ಕಾಣುವುದಿಲ್ಲ. ನಮ್ಮ ಕವಿವರ್ಯರೂ ಇಂಥ ಪರಂಪರೆಯಿಂದಲೇ ಬಂದವರಾಗಿದ್ದರೆ, ಈ ಸ್ವನಾಮ ಕಥನಕ್ಕೆ ತಮ್ಮ ಸಾಹಿತ್ಯ ಕೃತಿಗಳಲ್ಲಿ ಮಾತ್ರ ಮುಜುಗರಪಟ್ಟುಕೊಂಡರು ಎನ್ನುವುದು ವಿಚಿತ್ರವಾಗಿ ತೋರುತ್ತದೆ. (ಅಥವಾ ನಮ್ಮ ವಿವಾದಾತ್ಮಕ ಚಿಂತಕ ಡಾ|| ಶಂಕರ ಮೊಕಾಶಿ ಪುಣೇಕರ್ ವಾದಿಸುವ ಹಾಗೆ ವ್ಯಾಸ, ವಾಲ್ಮೀಕಿ, ಕಾಳಿದಾಸ, ಶೂದ್ರಕರೆಲ್ಲ ಬ್ರಾಹ್ಮಣೇತರ (ಬಹುಶಃ ದಲಿತ) ಸಂಪ್ರದಾಯಕ್ಕೆ ಸೇರಿದವರು ಎಂದು ನಂಬೋಣವೇ ? ಅದು ನಿಜವಾಗಿದ್ದರೆ, ನಮಗೆ ಅವರ ಬಗ್ಗೆ ಯಾಕೆ ಸ್ಪಷ್ಟ ಚಾರಿತ್ರಿಕ ಮಾಹಿತಿ ಸಿಗುವುದಿಲ್ಲ ಎಂಬುದಕ್ಕೆ ಬೇರೆ ಕಾರಣವೇ ಬೇಕಿಲ್ಲ!)

ಅದೇನೇ ಇರಲಿ, ಪ್ರಸ್ತುತ ಇಲ್ಲಿ ಚರ್ಚಿಸಲು ಹೊರಟಿದ್ದು ಭಾರತೀಯರಲ್ಲಿನ ಚಾರಿತ್ರಿಕ ಪ್ರಜ್ಞೆ ಇಲ್ಲ ಎಂಬುದನ್ನಾಗಲೀ, ಕಾಳಿದಾಸಾದಿಗಳ ಜಾತಿ ಮೂಲವನ್ನಾಗಲೀ ಅಲ್ಲ. ನಾವು ಭಾರತೀಯರಾದ್ದರಿಂದ ನಮ್ಮ ನಾಡಿಗೆ ಸಂಬಂಧಿಸಿದ ಯಾವ ಅಂಶವನ್ನು ಬೇರೊಬ್ಬರು ಪ್ರಶ್ನಿಸಿದರೂ, ನಾವು ಎಲ್ಲೋ ಒಂದು ಕಡೆ ನೊಂದುಕೊಂಡು, ನಮ್ಮಲ್ಲಿರುವುದೆಲ್ಲಾ ಶ್ರೇಷ್ಠವಾಗಿಯೇ ಇದೆಯೆಂದು ಆತ್ಮಸಮರ್ಥನೆಗೆ ತೊಡಗಲು ಯತ್ನಿಸುತ್ತೇವಲ್ಲಾ ಅದೇಕೆ ಎಂಬುದನ್ನು ಸ್ವಲ್ಪ ಪರೀಕ್ಷಿಸಬೇಕು ಎನ್ನುವುದು ನನ್ನ ಆಶಯವಾಗಿದೆ. ನಾವು ಸ್ವತಃ ಶ್ರೇಷ್ಠ ಎಂದು ಮೊದಲು ನಂಬಿಕೊಂಡು, ಆ ನಂಬಿಕೆಯ ಬಲದಿಂದ 'ಇತರ'ರನ್ನು ಅರ್ಥಮಾಡಿಕೊಳ್ಳಬಹುದು ಎನ್ನುವುದು ಒಂದು ಅಹಂ ಕೇಂದ್ರಿತ ವಿಚಾರಸರಣಿ. ಇದನ್ನು ಭಾರತೀಯರು ಮಾತ್ರವಲ್ಲ; ಪಾಶ್ಚಿಮಾತ್ಯರೂ ತೋರುತ್ತಾರೆ. ಎಲ್ಲ ಜಗತ್ತೂ ಕ್ರೈಸ್ತ ಧರ್ಮದ ಮೂಲಕ ನಾಗರಿಕವಾಗಬಲ್ಲದು ಎಂದು ಅಥವಾ ಜಗತ್ತಿನ ಎಲ್ಲ ವೈಜ್ಞಾನಿಕ, ತತ್ವಶಾಸ್ತ್ರೀಯ ಚಿಂತನೆಗಳೆಲ್ಲಾ ಗ್ರೀಸ್ ದೇಶದ ಮೂಲದ್ದು ಎಂದೋ ಹೇಳುವುದು ಅಸಮಂಜಸವೇ. ಆದರೆ ಅದೇ ರೀತಿ ನಮ್ಮ ಭವ್ಯ ವೈದಿಕ ಸಾಹಿತ್ಯ ಪರಂಪರೆಯಲ್ಲಿ ಜಗತ್ತಿನ ಇದುವರೆಗಿನ ಎಲ್ಲ ವೈಜ್ಞಾನಿಕ ಶಾಸ್ತ್ರೀಯ ವಿಚಾರಗಳೂ ಬೀಜರೂಪದಲ್ಲಿ ಇದ್ದೇ ಇವೆ ಎಂದು ವಾದಿಸಲು ಯತ್ನಿಸುವುದೂ ಅಸಮಂಜಸವೇ. ಆದರೆ ಈ ಎರಡನೆಯ ಅಸಾಂಗತ್ಯವನ್ನು ಭಾರತದ ಸನಾತನ ಪರಂಪರೆಯ ಅಭಿಮಾನಿಗಳು ಗಮನಿಸದೇ ಹೋಗುತ್ತಾರೆ.

ಜಗತ್ತಿನ ನಾಗರಿಕತೆಯ ವಿಕಾಸದಲ್ಲಿ ಬೇರೆ ಬೇರೆ ಚಾರಿತ್ರಿಕ ಕಾಲಘಟ್ಟಗಳಲ್ಲಿ ಎಷ್ಟೋ ವಿಭಿನ್ನ ವಿಚಾರಗಳು ಆವಿಷ್ಕಾರಗೊಂಡಿವೆ ಎನ್ನುವುದು ಚಾರಿತ್ರಿಕ ವಾಸ್ತವದ ದೃಷ್ಟಿ. ಆದರೆ ಆ ಎಲ್ಲಾ ವಿಚಾರಗಳೂ ಭಾರತದ ಮೂಲದಿಂದಲೇ ಅಲ್ಲಿಗೆ ಹೋದವು ಎಂದು ಅಥವಾ ಅಲ್ಲಿ ಅವು ಕಾಣಿಸಿಕೊಳ್ಳುವ ಮೊದಲೇ ಭಾರತದಲ್ಲಿ, ಅದರಲ್ಲೂ ನಮ್ಮ ವೇದಗಳಲ್ಲಿ, ಅವು ಸೇರಿಕೊಂಡಿವೆ ಎಂದು ವಾದಿಸುವ ದೃಷ್ಟಿ ಚರಿತ್ರೆಯನ್ನು ಹಿಂದಿನವರ ಮೂಲಕ ನೋಡುವ ದೃಷ್ಟಿಯಾಗಿರುತ್ತದೆ. ವರ್ತಮಾನ ಮತ್ತು ಭವಿಷ್ಯದ ಸ್ಥಿತಿಗಳ ಭಾರವನ್ನೆಲ್ಲಾ ಹಿಂದಿನ / ಪ್ರಾಚೀನ/ ಪ್ರಾಕ್ತನ ಅಥವಾ ಭೂತಕಾಲದ ಮೇಲೆ ಹೊರೆಸುವ ದೃಷ್ಟಿ ಭಾರತೀಯರಿಗೇ ವಿಶಿಷ್ಟವಾದದ್ದು ಎಂದು ತೋರುತ್ತದೆ. ನಮ್ಮ ಹಳೆಯ ಸಾಹಿತ್ಯ ಪರಂಪರೆಯಲ್ಲಿ ಉದ್ದಕ್ಕೂ ಈ ಬಗೆಯ ಪ್ರಾಕ್ತನತೆಯ ಬಗೆಗಿನ ಪ್ರೇಮವನ್ನು ಗುರುತಿಸಲು ಸಾಧ್ಯವಿದೆ.

ಉದಾಹರಣೆಗೆ, ವ್ಯಾಕರಣ ಶಾಸ್ತ್ರಜ್ಞರು ಅನುಸರಿಸುವ ಒಂದು ನಿಯಮ ಹೀಗಿದೆ : ಒಂದು ಭಾಷಾ ಪ್ರಯೋಗಕ್ಕೆ ಅನ್ವಯಿಸುವ ಎರಡು ಅಥವಾ ಹೆಚ್ಚು ನಿಯಮಗಳಿದ್ದಾಗ, ಯಾವುದು ಮುಖ್ಯವಾಗಬೇಕು ಎಂದರೆ 'ಪೂರ್ವಾತ್ ಪೂರ್ವಂ' – ಯಾವುದು ಮೊದಲು ಅಥವಾ ಹಿಂದೆಯೇ ರೂಪಿತವಾಗಿತ್ತೋ ಅದು ! ಆ ಪಕ್ಷಕ್ಕೆ ಮುಂದಿನ ನಿಯಮಗಳ ಅವಶ್ಯಕತೆಯಾದರೂ ಏನು ಎಂಬ ಪ್ರಶ್ನೆ ಯಾರೂ ಕೇಳುವುದಿಲ್ಲ; ಕೇಳಿದರೂ 'ಪಾಣಿನಿಯ ನಿಯಮ ಹಾಗಿದೆ' ಎಂಬ ಉತ್ತರ ಸಿಗಬಹುದು ಅಷ್ಟೆ.

ಅಷ್ಟೇಕೆ ? 'ಇತಿಹಾಸ' ಮತ್ತು 'ಪುರಾಣ' ಎಂಬ ಶಬ್ದಗಳನ್ನೇ ನೋಡೋಣ. 'ಇತಿ-ಹ-ಆಸ' ಎಂದರೆ ಹಿಂದೆ ಹೀಗೆ ಇತ್ತು ಎಂದೂ 'ಪುರಾ ನವಂ' ಪುರಾಣಂ – ಎಂದರೆ 'ಇದು ಹಿಂದೆ ಹೊಸದಾಗಿದ್ದುದು' ಎಂದೂ ಸಾಮಾನ್ಯವಾಗಿ ಈ ಪದಗಳಿಗೆ ವಿವರಣೆ ನೀಡುತ್ತಾರೆ. 'ಹಿಂದೆ ಹೀಗಿತ್ತು' ಅಥವಾ 'ಹಿಂದೆ ಹೊಸದಾಗಿತ್ತು' ಎಂದರೆ ಎರಡರ ಅರ್ಥವೂ ಗತಕಾಲವನ್ನೇ ಸೂಚಿಸುವುದಿಲ್ಲವೇ ? ವರ್ತಮಾನ ಮತ್ತು ಭವಿಷ್ಯಗಳನ್ನು ಗ್ರಹಿಸಲು ಭೂತಕಾಲವನ್ನು ತಿಳಿದಿರಬೇಕು ಎಂಬ ದೃಷ್ಟಿ ನಮ್ಮ ಹಳಬರದಾಗಿದ್ದರೆ, ಅದು ಶುದ್ಧ ಚಾರಿತ್ರಿಕ ದೃಷ್ಟಿಕೋನವೇ ಸರಿ. ಆದರೆ ವರ್ತಮಾನ ಮತ್ತು ಭವಿಷ್ಯತ್ತುಗಳೆರಡರ ಅಸ್ತಿತ್ವವನ್ನೂ ಇಲ್ಲವಾಗಿಸಲು ಭೂತಕಾಲದ ಮೊರೆಹೊಕ್ಕಲ್ಲಿ ಅದರ ಅರ್ಥವೇನು ? ನಮ್ಮ ಪುರಾಣಗಳು, ಶಾಸ್ತ್ರಗ್ರಂಥಗಳು, ಕವಿಗಳು ಎಲ್ಲರೂ ಪ್ರಾಚೀನತ್ವಕ್ಕೆ ಎಷ್ಟು, ಹೇಗೆ ಮತ್ತು ಏಕೆ ಆದ್ಯತೆ ನೀಡಿದ್ದಾರೆಂದು ನೋಡಿದರೆ ಅನೇಕ ಕುತೂಹಲಕಾರಿ ಅಂಶಗಳು ಕಂಡುಬರುತ್ತವೆ.

ಪುರಾಣಗಳು - ಬೃಹತ್ ಪ್ರಮಾಣದ ವಿಶ್ವಕೋಶಗಳಿದ್ದಂತೆ. ಅವುಗಳಲ್ಲಿ ನಾನಾ ಬಗೆಯ ವಸ್ತುಗಳಿರುತ್ತವೆ. ಅಂಥ ವಸ್ತುಗಳು ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಪ್ರದೇಶಗಳ, ಬೇರೆ ಬೇರೆ ಜನರ ಅವಶ್ಯಕತೆಗಳಿಗೆ ಅನುಗುಣವಾಗಿ ಅಲ್ಲಿ ಸೇರ್ಪಡೆ ಆಗಿರುತ್ತವೆ. ಆದ್ದರಿಂದ ನಮ್ಮ ಪುರಾಣಗಳನ್ನು ನಾವು ವೇದವ್ಯಾಸ ರಚಿಸಿದ್ದೆಂದು ಹೇಳಿಕೊಂಡರೂ ಅವು ಅನೇಕ ಅಜ್ಞಾತ ಕರ್ತೃಗಳಿಂದ

ಡಾ|| ಬಿ. ಎನ್. ಸುಮಿತ್ರಾಬಾಯಿ

ಹುಟ್ಟಿಕೊಂಡಂಥ ರಚನೆಗಳು. ಆದರೆ ಎಲ್ಲಿಯೂ ಯಾರೊಬ್ಬ ಕರ್ತೃವೂ ಇದು ತನ್ನಿಂದ ಇಂಥ ಸ್ಥಳದಲ್ಲಿ ಇಂಥ ಕಾಲದಲ್ಲಿ ಜನ ಹಿತಾರ್ಥವಾಗಿ ಬರೆಯಲ್ಪಟ್ಟಿತು ಎಂದು ಉಲ್ಲೇಖಿಸುವುದಿಲ್ಲ. ಬದಲಾಗಿ ಯಾವುದೇ ವ್ರತ, ಕಥೆ, ಧಾರ್ಮಿಕ ವಿಧಿ ಅಥವಾ ಶಾಸ್ತ್ರ ವಿಚಾರವೇ ಆದರೂ ಹಿಂದೆ ಸಾಕ್ಷಾತ್ ಸೃಷ್ಟಿಕರ್ತನಿಂದ ನಾರದ ಮುನಿಗೆ, 'ವಿಷ್ಣುವಿನಿಂದ ಲಕ್ಷ್ಮೀದೇವಿಗೆ', 'ಶಿವನಿಂದ ಗಿರಿಜೆಗೆ' ಇದು ಹೇಳಲ್ಪಟ್ಟಿತ್ತು.... ಇತ್ಯಾದಿಯಾಗಿ ದೇವತಾ ಮೂಲಕ್ಕೆ ಅಥವಾ ಯಾರೋ ಒಬ್ಬ ಪ್ರಾಚೀನ ಋಷಿಯ ಹೆಸರಿಗೆ ಆರೋಪಿಸಿ ನಿರೂಪಿತವಾಗಿರುತ್ತದೆ. ಭರತಖಂಡದ ಯಾವುದೋ ಒಂದು ಚಿಕ್ಕ/ದೊಡ್ಡ ಊರಲ್ಲಿ ಕೂತು, ಕಲಿಗಾಲದ ಯಾವುದೋ ಒಂದು ಖಂಡದಲ್ಲಿ ಪಂಡಿತ ಪುರೋಹಿತನೊಬ್ಬ ಅದನ್ನು ಬರೆದಿರಬಹುದು. ಆದರೆ ಹಾಗೆ ಯಾರೋ ಪುರಾಣಿಕ ತಾನೇ ವ್ಯಾಖ್ಯಾನ ಪ್ರವಚನದ ನಡುವೆ ತನಗೆ ಹೊಳೆದ ವಿಚಾರವನ್ನೇ ಜೋಡಿಸಿದ್ದಾಗ ಅದು ತನ್ನ ಕಾರ್ಯವೆಂದೂ ಅದಕ್ಕೆ ತಾನೇ ಜವಾಬ್ದಾರನೆಂದೂ ಹೇಳಿದರೆ, ಜನ ಅದನ್ನು ಸ್ವೀಕರಿಸುತ್ತಾರೆಯೇ ? ಆದ್ದರಿಂದಲೇ ಆತ ತನ್ನ ಮಾತನ್ನು ಯಾವುದೋ ದೇವರ ಬಾಯಿಗೆ ಹಾಕಿಬಿಟ್ಟು, ಜನರು ಎಂದೂ ಅದನ್ನು ಪ್ರಶ್ನಿಸದ ರೀತಿಯಲ್ಲಿ ನಂಬಿಕೆ, ಶ್ರದ್ಧೆಗಳ ಸೂತ್ರದಿಂದ ಅದನ್ನು ದಿಗ್ಬಂಧನ ಮಾಡಿಬಿಡುತ್ತಾನೆ ! ದೇವಮೂಲದಿಂದ ಹುಟ್ಟಿದ ಕಥೆಗೆ ಕಾಲದ ಪ್ರಶ್ನೆ ಎಲ್ಲಿ ಬಂದೀತು ? ಆದ್ದರಿಂದ ಅದು 'ಕಾಲಾತೀತ' ಅಂದರೆ ಅದು ಚರಿತ್ರೆಗೆ ಅತೀತ ಕೂಡ ಆಗುತ್ತದೆ.

ಭಾರತೀಯರ ಸಾಂಪ್ರದಾಯಿಕ ನಂಬಿಕೆಯು ಚರಿತ್ರೆಯನ್ನು ಸರಳ ರೇಖಾಕೃತಿಯಲ್ಲಿ ಗ್ರಹಿಸುವುದಿಲ್ಲ; ಬದಲಾಗಿ ನಮ್ಮದು ಚಕ್ರಗತಿಯ ಚಾರಿತ್ರಿಕತೆ ಎಂಬುದು ಬಹು ಹಿಂದೆಯೇ ಸ್ಥಾಪಿತವಾದ ಸಂಗತಿ. ಪ್ರಸಿದ್ಧ ರಾಜಕೀಯ ತತ್ವಜ್ಞಾನಿ ಲೋಹಿಯಾ ಭಾರತದ ಸಾಂಸ್ಕೃತಿಕ ಚರಿತ್ರೆಯನ್ನು 'ಇತಿಹಾಸ ಚಕ್ರ'ವೆಂದೇ ಗುರುತಿಸಿದ್ದರು. ನಮ್ಮ ದೇಶದಲ್ಲಿ ಹುಟ್ಟಿದ ಬೌದ್ಧ ಮತ್ತು ಜೈನ ಧರ್ಮಗಳು 'ಧರ್ಮಚಕ್ರ'ದ ಪ್ರವರ್ತನೆಯನ್ನು ಕುರಿತು ಹೇಳುತ್ತವೆ. ಹಿಂದೂ ಧರ್ಮದ ಪುರಾಣಗಳು ಹೇಳುವ ಸೃಷ್ಟಿ, ಸ್ಥಿತಿ, ಲಯದ ನಿರಂತರ ಪುನರಾವರ್ತನೆ, ಜೈನರು ಪ್ರತಿಪಾದಿಸುವ ೬ ಬಗೆಯ ಕಾಲಗಳ ಚಲನೆ, ಅವತಾರ ಕಲ್ಪನೆ, ಕರ್ಮಸಿದ್ಧಾಂತ ಮತ್ತು ಆತ್ಮನ ಪುನರ್‌ಜನ್ಮದ ಸಿದ್ಧಾಂತ ಮುಂತಾದ ಎಲ್ಲಾ ಭಾರತೀಯ ಪರಿಕಲ್ಪನೆಗಳೂ ಹೀಗೇ ನಿರಂತರವಾಗಿ ಸುತ್ತುತ್ತಿರುವ ಚರಿತ್ರೆಯ ದೃಷ್ಟಿಯನ್ನೇ ಎತ್ತಿಹಿಡಿದಿವೆ. ಈ ರೀತಿಯ ಕಾಲಗಣನೆಯ ಪದ್ಧತಿಯಲ್ಲಿ ಸಹಜವಾಗಿ ವರ್ತಮಾನ, ಭೂತ, ಭವಿಷ್ಯತ್ತುಗಳು ಪ್ರತ್ಯೇಕ ಕಾಲದ ಘಟಕಗಳಲ್ಲ. ಬದಲಾಗಿ ಎಲ್ಲವೂ ಮತ್ತೊಂದರಲ್ಲಿ ಮೊದಲೇ ಇದೆ ಅಥವಾ ಇನ್ನೊಂದರಲ್ಲಿ ಸಮಾವೇಶಗೊಂಡಿರುತ್ತದೆ – ಬೀಜ - ವೃಕ್ಷ ನ್ಯಾಯದ ಹಾಗೆ.

ಈ ಚಕ್ರಾಕೃತಿಯ ಚರಿತ್ರೆಯ ವಿಚಾರವನ್ನು ಭಾರತೀಯ ಚಿಂತಕರು ಹೇಗೆ ಬಳಸಿಕೊಳ್ಳುತ್ತಾರೆ ನೋಡೋಣ. ಅತ್ಯಂತ ಬಲಿಷ್ಠವಾದ ತತ್ವದರ್ಶನವನ್ನು ಸಾಕ್ಷಾತ್ ಭಗವಂತನ ಅವತಾರಿಯಾದ ಕೃಷ್ಣನು ಅರ್ಜುನನಿಗೆ ರಣರಂಗದ ನಡುವೆ ಉಪದೇಶಿಸಿದನೆಂದು ನಾವು ನಂಬುತ್ತೇವೆ. ಈ ಭಗವದ್ಗೀತೆ ಕೃಷ್ಣನೆಂಬ ಯೋಗಾಚಾರ್ಯನಿಂದ ಉಪದೇಶದ ರೂಪದಲ್ಲಿ ಹರಿದುಬಂದಿದೆ ಎಂದು ನಾವು ಇಟ್ಟುಕೊಂಡರೂ ಸಾಕ್ಷಾತ್ ಕೃಷ್ಣನೇ ಹೇಳುವ ಈ ನುಡಿಗಳನ್ನು ಗಮನಿಸಬೇಕು :

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥
ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥
ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।

*ಭಗವದ್ಗೀತೆ : ೪. ೧-೩*

'ಹಿಂದೆ ನಾನು ಈ ಯೋಗವನ್ನು ವಿವಸ್ವತನಿಗೆ ಹೇಳಿದ್ದೆ. ವಿವಸ್ವತನು ಮನುವಿಗೆ, ಮನುವು ಇಕ್ಷ್ವಾಕುವಿಗೆ ಇದನ್ನು ತಿಳಿಸಿಕೊಟ್ಟರು. ಹೀಗೆ ಪರಂಪರೆಯಿಂದ ದೊರೆತ ಈ ಯೋಗತತ್ವವನ್ನು ರಾಜರ್ಷಿಗಳು ಅರಿತಿರುತ್ತಾರೆ. ಈ ಯೋಗವು ದೊಡ್ಡ ಕಾಲದ ಅಂತರದಲ್ಲಿ ನಷ್ಟವಾಗಿತ್ತು. ಈಗ ಅದೇ **ಪುರಾತನ** (ಒತ್ತು ನನ್ನದು) ಯೋಗವನ್ನೇ ನಿನಗೆ ನಾನು ತಿಳಿಸಿದ್ದೇನೆ.'

ಅರ್ಥಾತ್ ಇದು ದ್ವಾಪರ - ಕಲಿಗಳ ಸಂಧಿಕಾಲದಲ್ಲಿ ಕೃಷ್ಣ ತಿಳಿಸಿಕೊಟ್ಟ ತತ್ವವಲ್ಲ; ಅದಕ್ಕೂ ಹಿಂದೆ ಅನಂತಕಾಲದಿಂದಲೂ ಅಸ್ತಿತ್ವದಲ್ಲಿದ್ದ ವಿಚಾರಧಾರೆ ! ಈ ರೀತಿ, ಒಬ್ಬ ಕಥಕ/ವಕ್ತಾರ ತನ್ನ ಮಾತು/ವಿಚಾರ ಯಾವುದನ್ನೂ ತನಗಿಂತ ಹಿಂದಿನದೆಂದೇ ಪ್ರತಿಪಾದಿಸುವುದಕ್ಕೆ ಸಾಕ್ಷಾತ್ ಭಗವಂತನೂ ಮುದ್ರೆಯೊತ್ತಿದಂತೆಯೇ ಆಗಿದೆ. ಅಂದಮೇಲೆ ಇನ್ನು ಹುಲುಮಾನವರ ಪಾಡನ್ನು ಏನು ಹೇಳುವುದು ? ಅತಿಶ್ರೇಷ್ಠ ಹಿಂದೂ ತತ್ವದರ್ಶನ ಗ್ರಂಥದ ಈ ಮಾದರಿಯನ್ನು ಅತ್ಯಂತ ಲೌಕಿಕ ಜೀವನದ ಅವಶ್ಯಕತೆಗೂ ಅನ್ವಯಿಸಲು ಶಾಸ್ತ್ರಕಾರರು ಯತ್ನಿಸುತ್ತಾರೆ.

ಭರತಮುನಿ ನಾಟ್ಯಶಾಸ್ತ್ರದ ಪ್ರವರ್ತಕ ಎಂಬುದು ನಮ್ಮ ಪರಂಪರಾಗತ ನಂಬಿಕೆ. ನಾಟ್ಯಶಾಸ್ತ್ರ ಗ್ರಂಥದಲ್ಲಿ ಒಂದು ಅಧ್ಯಾಯವು 'ನಾಟ್ಯವೇದೋತ್ಪತ್ತಿ'ಯನ್ನು ಕುರಿತದ್ದು. ಆ ಅಧ್ಯಾಯದಲ್ಲಿ ಲೋಕದ ಜನರ ಮನೋರಂಜನೆಗೆ ಒದಗಬಲ್ಲ ಒಂದು ಸಾಧನವನ್ನು ನಿರ್ಮಿಸಿಕೊಡಬೇಕೆಂದು ದೇವತೆಗಳು ಬೇಡಿಕೊಂಡಾಗ ಸೃಷ್ಟಿಕರ್ತ ಬ್ರಹ್ಮನು ನಾಲ್ಕು ವೇದಗಳಿಂದ ಒಂದೊಂದು ಕಲಾಂಶವನ್ನು ತೆಗೆದು ಐದನೆಯ ನಾಟ್ಯವೇದವನ್ನು ಸೃಷ್ಟಿಸಿದನು ಎಂದು ಹೇಳಿದೆ. ಜನಸಮುದಾಯದ ನಡುವೆ ಇದ್ದ ಅಭಿನಯ ಕಲೆಯ ಯಾವೆಲ್ಲಾ ಮಾದರಿಗಳನ್ನು ಕ್ರೋಢೀಕರಿಸಿ, ಜಾನಪದವನ್ನು ಶಿಷ್ಟವಾಗಿಸಿ ಈ ನಾಟ್ಯಶಾಸ್ತ್ರದ ರಚನೆ ಆಗಿದ್ದರೂ ಅದರ ಕರ್ತೃವಾದ ಪಂಡಿತ ತನ್ನ ವಿದ್ವತ್ತಿನ ಬಲದಿಂದ ತಾನು ಇದನ್ನು ಹೀಗೆ ಸಕ್ರಮವಾಗಿಸಿ 'ಶಾಸ್ತ್ರೀಯ'ವಾಗಿಸಿದೆನೆಂದು ಹೇಳಲಾರ. ಬದಲಾಗಿ ಅದಕ್ಕೆ ವೇದಕಾಲದ ಭರತಮುನಿಯೇ ಕರ್ತೃ. ಆದರೂ ಆತ ಕೂಡ ಆ ಕಲೆಯ ಸೃಷ್ಟಿಕರ್ತನಾದ ಬ್ರಹ್ಮನಿಂದ ಅದನ್ನು ಸ್ವೀಕರಿಸಿ ಬಳಸಿಕೊಂಡವನು ಮಾತ್ರ.

ನಾಟ್ಯವೆನ್ನುವುದು ಸಹಸ್ರಾರು ತಲೆಮಾರುಗಳ ಅವಧಿಯಲ್ಲಿ ಹೀಗೆ ಶಿಷ್ಟ ಕಲಾ ಪ್ರಕಾರ ಆದದ್ದು. ಆದ್ದರಿಂದ ಅದಕ್ಕೆ ಒಬ್ಬ ವ್ಯಕ್ತಿಯ ಮೂಲವನ್ನು ಹೇಳುವುದು ಅಸಾಧ್ಯ ಸರಿ. ಆದರೆ ಇದಕ್ಕಿಂತಲೂ ಹೆಚ್ಚು ಐಹಿಕ ಜೀವನದ ವ್ಯವಹಾರಗಳನ್ನು ಕುರಿತು ಪ್ರತಿಪಾದಿಸುವ 'ಶುಕ್ರ ನೀತಿ ಸಾರ' ಎಂಬ ಒಂದು ರಾಜನೀತಿ ಗ್ರಂಥದಲ್ಲಿನ ಈ ಉದಾಹರಣೆಯನ್ನು ನೋಡಿ.

ಈ 'ನೀತಿಸಾರ' ಮುಖ್ಯವಾಗಿ ಕೌಟಿಲ್ಯನ 'ಅರ್ಥಶಾಸ್ತ್ರ'ದ ಪ್ರಭಾವದಿಂದ ಹುಟ್ಟಿದ ಒಂದು ಗ್ರಂಥ. ಗ್ರಂಥಕರ್ತನು ಕೌಟಿಲ್ಯ ಅಥವಾ ವಿಷ್ಣುಗುಪ್ತನಿಗೆ ತನ್ನ ಕೃತಜ್ಞತೆಯನ್ನು ಸ್ಪಷ್ಟವಾಗಿ ಹೇಳಿಯೂ ಇದ್ದಾನೆ. ಹಾಗಿದ್ದರೂ ಈ ಗ್ರಂಥವೇ ಕೌಟಿಲ್ಯನಿಗಿಂತ ಪ್ರಾಚೀನ ರಾಜನೀತಿ ಶಾಖೆಯ ಪ್ರವರ್ತಕನೆಂದು ನಂಬುವ 'ಶುಕ್ರಾಚಾರ್ಯ'ನ ಹೆಸರು ಹೊತ್ತಿರುವುದು ಗಮನಾರ್ಹ. ಅದಕ್ಕಿಂತ ಕುತೂಹಲದ ಸಂಗತಿಯೊಂದನ್ನು ಇಲ್ಲಿ ಉದಾಹರಿಸಬಹುದು.

ಈ ಗ್ರಂಥದಲ್ಲಿ ಎಲ್ಲಾ ಬಗೆಯ ರಾಜಕೀಯ, ವಾಣಿಜ್ಯ ವ್ಯವಹಾರಗಳನ್ನೂ ಲಿಖಿತ ದಾಖಲೆಗಳ ಮೂಲಕ ನಡೆಸುವುದು ಅತ್ಯಗತ್ಯ ಎಂದು ಸಾರಿ ಹೇಳುವ 'ಲೇಖ್ಯ ಪ್ರಕರಣ' ಎಂಬ ಅಧ್ಯಾಯವಿದೆ. ರಾಜಾಜ್ಞೆ ಅಥವಾ ಆಡಳಿತದ ವ್ಯವಹಾರಗಳಷ್ಟೇ ಅಲ್ಲ; ಖಾಸಗಿಯಾಗಿ ವ್ಯಕ್ತಿಗಳು ನಡೆಸುವ ಹಣದ, ಆಸ್ತಿ ಪಾಸ್ತಿ, ದಾನ ಮೊದಲಾದ ಎಲ್ಲ ವಹಿವಾಟುಗಳಿಗೂ 'ಲೇಖ್ಯ' ಎಂದರೆ ಪತ್ರರೂಪದಲ್ಲಿ ದಾಖಲಿಸಿ, ಸಾಕ್ಷಿಗಳ ರುಜು, ಅಧಿಕಾರಿಗಳ ಮೊಹರು ಒತ್ತಿರುವ ಪತ್ರಗಳು ಅಗತ್ಯ ಎಂದು ಗ್ರಂಥಕರ್ತನು ಒತ್ತಿ ಒತ್ತಿ ಹೇಳುತ್ತಾನೆ. ಈ ವಿಚಾರ ಎಷ್ಟು ಸಾರ್ವಕಾಲಿಕ ಎಂದರೆ ಇವನು ಹೇಳಿರುವ ರೀತಿಯಲ್ಲೇ ಇಂದಿಗೂ ಅನೇಕ ವ್ಯವಹಾರಗಳು ಜರುಗುತ್ತಿರುವುದನ್ನು ಕಾಣಬಹುದು. ಆದರೆ ಇಷ್ಟು ಲೌಕಿಕವಾದ ತತ್ವ/ ನಿಯಮವನ್ನೂ ಈತ ತಾನೇ ಚಿಂತಿಸಿ, ಕಟ್ಟಿಕೊಟ್ಟೆ ಎನ್ನುವುದಿಲ್ಲ. ಬದಲಾಗಿ ಸೃಷ್ಟಿಕರ್ತನು ವೇದದಿಂದ ಛಂದ, ಅಕ್ಷರಗಳನ್ನು ಎತ್ತಿಕೊಂಡು ಈ 'ಲೇಖ್ಯ'ವೆಂಬ ಸಾಧನವನ್ನು ಸೃಷ್ಟಿಸಿಕೊಟ್ಟನು. ಮರವೆ ಎನ್ನುವುದು ಮನುಷ್ಯನ ಸಹಜ ದೌರ್ಬಲ್ಯ. ಆದ್ದರಿಂದ ನಡೆಸುವ ವ್ಯವಹಾರಗಳಿಗೆ ಲಿಖಿತ ದಾಖಲೆಯಿದ್ದರೆ ವ್ಯವಹಾರ ಕ್ಷೇಮದಿಂದ ನಡೆಯಬಲ್ಲದು - ಎಂದು ಈ ಪಂಡಿತನು ಹೇಳುತ್ತಾನೆ !

ಈ ರೀತಿಯಾಗಿ ನಮ್ಮ ನಾಡಿನಲ್ಲಿ ಯಾವುದೇ ಪರಂಪರಾಗತ ವಿಚಾರಧಾರೆಯಿದ್ದರೂ ಅದು 'ಕಾಲಾತೀತ'ವಾಗಿಯೇ ಕಲ್ಪಿತವಾಗಿರುತ್ತದೆ. ದೇವತಾ ಮೂಲಕ್ಕೆ ಅದನ್ನು ಆರೋಪಿಸಿದಾಗ ದೇವರ ಕಾಲ ಯಾವುದೆಂದು ಯಾರು ಕೇಳಿಯಾರು ? ಜೊತೆಗೆ ಇಂಥ ವಿಚಾರ ಒಂದು ಊರಿನದಲ್ಲ, ಒಂದು ಕಾಲದ್ದೂ ಅಲ್ಲ; ಯುಗ ಯುಗಾಂತರಗಳಿಂದ ಹರಿದು, ಉಳಿದು ಬರುತ್ತಿರುವ ನಿರಂತರ ಜ್ಞಾನ ಅದು ಎಂಬ ಆಯಾಮ ಅದಕ್ಕೆ ಸಿಕ್ಕಿಬಿಡುತ್ತದೆ. ಹೀಗೆ ನಮ್ಮ ಕಾಲದ ಚಕ್ರಗತಿಗೂ ಪಾಶ್ಚಿಮಾತ್ಯರು ಹೇಳುವ ಚರಿತ್ರೆಯ ದೃಷ್ಟಿಗೂ ನಿಜವಾಗಿ ಯಾವುದಾದರೂ ಸಂಬಂಧ ಇರುವುದೇ ಆದಲ್ಲಿ, ಅದು ನಿಜವಾಗಿ ಪುರಾಣಕ್ಕೂ ಚರಿತ್ರೆಗೂ ಇರಬಹುದಾದ ಸಂಬಂಧವಷ್ಟೆ. ಆದ್ದರಿಂದ ನಾವು ಪರಂಪರೆಯಿಂದ ಪಡೆದಿರುವುದು ಚರಿತ್ರೆಯನ್ನಲ್ಲ, ಪುರಾಣವನ್ನು. ಹೀಗೆ ಪಶ್ಚಿಮದವರೂ ಗುರುತಿಸಿದರೆ ಅದಕ್ಕೆ ನಾವು ಕಣ್ಣು ಕೆರಳಿಸಿ, ವಾಗ್ಯುದ್ಧ, ಲೇಖನಿಯುದ್ಧ, ಅದಕ್ಕೂ ಮೀರಿದರೆ ದೊಣ್ಣೆ ವರಸೆಗೆ ಹೊರಡಬೇಕೆ ?

**ಡಾ|| ಬಿ. ಎಸ್. ಸುಮಿತ್ರಾಬಾಯಿ**
ನಂ. ೫೧೯. ೧೬ನೇ ಮುಖ್ಯ ರಸ್ತೆ
ಬನಶಂಕರಿ ಮೊದಲನೇ ಹಂತ, ಶ್ರೀನಗರ
ಬೆಂಗಳೂರು-೫೬೦ ೦೫೦

# ಕೂರುವ ಜಾಗ



**ನ**ಮ್ಮ ತಾಲ್ಲೂಕಿನಲ್ಲಿ ೧೯೫೦ರಲ್ಲಿ ಭೂಮಾಲಿಕರು ಮಾಡುತ್ತಿದ್ದ ಅನ್ಯಾಯದ ವಿರುದ್ಧ ಕಾಗೋಡಿನ ರೈತರು ಸತ್ಯಾಗ್ರಹ ಮಾಡಿದರು. ಭೂ ಸುಧಾರಣಾ ಚಳುವಳಿಗೆ ನಾಂದಿಯಾದ ಈ ಹೋರಾಟವನ್ನು ಕಾಗೋಡು ಸತ್ಯಾಗ್ರಹ ಎನ್ನುತ್ತಾರೆ. ಈ ಹೋರಾಟದ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು.

ಸತ್ಯಾಗ್ರಹಿಗಳಲ್ಲಿ ಕಣಸೆ ಜೆಟ್ಟಪ್ಪ ಒಬ್ಬ ಸ್ವಾಭಿಮಾನಿ. ಛಲವುಳ್ಳ ವ್ಯಕ್ತಿ. ಒಮ್ಮೆ ಊರಲ್ಲಿ ಒಂದು ಯಕ್ಷಗಾನ ಪ್ರಸಂಗ ನಡೆಯುವುದಿತ್ತು. ಹೆಚ್ಚಾಗಿ ಯಕ್ಷಗಾನ ಏರ್ಪಡಿಸುವವರು ಭೂಮಾಲಿಕರು. ಊರಿನ ಎಲ್ಲರೂ ಬಂದು ನೋಡಬಹುದಿತ್ತು. ಸಾಮಾನ್ಯ ಆಸನ ವ್ಯವಸ್ಥೆ ಅಂದರೆ, ಬಿಳಿ ಹುಲ್ಲು ಹಾಸುವುದು. ಭೂ ಮಾಲಿಕರು ಮನೆಯಿಂದ ಕುರ್ಚಿ, ಬೆಂಚುಗಳನ್ನು ತರಿಸಿ, ಅದರ ಮೇಲೆ ಕೂರುತ್ತಿದ್ದರು. ತಾನೇಕೆ ನೆಲಕ್ಕೆ ಕೂರಬೇಕು, ಭೂಮಾಲಿಕರಂತೆ ತಾನೂ ಮೇಲೆ ಕೂರುತ್ತೇನೆಂದು ಈ ಕಣಸೆ ಜೆಟ್ಟಪ್ಪ ಮರ ಕೆತ್ತಿ ಕುರ್ಚಿ ಮಾಡಿದ. ಆಟದ ದಿನ ಭೂಮಾಲಿಕರಿಗೆ ಸರಿಸಮನಾಗಿ ಕುರ್ಚಿ ತರಿಸಿ ಮೇಲೇರಿ ಕೂತು ಆಟ ನೋಡಿದ. ಆ ಸಾಂಸ್ಕೃತಿಕ ವಾತಾವರಣದಲ್ಲೂ ಅವನು ಸ್ವಾಭಿಮಾನದ ರಾಜಕೀಯ ಮಾಡಿದ್ದ.

ಈ ಘಟನೆಯನ್ನು ನೆನೆದಾಗಲೆಲ್ಲ ನನಗೆ ರಾಮಾಯಣದ ಒಂದು ಪ್ರಸಂಗ ನೆನಪಾಗುತ್ತದೆ. ಲಂಕೆಗೆ ಹೋದ ಹನುಮಂತನನ್ನು ರಾವಣ ಬಂಧಿಸಿದ್ದಾನೆ. ಅವನ ಆಸ್ಥಾನದಲ್ಲಿ ಹನುಮಂತ ತನ್ನ ಬಾಲವನ್ನು ಸಿಂಬೆ ಸುತ್ತಿ ರಾವಣನಿಗಿಂತ ಎತ್ತರದಲ್ಲಿ ಕೂತುಬಿಡುತ್ತಾನೆ. ಮೇಲ್ನೋಟಕ್ಕೆ ಇದೊಂದು **ಮಂಗಾಟದಂತೆ** ಕಂಡೀತು. ಆದರೆ ಇಲ್ಲೂ ಕೂರುವ ಜಾಗದ ಪ್ರಶ್ನೆಯಿದೆ. ಜೊತೆಗೆ ನಾಗರಿಕತೆ ಎಂದರೇನೆಂಬ ಪ್ರಶ್ನೆಯೂ ಇದೆ.

ಲಂಕೆಯ ನಾಗರಿಕ ಮನುಷ್ಯರೆದುರು ಹನುಮಂತನ ಬಾಲ ಅನಾಗರಿಕವಾಗಿ ಕಂಡಿರಬಹುದು. ಅವರಿಗೆ ಯಾವುದು ಅನಾಗರಿಕವೋ ಅದೇ ಅಂಗದಿಂದ ಹನುಮಂತ ಔನ್ನತ್ಯದ ಚಮತ್ಕಾರ ತೋರಿಸಿ ಗರ್ವಭಂಗ ಮಾಡಿದ. ಬಾಲವಿಲ್ಲದ, ನಾಗರಿಕನಂತೆ ಕಾಣುವ ರಾಜ್ಯದ ಅಧಿಪತಿಯಾದ ಅವನು ಮತ್ತೊಬ್ಬನ ಹೆಂಡತಿಯನ್ನು ಬಲಾತ್ಕಾರದಿಂದ ಕದ್ದು ತಂದು ಅನಾಗರಿಕನಾದ! ಹೆಂಡತಿಯನ್ನು ಕಳೆದುಕೊಂಡ ಸ್ವಾಮಿಗೆ ನಿಷ್ಠೆಯಿಂದ ಸಹಕರಿಸುತ್ತ ಸೀತೆಯನ್ನು ಹುಡುಕಿಕೊಡುವಲ್ಲಿ ಸಫಲನಾದ ಕಪಿ – ಹನುಮಂತ ಸುಸಂಸ್ಕೃತನಾದ.

ದೇವರು ಎಂದು ಕರೆಯಲ್ಪಡುವ ಜನರು ಕಾಗೋಡಿನ ಸುತ್ತಮುತ್ತ ಹೆಚ್ಚು ಜನಸಂಖ್ಯೆಯಲ್ಲಿದ್ದಾರೆ. ಇಂಥ ಪ್ರದೇಶದಲ್ಲಿ ಬೆಳೆದ ನಾನು ಗಮನಿಸಿದಂತೆ, ಭೂಮಾಲಿಕರ ಮನೆಗೆ ಇವರು ಬಂದರೆ ನೆಲಕ್ಕೆ ಕೂರುತ್ತಿದ್ದರು. ಅವರು ಎಷ್ಟೇ ಹಿರಿಯರಿರಲಿ, ಆರ್ಥಿಕ ಸ್ಥಿತಿವಂತರಿರಲಿ ತಾವು ನೆಲಕ್ಕೇ ಕೂರಬೇಕು, ಬೆಂಚು ಕುರ್ಚಿಗಳ ಮೇಲೆ ಕೂರುವುದು ಮರ್ಯಾದೆಗೆ ತಕ್ಕುದಲ್ಲ ಎಂದು ತಿಳಿದಿದ್ದರು. ತಾವು ಮೇಲೆ ಕುಳಿತು ಅವರು ಕೆಳಗೆ ಕೂರುವುದು ನಾಗರಿಕ ಲಕ್ಷಣವಲ್ಲ ಎಂದು ಭೂಮಾಲಿಕರಿಗೆ ತಿಳಿದಿರಲಿಲ್ಲ. ಭೂಮಾಲಿಕ ಮತ್ತು ಗೇಣಿದಾರ ಎರಡೂ ವರ್ಗದ ನಂತರದ ತಲೆಮಾರಿನವರು ಈ ವಿಷಯದಲ್ಲಿ ಪರಸ್ಪರ ಹೊಂದಾಣಿಕೆಗೆ ಬಂದರು. ಆಧುನಿಕ ಶಿಕ್ಷಣವೂ ಈ ವಿಚಾರವಾಗಿ ಕೆಲಸ ಮಾಡಿತು. ಈಗ ಗೇಣಿದಾರರ ಮಕ್ಕಳು ಭೂಮಾಲಿಕರ ಮನೆಗೆ ಬಂದರೆ ಪೀಠೋಪಕರಣಗಳಲ್ಲಿ ಕೂರುತ್ತಾರೆ. ಎಲ್ಲರಂತೆ ಇವರು ಕೂರುವುದು ಸರಿಯಿದೆ ಎಂಬ ತಿಳುವಳಿಕೆ ಭೂಮಾಲಿಕನ ಮಗನಿಗೂ ಬಂದಿದೆ.

ರಾಜನಾಗಿದ್ದವನು ಕೂರುವ ಜಾಗವನ್ನು ಗಮನಿಸಿ. ಅವನು ಕೂರುವ ಆಸನ ಅಂತಿಂಥ ಆಸನವಲ್ಲ. ಸಿಂಹಾಸನ! ಪ್ರಜೆಯೇ ಪ್ರಭುವಾಗಿರುವ ಈ ಹೊತ್ತು, ಎಲ್ಲರೂ ಸಮಾನರು ಎಂದು ಭಾವಿಸುವ ಈ ಹೊತ್ತು, ರಾಜ್ಯದ ಮುಖ್ಯಮಂತ್ರಿ ಕೂರುವ ಆಸನ ಹೇಗಿರಬೇಕು ಅಂದರೆ ಮುಖ್ಯಮಂತ್ರಿಯನ್ನು ಕಾಣಲು ಬಂದವರಿಗೆ ಎಂತಹ ಆಸನ ವ್ಯವಸ್ಥೆ ಇರುತ್ತದೋ ಅದೇ ಆಕಾರದ ಆಸನಗಳು ಇರಬೇಕು. ನಮ್ಮಲ್ಲಿ ಹೆಚ್ಚಿನ ಮನೆಗಳಲ್ಲಿ, ಕಚೇರಿಗಳಲ್ಲಿ ಮುಖ್ಯಸ್ಥ ಕೂರುವ ಆಸನದ ಆಕಾರದಲ್ಲಿ ಸ್ವಲ್ಪ ಠೇಂಕಾರಗಳು ಕಾಣುತ್ತವೆ! ಇತರರು ಕೂರುವ ಆಸನಗಳು ಸಾಧಾರಣವಾಗಿರುತ್ತವೆ. (ಈಗೀಗ ಆಸನ ವ್ಯವಸ್ಥೆಯಲ್ಲಿ ಸಮಾನತೆ ಬರುತ್ತಿದೆ). ಹೀಗಿದ್ದಾಗ ಕೂರುವ ಜಾಗದ ವ್ಯವಸ್ಥೆಯೇ ಮನಸ್ಸಿಗೆ ಕಿರಿಕಿರಿ ಮಾಡುತ್ತಿರುತ್ತದೆ. ಗೀತಾ ಪ್ರವಚನ ನಡೆಯುವ ಕಡೆ ಕೂಡ ಆಸನ ವ್ಯವಸ್ಥೆ ಮೇಲು-ಕೀಳು ಎಂಬಂತಿರುತ್ತದೆ. ಇದಕ್ಕಿಂತಲೂ ದೊಡ್ಡ ವಿಪರ್ಯಾಸ ಯಾವುದು!

''ಅವರು ಮುಖ ನೋಡಿ ಮಣೆ ಹಾಕುವ ಜನ'' ಎಂಬ ಮಾತಿದೆ. ಅಂದರೆ ನಾನೊಂದು ಮನೆಗೆ ಹೋದಾಗ ಅವರಿಗೆ ಆಪ್ತನಾಗಿದ್ದರೆ, ಅಧಿಕಾರಿಯಾಗಿದ್ದರೆ, ದೊಡ್ಡ ಕುಟುಂಬಸ್ಥನಾಗಿದ್ದರೆ, ಗಣ್ಯನಾಗಿದ್ದರೆ ನನಗೆ ಮಣೆ ಹಾಕಿ ಕೂರಿಸುತ್ತಾರೆ. ಮರ್ಯಾದೆಯಿಂದ ಕಾಣುತ್ತಾರೆ. ಭಿಕಾರಿಯಾಗಿದ್ದರೆ, ಹಣ ಇಲ್ಲದವನಾಗಿದ್ದರೆ, ಬೇಡದವನಾಗಿದ್ದರೆ ಮೂಲೆಯಲ್ಲಿ ನೆಲದಲ್ಲಿ ಕೂರಬೇಕಾಗುತ್ತದೆ ಅಥವಾ ಕೂರಲು ಒಂದು ಗೋಣೀಚೀಲ ದೊರೆತೀತು! ನಾವು ಒಂದು ಮಾತುಕತೆಗಾಗಿ ಒಬ್ಬರ ಮನೆಗೆ ಹೋಗುತ್ತೇವೆ. ಅವರು ನಮ್ಮ ಮಾತನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ. ಹೀಗಾದಾಗ ''ಅವರು ನಮ್ಮ ಮಾತಿಗೆ ಸೊಪ್ಪು ಹಾಕಲಿಲ್ಲ'' ಎಂದು ನಮ್ಮಲ್ಲಿ ಹೇಳುವುದುಂಟು. **ಸೊಪ್ಪು ಹಾಕಲಿಲ್ಲ**. ಏನಿದರ ಅರ್ಥ? ಗೆ. ದೇವೇಂದ್ರ, ಬೆಳೆಯೂರು ಈ ಪದದ ಸೂಕ್ಷ್ಮಗಳನ್ನು ಮಣೆಯಿಂದ ಹಿಡಿದು ಹೇಳಿದ. ಮನೆಗೆ ಬಂದಾಗ ಮಣೆ ನೀಡುತ್ತೇವೆ. ಯಜಮಾನ ಮನೇಲಿಲ್ಲ ಬ್ಯಾಣದಲ್ಲಿದ್ದಾನೆ, ಅಲ್ಲಿಗೇ ಕಾಣಲು ಹೋದಿರಿ, ಅಲ್ಲಿರುವ ಸೊಪ್ಪನ್ನೇ ಹಾಸಿ ನಿಮ್ಮನ್ನು ಕೂರಿಸಿ ಮಾತಾಡುತ್ತಾನೆ. ಸೊಪ್ಪು ಹಾಕಲಿಲ್ಲವೆಂದರೆ 'ನೀನು ಅವನಿಂದ ಅವಗಣಿಸಲ್ಪಟ್ಟಿದ್ದಿ' ಎಂದರ್ಥ.

ಮಹಾಭಾರತದ ಪ್ರಸಂಗದೊಂದಿಗೆ ಈ ಕೂರುವ ಜಾಗದ ರಗಳೆಯನ್ನು ಮುಗಿಸುವೆ. ಕೃಷ್ಣ ಸಂಧಾನಕ್ಕಾಗಿ ಕೌರವನ ಆಸ್ಥಾನಕ್ಕೆ ಬರುವವನಿದ್ದಾನೆ. ಹಸ್ತಿನಾವತಿಗೆ ಬಂದವನು ವಿದುರನ ಮನೆಗೆ ಉಳಿಯಲು ಹೋಗಿದ್ದಾನೆ. ತನ್ನ ಅರಮನೆಗೆ ಉಳಿಯಲು ಬರಲಿಲ್ಲ ಎಂದು ಕುಪಿತನಾದ ಕೌರವ ಈ ಘಟನೆ ತನಗಾದ ಅವಮಾನ ಎಂದೂ ಭಾವಿಸಿದ್ದಾನೆ. ತನ್ನ ಆಸ್ಥಾನಕ್ಕೆ ಬಂದಾಗ ಅವನನ್ನೂ ಅವಮಾನಿಸಬೇಕೆಂದು ಭರ್ಜರಿ ಅಲಂಕಾರ ಮಾಡಿಸಿದ್ದಾನೆ. ಎತ್ತರದ **ಸಿಂಹಾಸನದ** ಮೇಲೆ ಕೂತಿದ್ದಾನೆ. ಆಸ್ಥಾನ ಪ್ರವೇಶ ಮಾಡಿದ ಕೃಷ್ಣ ಅಲ್ಲಿನ ವೈಭವವನ್ನೂ ಕೌರವನ ಮನಸ್ಥಿತಿಯನ್ನೂ ಗಮನಿಸಿದ್ದಾನೆ. ತನ್ನ ಅಸಾಧಾರಣ ಶಕ್ತಿಯಿಂದ ನಿಂತ ನೆಲವನ್ನೇ ಸ್ವಲ್ಪ ಅದುಮಿ ಸಿಂಹಾಸನದ ಮೇಲೆ ಕೂತವನು ತನ್ನ ಕಾಲ ಬಳಿ ಬಂದು ಬೀಳುವಂತೆ ಮಾಡುತ್ತಾನೆ. ಕೌರವನ ಅಟ್ಟಹಾಸವನ್ನು ತಗ್ಗಿಸುತ್ತಾನೆ.

ಈ ಪ್ರಸಂಗದಲ್ಲಿ ಸಿಂಹಾಸನದಿಂದ ಕೆಳಗುರುಳಿಸಿ ಅಹಂಕಾರ ಮುರಿಯುವ ಕ್ರಿಯೆ ನಡೆದರೆ ರಾಮಾಯಣದ ಹನುಮಂತ ರಾವಣನ ಸಿಂಹಾಸನಕ್ಕಿಂತ ಎತ್ತರದಲ್ಲಿ ಕೂತು ಅವನ ಅಹಂಕಾರ ಮುರಿಯುತ್ತಾನೆ. ಕೂರುವ ಜಾಗದ ಮೂಲಕ ಅಹಂಕಾರ ಮುರಿಯುವ ಈ ಕ್ರಿಯೆ ಕಣಸೆ ಜೆಟ್ಟಪ್ಪನಲ್ಲಿ ಸಮಾನ ಎತ್ತರದಲ್ಲಿ ಕೂರುವುದರಲ್ಲಿ ಮುಂದುವರೆದಿದೆ.

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭ ೪೦೧, ಶಿವಮೊಗ್ಗ

# ಮಿದುಳು

ನಮ್ಮ ಮಿದುಳು ಈ ವಿಶ್ವದಲ್ಲಿಯೇ ಅತ್ಯಂತ ವಿಶಿಷ್ಟ ತುಣುಕು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಪ್ರೌಢಾವಸ್ಥೆ ತಲುಪಿದವರ, ಒಂದೂವರೆ ಕಿಲೋಗ್ರಾಂ ತೂಗುವ, ಒಂದೂವರೆ ಲೀಟರಿನಷ್ಟು ಗಾತ್ರವುಳ್ಳ ಮಿದುಳಿನಲ್ಲಿ ಸುಮಾರು ೧೦೦೦೦ ಕೋಟಿ ನರ ಜೀವಕೋಶಗಳಿರುತ್ತವೆ. ಈ ನರಕೋಶಗಳ ನಡುವೆ ನೂರು ಲಕ್ಷ ಕೋಟಿ ಸಂಪರ್ಕಗಳಿವೆ. ಈ ಸಂಪರ್ಕಗಳ ಒಟ್ಟು ಉದ್ದದ ಅಳತೆ ಅನೇಕ ಲಕ್ಷ ಕಿಲೋಮೀಟರುಗಳಾಗಬಹುದೆಂಬ ಅಂದಾಜಿದೆ. ೧೦ ವ್ಯಾಟ್ ಬಲ್ಬಿನಷ್ಟು ಶಕ್ತಿಯನ್ನು ಸತತ ವ್ಯಯ ಮಾಡುವ ಮಿದುಳು, ಕಿರೀಟಪ್ರಾಯವಾಗಿ ಶಿರದಲ್ಲಿ ನೆಲೆಸಿ ನಮ್ಮೆಲ್ಲ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುತ್ತದೆ. ಹೃದಯ ಪಂಪು ಮಾಡುವ ರಕ್ತದ ಶೇಕಡಾ ೨೦ ಭಾಗ ಮಿದುಳಿಗೇ ಮೀಸಲು. ವಿಶ್ವದಲ್ಲಿ ಅನೇಕ ಭವ್ಯ ದೃಶ್ಯಗಳಿವೆ. ಪೂರ್ಣಗ್ರಹಣದ ಕಾಲದಲ್ಲಿ ಕಾಣುವ, ಲಕ್ಷಾಂತರ ಮೈಲುದ್ದದ ಸೂರ್ಯನ ಬೆಂಕಿಯ ಕೆನ್ನಾಲಿಗೆ ರುದ್ರರಮಣೀಯ. ಕೈಲಾಸ ಪರ್ವತದ ಹಿಮಾಚ್ಛಾದಿತ ಶೃಂಗ ಶಾಂತ ಗಂಭೀರ. ಆದರೆ ಈ ಪ್ರಕೃತಿಯ ಸಮಸ್ತ ಭವ್ಯತೆಗೂ ಆಧಾರ ನಮ್ಮ ಮಿದುಳೇ. ಇದು ಸರಿಯಾಗಿ ಕೆಲಸ ಮಾಡುತ್ತಿದ್ದರೆ ಮಾತ್ರ ಪ್ರಕೃತಿಯ ಘಟನೆಗಳಿಗೆ ಅರ್ಥವುಂಟು. ಬುದ್ಧಿವಂತಿಕೆ ಅಪರೂಪವೆಂದು ನಾವು ಅದನ್ನು ಹೊಗಳುತ್ತೇವೆ. ಕೆಲವರಿಗೇ ಸಾಧ್ಯವಾಗುವ, ಗಣಿತದ ಕ್ಲಿಷ್ಟ ಪ್ರಶ್ನೆಗಳನ್ನು ಬಿಡಿಸುವ ಚಾತುರ್ಯವನ್ನು ಕಂಡು ಬೆರಗಾಗುತ್ತೇವೆ. ಆದರೆ ಎಲ್ಲರಲ್ಲೂ ಸಾಮಾನ್ಯವಾಗಿರುವ ಬುದ್ಧಿವಂತಿಕೆಯನ್ನು ಗುರುತಿಸುವುದಿಲ್ಲ. ನಮ್ಮ ಬೆಂಗಳೂರು ಕಾರ್ಪೊರೇಷನ್ನಿನ ಆಸುಪಾಸಿನಲ್ಲಿ ವಾಹನ ನಡೆಸುತ್ತಿರುವಾಗ, ಹೊರ ಪ್ರಪಂಚದಿಂದ ಮಿದುಳಿಗೆ ಸಂದೇಶಗಳ ಸತತ ಪ್ರವಾಹವೇ ಹರಿಯುತ್ತಿರುತ್ತದೆ. ಈ ಸಂದೇಶಗಳನ್ನೆಲ್ಲಾ ಪರಿಶೀಲಿಸಿ, ಕ್ಷಣಮಾತ್ರದಲ್ಲಿ ಸಮರ್ಪಕ ಪ್ರತಿಕ್ರಿಯೆ ತೋರಿಸದಿದ್ದಲ್ಲಿ ಅಪಘಾತ ಕಟ್ಟಿಟ್ಟ ಬುತ್ತಿ. ಎಲ್ಲರ ಮಿದುಳೂ ಇದನ್ನು ಲೀಲಾಜಾಲವಾಗಿ ನಿರ್ವಹಿಸುತ್ತದೆ. ಹೀಗೆಯೇ, ಕಣ್ಣಿಗೆ ಕಾಣುವ ವಿವಿಧ ದೃಶ್ಯಗಳನ್ನು, ಜನ ಆಡುವ ಮಾತುಗಳನ್ನು ಅರ್ಥಮಾಡಿಕೊಳ್ಳಲು ಮಿದುಳು ತ್ವರಿತವಾಗಿ ಹಾಗೂ ಬಹಳಷ್ಟು ಗುಣಿಸಬೇಕಾಗುತ್ತದೆ. ಕ್ರಿಕೆಟ್ ಆಡುವಾಗ ಚೆಂಡು ಬರುವ ದಿಕ್ಕನ್ನು, ಬಂದು ತಲುಪುವ ವೇಳೆಯನ್ನು, ಮಿದುಳು ಅತ್ಯಲ್ಪ ಕಾಲದಲ್ಲಿ ಲೆಕ್ಕ ಹಾಕಬಲ್ಲದು. ನಿಜವಾಗಿ, ಬುದ್ಧಿಮಾಂದ್ಯ ಮಕ್ಕಳ ಮತ್ತು ಪ್ರಾಣಿಗಳ ಮಿದುಳಿನ ಸಾಧನೆಗಳೂ ನಮ್ಮನ್ನು ಚಕಿತಗೊಳಿಸಬೇಕು. ಇಂತಹ ತೀರ್ಮಾನ ತೆಗೆದುಕೊಳ್ಳಬಲ್ಲ ಕಂಪ್ಯೂಟರ್ ಚಾಲಿತ ರೋಬೋಟುಗಳನ್ನು ನಿರ್ಮಿಸುವುದು ಸುಲಭ ಸಾಧ್ಯವಿಲ್ಲ. ಆದರೂ, ಸಾಮಾನ್ಯವಾಗಿ ನಾವು ನಮ್ಮ ಮಿದುಳನ್ನು ಕಂಡು ಅಚ್ಚರಿಪಡುವುದಿಲ್ಲ. "ಅತಿಪರಿಚಯದಿಂದ ಅನಾದರ" ಎಂಬ ಆಡುಮಾತಿಗೆ ಇದಕ್ಕಿಂತ ಒಳ್ಳೆಯ ಉದಾಹರಣೆ ಇರಲಾರದು.

ನಾವು ಎಚ್ಚರವಾಗಿರುವಾಗಲೆಲ್ಲಾ [illegible] ನಡೆಸುವ ಮಿದುಳು, ರಾತ್ರಿ ಆರೆಂಟು ಘಂಟೆಗಳು ವಿಶ್ರಮಿಸುತ್ತದೆ. ಎಚ್ಚರದ ಕ್ಷಣಗಳು ನಮಗೆ ಚಿರಪರಿಚಿತ, ನಿದ್ರೆ ಮಸುಕು ಮಸುಕು. ಎಲ್ಲ ಅನುಭವವೂ ಮಿದುಳಿನ ವಿವಿಧ ರಾಸಾಯನಿಕ ಸ್ಥಿತಿಗಳ ಫಲ. ಎಚ್ಚರ - ನಿದ್ರೆಗಳ ನಡುವಣ ಕಾಲದಲ್ಲಿ ಮಿದುಳಿನ ವಿಚಿತ್ರ ವರ್ತನೆಯನ್ನು ಅನುಭವಿಸಬೇಕಾದರೆ ಮಧ್ಯಾಹ್ನದ ಊಟದ ನಂತರ ಭಾಷಣ ಕೇಳಬೇಕು. ಅದೂ ಭಾಷಣ ರುಚಿಯಿಲ್ಲದ್ದಾಗಿ, ಹೇಗಾದರೂ ನಿದ್ರೆಯನ್ನು ತಡೆಗಟ್ಟುವ ಪ್ರಯತ್ನ ಮಾಡುತ್ತಿರಬೇಕು. ಆಗ, ಮಿದುಳಿನ ಸೆಣೆಸಾಟ ಪ್ರಾರಂಭವಾಗುತ್ತದೆ. ಭಾಷಣಕಾರ ಹೇಳುತ್ತಿರುವ ವಾಕ್ಯಗಳು ಬೇರೊಂದೇ ಅರ್ಥ ಪಡೆದು, ನೆನ್ನೆಯ ಇಲ್ಲವೆ



ಮೊನ್ನೆಯ ಘಟನೆಯನ್ನು ಜ್ಞಾಪಿಸುತ್ತವೆ. ನಮ್ಮ ಪಕ್ಕ ಯಾರೋ ನಿಂತಿರುವಂತೆಯೂ, ಕುಳಿತಿರುವವರು ಎದ್ದು ಹೋದಂತೆಯೂ ಕಾಣಬಹುದು. ಕಿವಿಯ ತಮಟೆಯ ಮೇಲೆ ಶಬ್ದ ಬಡಿಯುತ್ತಿದ್ದರೂ ಒಂದು ಪದವೂ ಅರ್ಥವಾಗುವುದಿಲ್ಲ. ಮಿದುಳು ಹೊರಪ್ರಪಂಚದಿಂದ ಬರುತ್ತಿರುವ ಸಂದೇಶಗಳಿಗೆ ಭಾಗಶಃ ಮಾತ್ರ ಗಮನಕೊಟ್ಟು, ಮಿಕ್ಕ ತನ್ನ ಶಕ್ತಿಯನ್ನು ತಾಳಮೇಳಗಳಿಲ್ಲದ ಘಟನಾವಳಿಗಳನ್ನು ನಮಗೆ ತೋರಿಸಲು ಬಳಸುತ್ತದೆ. ಮಿದುಳಿನ ಪರಿಶೀಲನೆಯಿಲ್ಲದೇ, ಸಹಭಾಗಿತ್ವವಿಲ್ಲದೇ ನಮ್ಮ ಪಂಚೇಂದ್ರಿಯಗಳು ಯಾವ ಲೆಕ್ಕಕ್ಕೂ ಬಾರವು. ಮಿದುಳಿನ ರಾಸಾಯನಿಕ ಕ್ರಿಯೆ ಇನ್ನೂ ಅನೇಕ ಬಗೆಯ ಅಸಹಜ ಅನುಭವಗಳನ್ನು ನಮ್ಮ ಮುಂದಿಡಬಲ್ಲದು. ಒಮ್ಮೆಯಲ್ಲ ಒಮ್ಮೆ ಬಹಳಷ್ಟು ಜನರಿಗೆ, ಹಿಂದೆ ನಡೆದ ಯಾವುದೋ ಘಟನೆ ಪುನಃ ಅಲ್ಪವೂ ಬದಲಾವಣೆಯಾಗದೆ ಪುನರಾವರ್ತನೆಯಾದ ಅನುಭವ ಬರುತ್ತದೆ.

**ಪ್ರೊ॥ ಎಂ. ಆರ್. ಎನ್. ಮೂರ್ತಿ**

ಇಂತಹ ಅನುಭವಗಳು ಕೆಲವು ಸೆಕೆಂಡುಗಳು ಮಾತ್ರ ಇರುತ್ತವೆ. ಹಲವು ಬಗೆಯ ಮಿದುಳಿನ ಹಾನಿಯಿಂದ ಇಂತಹ ಅನುಭವಗಳು ಪದೇ ಪದೇ ಕಾಣಿಸಿಕೊಳ್ಳಬಹುದು.

ದಿನನಿತ್ಯ ನಾವು ಅನುಭವಿಸಲೇಬೇಕಾದ ಬದುಕಿನ ಜಂಜಾಟಗಳಿಂದ ಉದ್ರೇಕಗೊಂಡ ಮಿದುಳು ರಾತ್ರಿಯ ಆರೇಳು ಘಂಟೆ ನಿದ್ರೆಯ ನಂತರ ಸ್ಥಿಮಿತಕ್ಕೆ ಬರುತ್ತದೆ. ನಿದ್ರೆಯಿಂದ ಹಿಂದಿನ ದಿನದ ಭಯಂಕರ ಕೋಪ, ತಾಪಗಳು ಅವುಗಳ ತೀವ್ರತೆ ಕಳೆದುಕೊಳ್ಳುತ್ತವೆ. ಇದನ್ನೇ ನಾವು 'ಕಾಲಾಯ ತಸ್ಮೈ ನಮಃ' ಎಂದು ಬಣ್ಣಿಸುತ್ತೇವೆ. ಉದ್ರೇಕಗೊಂಡಾಗ ಮಿದುಳಿನಲ್ಲಿ ಉತ್ಪತ್ತಿಯಾಗುವ ರಾಸಾಯನಿಕ ವಸ್ತುಗಳು ನಮಗೆ ತಳಮಳದ ಅನುಭವ ನೀಡುತ್ತವೆ. ನಿದ್ರೆಯ ನಂತರ ಈ ರಾಸಾಯನಿಕ ಅಣುಗಳ ಸಾಂದ್ರತೆ ಕಡಿಮೆಯಾಗುತ್ತದೆ. ಆದ್ದರಿಂದಲೇ, ನಮ್ಮ ಮನಸ್ಸಿನ ಭಾವನೆಗಳು ಬದಲಾಗುತ್ತವೆ. ಇದೇ ರೀತಿ ನಮ್ಮ ಎಲ್ಲ ಮಾನಸಿಕ ಅನುಭವಗಳೂ ಭಾವನಾ ತರಂಗಗಳೂ ಮಿದುಳಿನಲ್ಲಿ ನಡೆಯುವ ರಾಸಾಯನಿಕ ಕ್ರಿಯೆಗಳ ಹಾಗೂ ಅವುಗಳಲ್ಲಿ ಪಾಲ್ಗೊಳ್ಳುವ ಅಣುಗಳ ಹತೋಟಿಯಲ್ಲಿರುತ್ತವೆ. ಈ ರಾಸಾಯನಿಕ ಅಣುಗಳ ಬಗ್ಗೆ, ಮಿದುಳಿನಲ್ಲಿ ಅವುಗಳ ಸಾಂದ್ರತೆಯನ್ನು ನಿಯಂತ್ರಿಸುವ ಬಗ್ಗೆ ಸಂಶೋಧನೆ ನಡೆಸುವುದರಿಂದ ವ್ಯಗ್ರ ಮನಸ್ಸಿನ ನಿಯಂತ್ರಣ ಸಾಧ್ಯವಾಗುತ್ತದೆ.

ಎಲ್ಲರೂ ಅನುಭವಿಸಲೇಬೇಕಾದ ಪರಮ ಸಂಕಟಗಳಲ್ಲಿ, ದಂತ ವೈದ್ಯರ ಕೊಠಡಿಯ ಹೊರಗೆ ನಮ್ಮ ಸರತಿಗಾಗಿ ಕಾಯುವುದೂ ಒಂದು. ಒಳಗಿನ ಕೊಠಡಿಯಲ್ಲಿ ನಡೆಯುತ್ತಿರುವ ಶಬ್ದ, ಕಿರಿಚಾಟ ಎದೆ ನಡುಗಿಸುತ್ತದೆ. ಮಿದುಳಿಗೂ, ಇಂದ್ರಿಯಗಳಿಗೂ ತಾತ್ಕಾಲಿಕವಾಗಿ ಸಂಬಂಧ ತಪ್ಪಿಸುವ ರಾಸಾಯನಿಕಗಳು ವೈದ್ಯರ ಅಸ್ತ್ರಗಳಲ್ಲಿ ಇಲ್ಲದಿದ್ದರೆ, ಅವರು ಬೈರಿಗೆಯ ಯಂತ್ರವನ್ನೋ ಇಕ್ಕಳವನ್ನೋ ತಮ್ಮೆಲ್ಲ ಬಲವನ್ನೂ ಪ್ರಯೋಗಿಸಿ ನಮ್ಮ ಹಲ್ಲುಗಳ ಮೇಲೆ ಪ್ರಯೋಗಿಸುವ ನೆನಪನ್ನೂ ನಾವು ಸಹಿಸಲಾರೆವು. ವೈದ್ಯರ ಅಸ್ತ್ರದಲ್ಲಿರುವ ಕೆಲವು ಮದ್ದುಗಳು, ದೇಹದ ಒಂದು ಆಯ್ದ ಭಾಗಕ್ಕೆ ಮಾತ್ರ ಮಿದುಳಿನ ಸಂಪರ್ಕ ತಪ್ಪಿಸುತ್ತವೆ. ಇನ್ನು ಕೆಲವು ಮದ್ದುಗಳು, ನರವ್ಯೂಹವನ್ನೇ ನಿಶ್ಚೇತನಗೊಳಿಸಿ, ನಮ್ಮ ಹೊಟ್ಟೆಯನ್ನು ಗರಗಸದಿಂದ ಕುಯ್ದರೂ, ಸ್ವಲ್ಪವೂ ನೋವಾಗದಂತೆ ನೋಡಿಕೊಳ್ಳುತ್ತವೆ. ಹಲವಾರು ಗಂಟೆಗಳ ನಂತರ ಒಣಗಿದ ಗಂಟಲಿನಿಂದ, ವಾಕರಿಕೆಯಿಂದ ನಾವು ಬಳಲಬೇಕಾಗಬಹುದಷ್ಟೇ !

ನಮ್ಮ ಮಿದುಳಿಗೆ ಆಕ್ಸಿಜನ್ ಸತತ ಪೂರೈಕೆಯಾಗುತ್ತಿರಬೇಕು. ಬರಿಯ ೫ ಸೆಕೆಂಡುಗಳು ನಿಂತರೂ ನಮಗೆ ಬಸವಳಿದ ಅನುಭವವಾಗುತ್ತದೆ. ಒಂದೆರಡು ನಿಮಿಷಗಳು ತಪ್ಪಿದರೆ, ಸರಿಪಡಿಸಲಾರದಂತಹ ದುಷ್ಪರಿಣಾಮ ಸಂಭವಿಸುತ್ತದೆ. ಇದೇ ರೀತಿ, ಮಿದುಳಿಗೆ ಸಕ್ಕರೆಯ ಪೂರೈಕೆಯೂ ಸತತ ಬೇಕು. ಈ ಸಕ್ಕರೆಯನ್ನೇ ಉರಿಸಿ, ತನಗೆ ಬೇಕಾದ ಶಕ್ತಿಯನ್ನು ಮಿದುಳು ಪಡೆಯುತ್ತದೆ. ಬೆಳಗ್ಗೆ ಎದ್ದು, ಉಪಹಾರ ಸ್ವೀಕರಿಸುವ ಮುನ್ನ

ಆರೋಗ್ಯದಿಂದಿರುವವರ ೧೦೦ ಮಿಲಿ ಲೀಟರ್ ರಕ್ತದಲ್ಲಿ ಸುಮಾರು ೬೦ ಮಿಲಿಗ್ರಾಂ ಸಕ್ಕರೆ ಇರುತ್ತದೆ. ಈ ಸಕ್ಕರೆಯ ಪ್ರಮಾಣ ೪೦ ಮಿಲಿಗ್ರಾಂಗಿಂತ ಕಡಿಮೆಯಾದರೆ, ಮಿದುಳು ಸ್ವಾಧೀನ ಕಳೆದುಕೊಳ್ಳಲು ಪ್ರಾರಂಭಿಸುತ್ತದೆ. ಕಣ್ಣು ಕತ್ತಲೆಯಿಡುತ್ತದೆ. ಕೈಕಾಲುಗಳಲ್ಲಿ ಸ್ವಾಧೀನ ತಪ್ಪಿದ ಅನುಭವವಾಗುತ್ತದೆ. ಎಚ್ಚರವೂ ತಪ್ಪಬಹುದು. ಸಕ್ಕರೆ ಕಾಯಿಲೆ ಇಲ್ಲದವರು ಹಲವಾರು ದಿನಗಳು ಉಪವಾಸ ಮಾಡಿದರೂ ಸಕ್ಕರೆಯ ಅಂಶ ಇಷ್ಟು ಕಡಿಮೆ ಯಾಗುವುದಿಲ್ಲ. ಜನನದಿಂದ ಪ್ರಾರಂಭಿಸಿ ಮರಣದ ವರೆಗೂ, ನಮ್ಮ ದೇಹ ಕೆಲವೇ ಸೆಕೆಂಡುಗಳೂ ಮಿದುಳನ್ನು ಉಪೇಕ್ಷಿಸುವಂತಿಲ್ಲ. ಅದಕ್ಕೆ ಬೇಕಾಗುವ ಆಮ್ಲಜನಕ, ಸಕ್ಕರೆಯ ಪೂರೈಕೆಯನ್ನು ನಿಲ್ಲಿಸುವಂತಿಲ್ಲ. ಹಾಗಾದರೂ ಹೆಚ್ಚಿನ ಜನ ಬದುಕಿ ಉಳಿಯುತ್ತಾರೆ ಎಂಬುದೇ ವಿಶ್ವದ ಪರಮಾಶ್ಚರ್ಯಗಳಲ್ಲಿ ಒಂದು.

ಒಂದು ಅಪಘಾತದಲ್ಲಿ ಪಯಣಿಸುತ್ತಿದ್ದ ಇಬ್ಬರು ಸಮವಯಸ್ಕರಲ್ಲಿ ಒಬ್ಬನ ತಲೆ, ಮತ್ತೊಬ್ಬನ ದೇಹ ಜಜ್ಜಿ ಹೋಗಿದೆ ಎಂದು ಭಾವಿಸೋಣ. ಮುಂದೊಂದು ದಿನ ಸಾಧ್ಯವಾಗಬಹುದಾದ ಶಸ್ತ್ರಚಿಕಿತ್ಸೆಯಿಂದ ಸಲುಗದ ತಲೆಯನ್ನು ಜಜ್ಜಿಹೋಗದ ದೇಹಕ್ಕೆ ಕಸಿಮಾಡಿ ಹೊಸ ವ್ಯಕ್ತಿಯ ಸೃಷ್ಟಿ ಮಾಡುತ್ತಾರೆ ಎಂದು ಊಹಿಸೋಣ. ಆಗ ಜೀವ ಪಡೆಯುವ ವ್ಯಕ್ತಿ ಯಾರು ? ಆತನ ನೆನಪೆಲ್ಲಾ, ಜೀವನದ ಕನಸೆಲ್ಲಾ ಪಡೆದುಕೊಂಡ ಮಿದುಳಿನದೇ ಆಗಿರುವುದರಿಂದ ವ್ಯಕ್ತಿಯ ನಿಜವಾದ ಕುರುಹು ತಲೆಯೇ ವಿನಾ ದೇಹವಲ್ಲ ಎಂದು ಧಾರಾಳವಾಗಿ ಹೇಳಬಹುದು. ಆದ್ದರಿಂದಲೇ ಗಣಪತಿಯ ತಲೆ ಕಡಿದ ಶಿವ, ಆನೆಯ ತಲೆ ಕಡಿದು ತಂದು ಕಸಿ ಮಾಡಿದ್ದು ಸರಿಯಲ್ಲ. ಪಾರ್ವತಿಯ ಮಾನಸ ಪುತ್ರನಿಗೆ ಜೀವ ತುಂಬುವ ಆಸೆ ಇದ್ದಿದ್ದರೆ, ಆನೆಯ ದೇಹವನ್ನು ಗಣಪತಿಯ ತಲೆಗೆ ಕಸಿ ಮಾಡಬೇಕಿತ್ತು.

ಮಿದುಳಿನ ಮೇಲೆ ಆಳವಾದ ಪರಿಣಾಮ ಬೀರುವ ಅನೇಕ ರಾಸಾಯನಿಕ ವಸ್ತುಗಳ ಬಳಕೆ ಎಲ್ಲ ಸಮಾಜಗಳಲ್ಲಿ ಅನಾದಿಕಾಲದಿಂದ ಬೆಳೆದುಬಂದಿದೆ. ಇವುಗಳಲ್ಲಿ ಅಗ್ರಸ್ಥಾನ ಪಡೆಯುವುದು ಮದ್ಯಗಳಲ್ಲಿರುವ 'ಈಥೈಲ್ ಆಲ್ಕೋಹಾಲ್'. ಎರಡು ಕಾರ್ಬನ್, ಒಂದು ಆಕ್ಸಿಜನ್, ಆರು ಹೈಡ್ರೋಜನ್ ಪರಮಾಣುಗಳಿಂದ ರಚಿತವಾದ ಈ ಸರಳ ಅಣು ಹಾಳು ಮಾಡಿರುವಷ್ಟು ಸಂಸಾರಗಳನ್ನು ಯಾವ ಯುದ್ಧವೂ ಮಾಡಿಲ್ಲ. ಆಸ್ಪತ್ರೆಗಳಲ್ಲಿ ಸಲಕರಣೆಗಳನ್ನು ತೊಳೆಯಲು ಬಳಸುವ ಈಥೈಲ್ ಆಲ್ಕೋಹಾಲ್ ನೀರಿನೊಡನೆ ಎಲ್ಲ ಪ್ರಮಾಣಗಳಲ್ಲಿ ಸುಲಭವಾಗಿ ಬೆರೆಯುತ್ತದೆ. ಕೆಮ್ಮಿನ 'ಸಿರಪ್'ಗಳ ಅವಿಭಾಜ್ಯ ಅಂಗವಾದ ಈಥೈಲ್ ಆಲ್ಕೋಹಾಲ್‌ನ್ನು ಅನೇಕ ಬಗೆಯ ಧಾನ್ಯ, ದ್ರಾಕ್ಷಿಯಂತಹ ಸಿಹಿ ಹಣ್ಣುಗಳನ್ನು ಕೊಳೆಯಿಸಿ ಪಡೆಯಬಹುದು. ಶುದ್ಧ ಆಲ್ಕೋಹಾಲ್ ಸೇವಿಸಿದಾಗ, ಗಂಟಲು ಸುಡುವ ಬಹುಘಾಟಿನ ಅನುಭವವಾಗುತ್ತದೆ. ಅಲ್ಪ ಪ್ರಮಾಣದಲ್ಲಿ ಸೇವಿಸಿದಾಗ ಮಿದುಳಿನ ಚಟುವಟಿಕೆ ಕಡಿಮೆಯಾಗುತ್ತದೆ. ಇದರಿಂದ ಮನಸ್ಸು ಸಡಿಲಗೊಂಡು, ಸಾಮಾಜಿಕ ನಿರ್ಬಂಧ ಕಡಿಮೆಯಾಗುತ್ತದೆ. ವಾಹನ ಚಾಲನೆ ಮುಂತಾದ ಚುರುಕಾಗಿ ಪ್ರತಿಕ್ರಿಯಿಸಬೇಕಾದ ಕೆಲಸಗಳಲ್ಲಿ ತೊಡಗುವ ಸಾಮರ್ಥ್ಯ ಕ್ಷೀಣಿಸುತ್ತದೆ. ಚರ್ಮದ ಮೇಲ್ಪದರದ ಧಮನಿಗಳಲ್ಲಿ ರಕ್ತ ಸಂಚಾರ ಹೆಚ್ಚಿ, ಮೈ ಬಿಸಿಯಾದ ಅನುಭವ ಉಂಟಾಗುತ್ತದೆ. ಮೂತ್ರಕೋಶ ಚುರುಕಾಗಿ, ಬೇಗನೆ ಬಚ್ಚಲು ಮನೆಗೆ ಹೋಗಬೇಕಾಗುವ ಅಗತ್ಯ ಬರುತ್ತದೆ. ರಕ್ತದಲ್ಲಿ ಶೇಕಡಾ ೦.೧ಕ್ಕಿಂತ ಈಥೈಲ್ ಆಲ್ಕೋಹಾಲ್ ಹೆಚ್ಚಾದರೆ, ಕೈಕಾಲುಗಳ ಮೇಲಿನ ಹಿಡಿತ ತಪ್ಪುತ್ತದೆ. ಮನಸ್ಸು ಕಪಿಯಾಗುತ್ತದೆ. ನೈತಿಕ ಜವಾಬ್ದಾರಿ ಕುಸಿಯುತ್ತದೆ. ಇನ್ನು ಹೆಚ್ಚಿದರೆ, ಎಚ್ಚರ ತಪ್ಪುತ್ತದೆ. ಆಸ್ಪತ್ರೆಗೆ ಸೇರಿಸಿ, ದೇಹಕ್ಕೆ ನೀರು ಚುಚ್ಚಬೇಕಾದ ಅಗತ್ಯ ಬರುತ್ತೆ. ಪದೇ ಪದೇ ಸೇವಿಸುವುದರಿಂದ ದೇಹ ಮದ್ಯದ ಚಟಕ್ಕೆ ಬಲಿಯಾಗುತ್ತದೆ. ಕ್ಲುಪ್ತ ಸೇವನೆಯಿಂದ ಯಾರಾದರೂ ಮದ್ಯದ ದಾಸರಾಗಬಹುದಾದರೂ, ಚಟಕ್ಕೆ ಬೀಳುವ ಸಾಧ್ಯತೆ ಕೆಲ ಜನರಲ್ಲಿ ಬಹಳ ಹೆಚ್ಚು. ಇಂತಹ ಜನರಿಗೆ ಪ್ರಾಯೋಗಿಕವಾಗಿಯೂ ಮದ್ಯ ಸೇವನೆ ಒಳಿತಲ್ಲ. ಇದೇ ಬಗೆಯ, ಮಿದುಳಿನ ರಾಸಾಯನಿಕ ಕ್ರಿಯೆಗಳನ್ನು ತಾತ್ಕಾಲಿಕವಾದರೂ ಹಿತವೆನಿಸುವಂತೆ ಬದಲಿಸುವ ಹತ್ತಾರು ರಾಸಾಯನಿಕಗಳು ಭೂಗತ ಪ್ರಪಂಚದ ಆರ್ಥಿಕ ಮೂಲಗಳಾಗಿವೆ. ಈ ಬಗೆಯ ರಾಸಾಯನಿಕಗಳಲ್ಲಿ ಮುಖ್ಯವಾದವು ಬಾರ್ಬಿಟುರೇಟುಗಳು, ಮಾರ್ಫೀನ್, ಹೆರೋಯಿನ್, ಕೊಕೈನ್, ಆಂಫೇಟಮಿನ್, ಮರುವಾನಾ ಮುಂತಾದವು. ಬಾರ್ಬಿಟುರೇಟುಗಳು ಮನಸ್ಸಿನ ತುಮುಲವನ್ನು ಕಡಿಮೆ ಮಾಡುವಂತೆ ತೋರುತ್ತವೆ. ಮಿಕ್ಕೆಲ್ಲವೂ ಸೇವಿಸಿದ ಹೊಸದರಲ್ಲಿ ಉತ್ಸಾಹ ಉಕ್ಕುತ್ತಿರುವ ಅನುಭವ ನೀಡುತ್ತವೆ. ಮೊದಲ ಉತ್ಸಾಹದ ಕ್ಷಣಗಳು ಕಳೆಯುತ್ತಿದ್ದಂತೆ, ಮನಸ್ಸಿನಲ್ಲಿ ಕಾರ್ಮೋಡ ಕವಿಯುತ್ತದೆ. ಪುನಃ ಮದ್ದಿಗಾಗಿ ಹಂಬಲ ಪ್ರಾರಂಭವಾಗುತ್ತದೆ. ದೀರ್ಘಾವಧಿ ಸೇವನೆಯಿಂದ ಸ್ನಾಯುಗಳ ಮೇಲಿನ ಹಿಡಿತ ಕಡಿಮೆಯಾಗುತ್ತದೆ. ಸತತ ಭ್ರಮಾಲೋಕದಲ್ಲಿರುವ ಅನುಭವವಾಗುತ್ತದೆ. ಚಟಕ್ಕೆ ಬಿದ್ದವರು, ಇಂತಹ ಮದ್ದು ಗಳಿಸಲು ಕಳ್ಳತನ, ಸುಳ್ಳುತನಗಳಲ್ಲಿ ತೊಡಗಿ ಸಮಾಜ ಕಂಟಕ ರಾಗುತ್ತಾರೆ. ನಮ್ಮ ಮಿದುಳಿನ ಮೇಲೆ ಇವುಗಳಷ್ಟು ದುಷ್ಪರಿಣಾಮ ಬೀರದ ಮದ್ದುಗಳಲ್ಲಿ ಕಾಫಿಯಲ್ಲಿರುವ ಕೆಫೀನ್ ಮತ್ತು ಹೊಗೆಸೊಪ್ಪಿನಲ್ಲಿರುವ ನಿಕೋಟಿನ್ನುಗಳೂ ಸೇರಿವೆ. ಕೆಫೀನ್ ಮಿದುಳನ್ನು ಪ್ರಚೋದಿಸಿ, ನಿದ್ರೆಯನ್ನು ಕೆಲಮಟ್ಟಿಗೆ ನಿವಾರಿಸುತ್ತದೆ. ನಿಕೋಟಿನ್ ಮಾನಸಿಕ ತುಮುಲವನ್ನು ಕಡಿಮೆ ಮಾಡುವಂತೆ ತೋರುತ್ತದೆ. ಈ ಚಟಗಳಿಗೆ ದಾಸರಾಗಿರುವ ಜನ ಪ್ರಪಂಚದ ಎಲ್ಲೆಡೆ ಇದ್ದಾರೆ.

ಮಿದುಳು ನಮ್ಮ ಪಂಚೇಂದ್ರಿಯಗಳ ಒಡೆಯನಷ್ಟೇ ಅಲ್ಲದೆ, ಅದು ನೆನಪಿನ ತಾಣವಾಗಿ ನಮ್ಮ ಸಾಮಾಜಿಕ ಬದುಕನ್ನೂ ನಿಯಂತ್ರಿಸುತ್ತದೆ. ಆನುವಂಶಿಕವಾಗಿ ನಾವು ಗಳಿಸಿರುವ ನಮ್ಮ ಮಿದುಳಿನ ರಾಸಾಯನಿಕ ಕ್ರಿಯೆ ಹಾಗೂ ಈ ಕ್ರಿಯೆಗಳ ಮೇಲೆ ಬಾಲ್ಯದಿಂದ ಅನುಭವಿಸಿರುವ ಸುಖ ಸಂತೋಷಗಳ ಪರಿಣಾಮ ನಮ್ಮ ವ್ಯಕ್ತಿತ್ವವನ್ನು ರೂಪಿಸುತ್ತವೆ. ದುರದೃಷ್ಟವಶಾತ್ ಸಮಾಜಕ್ಕೆ ಕೆಡಕನ್ನುಂಟುಮಾಡುವಂತೆ ಮಿದುಳು ಬದಲಾಗುವುದು ಸುಲಭ. ದಬ್ಬಾಳಿಕೆ, ದೌರ್ಜನ್ಯ, ಅಧಿಕಾರ ದಾಹ, ಕೋಮು ಭಾವನೆ ಇವುಗಳನ್ನು ಮಿದುಳು ಸುಲಭವಾಗಿ ಹೀರಿಕೊಳ್ಳುತ್ತದೆ. ಇದನ್ನು ಕೆಲವರು ಡಾರ್ವಿನ್ನನ ವಿಕಾಸವಾದದ ಮಾದರಿಯಲ್ಲಿ ವಿವರಿಸುವ ಪ್ರಯತ್ನ ಮಾಡಿದ್ದಾರೆ. ಬಹುಶಃ ದೌರ್ಜನ್ಯ, ದಬ್ಬಾಳಿಕೆ, ಕೋಮುಭಾವನೆಗಳು ಬೇಟೆಗಾರರಾಗಿ ಸಣ್ಣ ಸಣ್ಣ ಗುಂಪುಗಳಲ್ಲಿ ಲಕ್ಷಾಂತರ ವರ್ಷಗಳು ವಾಸಿಸಿದ ನಮ್ಮ ಪೂರ್ವಜರಿಗೆ ಅನುಕೂಲಕರವಾಗಿದ್ದಿರಬಹುದು. ಅಂತಹ ಕಾಲದಲ್ಲಿ, ತಮ್ಮ ಗುಂಪು ಬೇಟೆಯಾಡುವ ತಾಣವನ್ನು ಬೇರೆ ಗುಂಪುಗಳಿಂದ ರಕ್ಷಿಸಿಕೊಳ್ಳುವುದು ಬಹು ಮುಖ್ಯವಾಗಿದ್ದಿರಬಹುದು. ಬೇರೆ ಬೀದಿಯ ನಾಯಿ ಬಂದಾಗ ಈ ಬೀದಿಯ ಎಲ್ಲ ನಾಯಿಗಳು ಒಟ್ಟಾಗಿ ಬೊಗಳುವಂತೆ, ಆಗಿನ ಮನುಷ್ಯನ ಸ್ವಭಾವವೂ ರೂಪುಗೊಂಡಿರಬಹುದು. ಆದರೆ ಇಂದು ಪ್ರಪಂಚದ ಪರಿಸ್ಥಿತಿ ಬಹಳ ಬದಲಾಗಿದೆ. ಕಲ್ಲು, ಕವಣೆಗಳಿದ್ದ ಮನುಷ್ಯರ ಕೈಯಲ್ಲಿ ಇಂದು ಅಣುಬಾಂಬುಗಳಂತಹ ಬ್ರಹ್ಮಾಸ್ತ್ರಗಳಿವೆ. ಆದ್ದರಿಂದ ಬದುಕುಳಿಯಲು ಇಂದು ಜನಗಳ ನಡುವೆ ಹೊಂದಾಣಿಕೆ, ಸಹಿಷ್ಣುತೆ ಅತ್ಯಂತ ಅಗತ್ಯವಾಗಿದೆ. ಇಲ್ಲವಾದಲ್ಲಿ, ಯುದ್ಧಗಳಿಂದ ಮನುಕುಲವೇ ನಾಶವಾಗುವ ಸಾಧ್ಯತೆಯಿದೆ. ಆದರೆ, ದುರದೃಷ್ಟವಶಾತ್, ಜೀವವಿಕಾಸದಂತೆ ಸಾಂಸ್ಕೃತಿಕ ವಿಕಾಸವೂ ಬಹು ನಿಧಾನ.

ಒಬ್ಬ ವ್ಯಕ್ತಿಯ ಮಿದುಳಿನಲ್ಲಿ ಪ್ರಾರಂಭವಾಗುವ ಯೋಚನೆಗಳು ಪಕ್ಕದಲ್ಲಿರುವವರ ಮಿದುಳಿಗೂ ಹರಡಿ

## ಬಯಕೆ



ಹೊತ್ತು ಮುಳುಗುವಾಗ
ಸತ್ತು ಮಲಗಿರುವ
ಹತ್ತು ಬಯಕೆಗಳು
ಎಚ್ಚೆತ್ತುಕೊಳ್ಳುತ್ತವೆ
ಗೊತ್ತು ಗುರಿಯಿಲ್ಲದೆ
ಒಳಗೊಳಗೆ
ಸುತ್ತತೊಡಗುತ್ತವೆ
ಕನಸುಗಳ
ಹತ್ತಲಾಗದೆ
ಬೇಸರವ
ಹತ್ತಿಕ್ಕಲಾರದೆ
ಮನಸ್ಸು
ಅತ್ತುಬಿಡುತ್ತದೆ
ಆದರೆಷ್ಟು ಹೊತ್ತು.... ?
ಬೆಳಗಾಗಲು
ಮತ್ತೆ
ಬಯಕೆಗಳು
ಸತ್ತು ಮಲಗುತ್ತವೆ.

ಕೆ. ರಜನಿಕಾಂತ ತಂತ್ರಿ
ಮಾರ್ಪಳ್ಳಿ

ಸಾಮಾಜಿಕ ನಂಬಿಕೆಗಳು ಹಂದರ ನಿರ್ಮಿಸುತ್ತವೆ. ಹಲವಾರು ಬಗೆಯ ನಂಬಿಕೆಗಳು ಬಹುಕಾಲ ನಶಿಸದೇ ಉಳಿಯುತ್ತವೆ. ಇನ್ನು ಕೆಲವು ಸ್ವಲ್ಪ ಕಾಲ ಎಲ್ಲೆಡೆ ಹರಡಿ, ಸಹಜ ಮರಣ ಅಪ್ಪುತ್ತವೆ. ಈಗ ಕೆಲ ವರ್ಷಗಳ ಹಿಂದೆ ಹಾಲು ಕುಡಿಯುವ ಗಣಪತಿ ಒಮ್ಮೆಲೇ ಎಲ್ಲೆಡೆ ಕಾಣಿಸಿಕೊಂಡು, ಒಂದೆರಡು ವಾರಗಳಲ್ಲಿ ಕಾಣೆಯಾಯಿತು. ಯೂರೋಪ್, ಅಮೆರಿಕಾಗಳಲ್ಲಿ ಆಗಿಂದಾಗ್ಗೆ 'ಪ್ರಪಂಚ ಅಂತ್ಯಗೊಳ್ಳುವ' ಜ್ವರ ಬಂದು ಕಾಡುತ್ತಿದೆ. ಈ ಸನ್ನಿ ಹಿಡಿದವರು, ಸದ್ಯದಲ್ಲಿಯೇ ಪ್ರಪಂಚ ಅಂತ್ಯಗೊಳ್ಳಲಿದೆ ಎಂದು ಆಳವಾಗಿ ನಂಬುತ್ತಾರೆ. ಇಂತಹ ನಂಬಿಕೆಯಿಂದ ತಮ್ಮ ಸ್ಥಿರಾಸ್ತಿಯನ್ನೆಲ್ಲಾ ಅವಸರದಲ್ಲಿ ಬಿಕರಿ ಮಾಡಿರುವವರು ಸಹಸ್ರಾರು ಮಂದಿ. ನಮ್ಮಲ್ಲೂ, ೬೦ರ ದಶಕದಲ್ಲಿ, 'ಅಷ್ಟಗ್ರಹ ಕೂಟ'ದಿಂದ ಪ್ರಳಯವಾಗಲಿದೆ ಎಂಬ ಹೆದರಿಕೆ ವ್ಯಾಪಕವಾಗಿ ಹರಡಿತ್ತು. ಹೀಗೆ ಒಂದು ಮಿದುಳಿನಿಂದ ಇನ್ನೊಂದು ಮಿದುಳಿಗೆ ಹರಡುವ ಯೋಚನೆಗಳನ್ನು ಬ್ಯಾಕ್ಟೀರಿಯಾ ಇಲ್ಲವೇ ವೈರಾಣುಗಳ ಸೋಂಕಿಗೆ ಹೋಲಿಸಬಹುದು. ಒಮ್ಮೆ ಬೆಂಗಳೂರಿನ ಬಹಳಷ್ಟು ಜನ 'ಮದರಾಸ್ ಕಣ್ಣಿನಿಂದ' ಬಳಲಿದರು. ನಾವು ಪುನಃ ಪುನಃ ನೆಗಡಿಗೆ ಬಲಿಯಾಗುತ್ತೇವೆ. ಇದಕ್ಕೆ ಮುಖ್ಯ ಕಾರಣ, ನೆಗಡಿ ಬರಿಸುವ ವೈರಾಣು ತನ್ನ ಆನುವಂಶಿಕ ಮಾಹಿತಿಯನ್ನು ಕ್ಷಿಪ್ರವಾಗಿ ಬದಲಿಸಿಕೊಳ್ಳುವುದು. ಇಲ್ಲದಿದ್ದರೆ, ನಮ್ಮ ದೇಹದ ಇಮ್ಯೂನ್ ವ್ಯವಸ್ಥೆ ವೈರಾಣುವನ್ನು ನಾಶ ಮಾಡುತ್ತದೆ. ಇದೇ ರೀತಿ ನಾವು ಪೂಜಿಸುವ ದೇವತೆಗಳೂ ಪ್ರಸಿದ್ಧರಾಗಿ ಕಾಲಕ್ರಮದಲ್ಲಿ ತಮ್ಮ ವರ್ಚಸ್ಸು ಕಳೆದುಕೊಳ್ಳುತ್ತಾರೆ. ವೇದ ಕಾಲಗಳ ದೇವತೆಗಳ ಪ್ರಭಾವ ಪುರಾಣ ಕಾಲಕ್ಕೆ ಕುಂದಿತ್ತು. ಒಂದೆರಡು ದಶಕಗಳ ಹಿಂದೆ 'ಬಾಬಾ ಜ್ವರ' ಪ್ರಬಲವಾಗಿತ್ತು. ನನಗೆ ಒಬ್ಬ 'ದೇವಿಯ' ಪರಿಚಯವಿತ್ತು. ಯಾರಿಗೂ ಬೇಡವಾದ ಈ ದೇವಿ, ತಿಂಗಳಿಗೋ, ಎರಡು ತಿಂಗಳಿಗೋ ಸಿಕ್ಕುತ್ತಿದ್ದ ಅರ್ಧ ಕೋಳಿಯಿಂದಲೇ ತೃಪ್ತಿ ಪಟ್ಟುಕೊಳ್ಳುತ್ತಿದ್ದಳು. ಒಂದು ದಿನ, ಅವಳ ಮಹಿಮೆ ಒಬ್ಬ ಅದೃಷ್ಟವಂತನ ಮಿದುಳಲ್ಲಿ ಗೋಚರಿಸಿತು. ಈಗ, ಆ ದೇವಿಯಿರುವ ಬೀದಿಯಲ್ಲಿ 'ಟ್ರಾಫಿಕ್ ಜಾಂ' ಆಗದ ಶುಕ್ರವಾರವಿಲ್ಲ. ಇವೆಲ್ಲಾ ಆಗಾಗ ಬಂದು ಹೋಗುವ ಇನ್‌ಫ್ಲೂಯೆಂಜಾ ಜ್ವರದ ಅಲೆಯ ಹಾಗೆ. ಆದರೆ ಮಿದುಳಿಗೆ ಬರುವ ಜ್ವರಗಳಲ್ಲಿ ಹಲವು ಲಕ್ಷಾಂತರ ವರ್ಷಗಳು ಕಳೆದರೂ ನಶಿಸಲಾರವು. ಇಂತಹ ಯೋಚನೆಗಳು ಮಿದುಳಿಂದ ಮಿದುಳಿಗೆ ಸರಾಗವಾಗಿ ಚಲಿಸುವ ಸಾಮರ್ಥ್ಯ ಪಡೆದಿರುತ್ತವೆ. ಒಮ್ಮೆ ಮಿದುಳಿಗೆ ಅಂಟಿಕೊಂಡಿತೆಂದರೆ ಪುನಃ ಬಿಡುವುದೇ ಇಲ್ಲ. ಆಗ ಅಂತಹ ಯೋಚನೆ, ನಂಬಿಕೆ, ಸಮಾಜದ ಅವಿಭಾಜ್ಯ ಅಂಗವಾಗುತ್ತದೆ. ಅದರಲ್ಲಿ ವಸ್ತುನಿಷ್ಠ ಸತ್ಯ ಇರಲೇಬೇಕಾಗಿಲ್ಲ.

ನಮ್ಮ ಮಿದುಳಿನ ಅಗಾಧ ಶಕ್ತಿಯಿಂದಾಗಿ, ಹಲವಾರು ಆಧಾರಗಳಿಲ್ಲದ ನಂಬಿಕೆಗಳು ಹಿಂದಿನಿಂದ ಆಳವಾಗಿ ಬೇರೂರಿವೆ. ಮನಸ್ಸಿನ ಶಕ್ತಿಯಿಂದಲೇ ವಸ್ತುಗಳನ್ನು ಚಲಿಸಬಹುದು ಎಂಬುದು ಅಂತಹ ಒಂದು ನಂಬಿಕೆ. 'ತಾನ್ಸೇನ್ ಹಾಡಿದರೇ ದೀಪ ಬೆಳಗುತ್ತಿತ್ತು' ಎಂಬ ಕತೆ ಈ ನಂಬಿಕೆ ಹಳೆಯದು ಎಂಬುದಕ್ಕೆ ಸಾಕ್ಷಿ. ಘಟನೆ ನಡೆಯುವುದಕ್ಕೆ ಮೊದಲೇ ಮನಸ್ಸಿಗೆ ಅದರ




ಅನುಭವವಾಗಬಲ್ಲದು ಎಂಬ ನಂಬಿಕೆಯೂ ಇಂತಹುದೇ. ನಮ್ಮ ಮಿದುಳು ಸತತ ಕ್ರಿಯಾಶೀಲ. ಅದರಲ್ಲಿ ದಿನನಿತ್ಯ ಸಹಸ್ರಾರು ಯೋಚನೆಗಳು ಅರಳಿ ಬಾಡುತ್ತವೆ. ಇವುಗಳಲ್ಲಿ ಬಹುಪಾಲು ನೈಜವಾಗಿ ಘಟಿಸುವುದಿಲ್ಲ. ಆಗ ಅವುಗಳನ್ನು ಮನಸ್ಸು ಮರೆಯುತ್ತದೆ. ಅಪರೂಪಕ್ಕೊಮ್ಮೆ, ಮೊದಲೇ ಮನಸ್ಸಿನಲ್ಲಿ ಮೂಡಿದ ಘಟನೆ ನಿಜವಾದಲ್ಲಿ, ಅದನ್ನು ಮನಸ್ಸು ಜ್ಞಾಪಕದಲ್ಲಿಡುತ್ತದೆ. ಇದೇ ಬಗೆಯ ಇನ್ನೊಂದು ನಂಬಿಕೆ, ಒಬ್ಬರ ಮನಸ್ಸಿನಲ್ಲಿರುವುದನ್ನು, ದೂರದಲ್ಲಿದ್ದೇ ಇನ್ನೊಬ್ಬರು ಗ್ರಹಿಸುವ ಶಕ್ತಿ ಪಡೆದಿರುತ್ತಾರೆ ಎಂಬುದು. ಈ ಎಲ್ಲ ನಂಬಿಕೆಗಳನ್ನೂ ಸೂಕ್ತ ಪ್ರಯೋಗಗಳಿಗೆ ಒಳಮಾಡಿದಾಗ, ವೈಜ್ಞಾನಿಕವಾಗಿ ಪರೀಕ್ಷಿಸಿದಾಗ, ಅವುಗಳಲ್ಲಿ ಹುರುಳಿಲ್ಲ ಎಂದು ಸಾಬೀತಾಗಿದೆ.

ಮಿದುಳು ಹೇಗೆ ಕಾರ್ಯಮಾಡಬಹುದು ಎಂಬುದರ ಬಗ್ಗೆ ಅನೇಕ ಜಿಜ್ಞಾಸೆಗಳು ನಡೆದಿವೆ. ಮಿದುಳಿನ ಜಟಿಲತೆಯಿಂದಾಗಿ, ಹಿಂದಿನಿಂದಲೂ, ಅದರ ಕಾರ್ಯವಿಧಾನವನ್ನು ವಿವರಿಸಲು ಅದನ್ನು ಆಯಾ ಕಾಲದ ಅತ್ಯಂತ ಜಟಿಲ ಯಂತ್ರಗಳಿಗೆ ಹೋಲಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕಂಪ್ಯೂಟರುಗಳು ಅತ್ಯಂತ ಪ್ರಬಲವಾಗಿದ್ದು ಎಲ್ಲ ರಂಗಗಳಲ್ಲಿ ಕ್ರಾಂತಿಕಾರಕ ಬೆಳವಣಿಗೆಗೆ ಎಡೆಮಾಡಿಕೊಟ್ಟಿವೆ. ಆದ್ದರಿಂದ ಸಹಜವಾಗಿಯೇ ಅನೇಕರು ಮಿದುಳನ್ನು ಕಂಪ್ಯೂಟರಿಗೆ ಹೋಲಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಮಿದುಳು ಕ್ಷಣ ಮಾತ್ರದಲ್ಲಿ ಪರಿಹರಿಸುವ ಅನೇಕ ಸಮಸ್ಯೆಗಳನ್ನು ಬಿಡಿಸಲು ಕಂಪ್ಯೂಟರುಗಳು ಬಹಳ ಕಾಲ ತೆಗೆದುಕೊಳ್ಳುತ್ತವೆ. ಉದಾಹರಣೆಗೆ, ಅನೇಕ ಪ್ರಾಣಿಗಳಿರುವ ಚಿತ್ರವನ್ನು ತೋರಿಸಿ, ಅದರಲ್ಲಿರುವ ಪ್ರಾಣಿಗಳನ್ನು ಗುರುತಿಸಲು ಕೇಳಿದರೆ ಪುಟ್ಟ ಮಗುವೂ ತಕ್ಷಣ ಗುರುತಿಸೀತು. ಹಾಗೆ ಮಾಡುವುದು ಕಂಪ್ಯೂಟರುಗಳಿಗೆ ಕಷ್ಟಸಾಧ್ಯ. ಇಂತಹ ಸಮಸ್ಯೆಗಳಿಗೆ ನಮ್ಮ ಮಿದುಳು ಹೇಗೆ ಪರಿಹಾರ ಕಂಡುಕೊಳ್ಳುತ್ತದೆ ಎಂಬುದು ನಿಖರವಾಗಿ ತಿಳಿದಿಲ್ಲ. ಕಂಪ್ಯೂಟರುಗಳು ಸಾಧಾರಣವಾಗಿ ಕೆಲಸ ಮಾಡುವ ಬಗೆ ಬಹುಶಃ ಇದಕ್ಕೆ ಒಂದು ಕಾರಣವಿರಬಹುದು. ಇತ್ತೀಚಿನವರೆಗೂ ಕಂಪ್ಯೂಟರ್‌ಗಳು ಒಂದು ಕ್ಷಣದಲ್ಲಿ ಒಂದು ಗುಣಿತ ಮಾತ್ರ ಮಾಡಬಲ್ಲವಾಗಿದ್ದವು. ಆದ್ದರಿಂದಲೇ ಲಕ್ಷಾಂತರ ಗಣಿತ ಕ್ರಿಯೆಗಳ ನಂತರವೇ ಉತ್ತರ ದೊರೆಯಬಹುದಾದಂತಹ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಕಂಪ್ಯೂಟರ್‌ಗಳು ಬಹಳ ಕಾಲ ತೆಗೆದುಕೊಳ್ಳುತ್ತಿದ್ದುವು. ಇದು ಹೇಗೆಂದರೆ, ಸಾವಿರಾರು ಜನರಿಗೆ ಅಡುಗೆ ಮಾಡಬೇಕಾಗಿರುವ ಸನ್ನಿವೇಶವನ್ನು ಊಹಿಸಿಕೊಳ್ಳಿ. ಒಬ್ಬನೇ ಅಡುಗೆಯವನು ಎಲ್ಲ ಕೆಲಸವನ್ನೂ ಮಾಡುತ್ತಿದ್ದರೆ ಅಡುಗೆ ಬೇಗ ಮುಗಿಯಲಾರದು. ಕಡೆಯ ತಿನಿಸು ಮಾಡುವ ವೇಳೆಗೆ ಮೊದಲ ತಿನಿಸು ಹಳಸಿರುತ್ತದೆ. ಅದೇ ಹತ್ತಾರು ಜನ ಸೇರಿ ಮಾಡಿದರೆ ಏನೂ ಕಷ್ಟವಿಲ್ಲ. ಇದೇ ರೀತಿ ನಮ್ಮ ಮಿದುಳಿನ ಅನೇಕ ಭಾಗಗಳಲ್ಲಿ ಸ್ವತಂತ್ರವಾಗಿ ನಡೆಯುವ ಅನೇಕ ಕ್ರಿಯೆಗಳ ಸಂಯೋಜನೆಯಿಂದ ನಾವು ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುತ್ತಿರಬಹುದು. ಇತ್ತೀಚೆಗೆ ಅನೇಕ ಗಣಿತ ಕ್ರಿಯೆಗಳನ್ನು ಸಮಾನಾಂತರವಾಗಿ ನಡೆಸುವಂತೆ ಕಂಪ್ಯೂಟರ್‌ಗಳನ್ನು ನಿರ್ಮಿಸಲು ಸಾಧ್ಯವಾಗಿದೆ. ಇದರಿಂದಾಗಿ ಇಂದಿನ ಕಂಪ್ಯೂಟರ್‌ಗಳು ಕೆಲವು ಬಗೆಯ ಸಮಸ್ಯೆಗಳನ್ನು ಬಿಡಿಸುವಲ್ಲಿ ನಮ್ಮ ಬೌದ್ಧಿಕತೆಯನ್ನು ನಾಚಿಸಬಲ್ಲವು. ಉದಾಹರಣೆಗೆ, ಕಂಪ್ಯೂಟರುಗಳು ಬುದ್ಧಿವಂತಿಕೆಯ ಒರೆಗಲ್ಲು ಎಂದು ಪರಿಗಣಿಸಿರುವ ಚೆಸ್ ಆಡಬಲ್ಲವು. ಹಲವು ವರ್ಷಗಳ ಹಿಂದೆ ಐ.ಬೀ.ಎಂ. ಕಂಪೆನಿ ನಿರ್ಮಿಸಿದ ಕಂಪ್ಯೂಟರ್ ರಷ್ಯಾದ ಚೆಸ್ ಗ್ರಾಂಡ್ ಮಾಸ್ಟರ್ ಒಬ್ಬರನ್ನು ಸೋಲಿಸಿತು. ಕಂಪ್ಯೂಟರ್ ಪರಿಣಿತರು, ಸ್ವಂತ ಬುದ್ಧಿ ಇಲ್ಲದ ಪರಸ್ಪರ ಮಾಹಿತಿ ವಿನಿಮಯ ಮಾಡಿಕೊಳ್ಳುವ ಅನೇಕ ಸ್ವತಂತ್ರ ಜಾಲಗಳಿಂದ 'ಬುದ್ಧಿ' ಹೊಮ್ಮಬಲ್ಲುದು ಎಂದು ನಂಬುತ್ತಾರೆ. ಆದರೆ ಎಲ್ಲರೂ ಇದನ್ನು ಒಪ್ಪುವುದಿಲ್ಲ.

ಬುದ್ಧಿವಂತಿಕೆ ಎಂದರೆ ಏನೆಂದು ತಿಳಿಸುವುದು ಬಹಳ ಕಷ್ಟ. ಆದರೂ ಮಿದುಳಿನ ರಚನೆ ವಿಸ್ತಾರವಾದಷ್ಟೂ ಅದನ್ನು ಹೊಂದಿದ ಪ್ರಾಣಿ ತೊಡಗುವ ಕೆಲಸಗಳಲ್ಲಿ ವೈವಿಧ್ಯತೆ ಹೆಚ್ಚುತ್ತದೆ. ಮನುಷ್ಯನ ಮಿದುಳಿನ ಸಂಕೀರ್ಣ ರಚನೆ ಇನ್ನಾವ ಪ್ರಾಣಿಯಲ್ಲೂ ಕಂಡುಬರುವುದಿಲ್ಲ. ಆದ್ದರಿಂದಲೇ ಮನುಷ್ಯ ಮಾತ್ರ 'ಸಂಸ್ಕೃತಿ'ಯ ಕೂಸಾಗಿದ್ದಾನೆ. ಈತ ರಾಜಕೀಯ, ಧರ್ಮ, ಕಲೆ, ವಿಜ್ಞಾನಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಜೀವನದ ಅರ್ಥದ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಾನೆ. ವಿಜ್ಞಾನ ಇನ್ನೂ ಮಿದುಳಿನ ರಚನೆಯನ್ನೂ ಕಾರ್ಯ ವಿಧಾನವನ್ನೂ ಅರ್ಥಮಾಡಿಕೊಳ್ಳುವ ಪ್ರಾರಂಭ ಹಂತದಲ್ಲಿದೆ. ಮಿದುಳಿನ ರಾಸಾಯನಿಕ ಕ್ರಿಯೆಗಳು ಹೇಗೆ ನಮಗೆ 'ನಾನು' ಎಂಬ ಭಾವನೆಯನ್ನು ಬರಿಸುತ್ತದೆ ಎಂಬುದನ್ನು ಇನ್ನೂ ತಿಳಿದುಕೊಳ್ಳಬೇಕಾಗಿದೆ. ಇಂತಹ ಸಮಸ್ಯೆಗಳ ಬಗ್ಗೆ ವಿಜ್ಞಾನಿಗಳು ಇನ್ನೂ ಒಮ್ಮತಕ್ಕೆ ಬರಬೇಕಾಗಿದೆ.

**ಪ್ರೊ॥ ಎಂ. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್, ಇಂಡಿಯನ್
ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೧೨

# ಕೋಮುವಾದದ ರಾಜಕೀಯ

ಇದೇ ಹೆಸರಿನ ಪುಸ್ತಕದ (ನವಕರ್ನಾಟಕ) ಬಗ್ಗೆ ಆಗಸ್ಟ್ ೨೦೦೧ರ 'ಹೊಸತು'ವಿನಲ್ಲಿ ಡಾ|| ಆರ್. ವಿ. ಭಂಡಾರಿಯವರು ಬರೆದಿರುವ ''ನಾನು ಓದಿದ ಪುಸ್ತಕ'' ಲೇಖನ ಮಾರ್ಮಿಕವಾಗಿದೆ. ೧೯೩೦ರ ದಶಕದ ಯೂರೋಪಿನಲ್ಲಿ ಬುಸುಗುಟ್ಟಿದ ಸದೃಶ ಪಿಡುಗನ್ನು (ನಾಟ್ಸೀ ವಾದ) ಕುರಿತು ಮಹಾಮಾನವತಾವಾದಿ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಮಾಡಿದ ವಿಶ್ಲೇಷಣೆಯನ್ನು (೧೯೩೩) ಮೇಲಿನ ಲೇಖನಕ್ಕೆ ಪೂರಕವಾಗಿ ಉಲ್ಲೇಖಿಸಬಯಸುತ್ತೇನೆ. ಇದನ್ನು ''ಆಲ್ಬರ್ಟ್ ಐನ್‌ಸ್ಟೈನ್ : ಮಾನವೀಯ ಮುಖ'' (ಅತ್ರಿ ಬುಕ್ ಸೆಂಟರ್) ಪುಸ್ತಕದಿಂದ ಉದ್ಧರಿಸಿದೆ. ಇದರಲ್ಲಿ ಬರುವ ''ನಾನು'' ಐನ್‌ಸ್ಟೈನ್‌ರನ್ನು ಸೂಚಿಸುತ್ತದೆ.

* * *

ಯುರೋಪಿನ ಹೃದಯ ಭಾಗದಲ್ಲಿ ಅನಾವರಣ ಗೊಳ್ಳುತ್ತಿರುವ ರುದ್ರ ದೃಶ್ಯ ಜರ್ಮನಿಗೆ ಶಾಶ್ವತ ಕಳಂಕ ಬಡಿಯುವಂತೆ ಅತಿ ಭೀಕರವಾಗಿದೆ ಮತ್ತು ಅಮಾನುಷ ವಾಗಿದೆ. ತನ್ನನ್ನು ನಾಗರಿಕವೆಂದು ಕರೆದುಕೊಳ್ಳುತ್ತಿರುವ ಜನಾಂಗಗಳ ಸಮುದಾಯಕ್ಕೆ ಇದು ಖಂಡಿತವಾಗಿಯೂ ಭೂಷಣಪ್ರಾಯವಾದುದಲ್ಲ!

ಶಾಲಾಧ್ಯಾಪಕರ ಹಾಗೂ ಕವಾಯತಿ ಸಾರ್ಜೆಂಟುಗಳ ಅನುಸ್ಯೂತ ಪೀಳಿಗೆಯು ಜರ್ಮನ್ ಮಂದಿಗೆ ಶತಮಾನ ಗಳಿಂದಲೂ ಮತಿಭ್ರಾಂತಿಯನ್ನು ಊಡುತ್ತ ಬಂದಿದೆ. ಕಠಿಣ ಪರಿಶ್ರಮದ ಶಿಕ್ಷಣ ಇವರಿಗೆ ದೊರೆತಿದೆ. ಅನೇಕ ವಿಷಯಗಳಲ್ಲಿ ಇವರು ಪರಿಣತರೂ ಆಗಿದ್ದಾರೆ. ಆದರೆ ಇವುಗಳ ಜೊತೆಯಲ್ಲೇ ಇವರನ್ನು ಗುಲಾಮಗಿರಿಯ ಕುರ್ನಿಸಾತು ಮನೋಭಾವಕ್ಕೂ ದಂಡಿನ ಮಾಮೂಲೀ ಚರ್ವಿತ ಚರ್ವಣ ಮತ್ತು ಪಾಶವೀಯತೆಗಳಿಗೂ ಪಳಗಿಸಿ ಹೊಂದಿಸಲಾಗಿದೆ. ವೈಮರ್ ಗಣರಾಜ್ಯದ ಯುದ್ಧೋತ್ತರ ಪ್ರಜಾಪ್ರಭುತ್ವಾತ್ಮಕ ಸಂವಿಧಾನವು ಜರ್ಮನರಿಗೆ ದೈತ್ಯನ ಉಡುಗೆಗಳು ಉಂಗುಷ್ಠ ಮಹಾರಾಜನಿಗೆ ಪೊರ್ದುವಷ್ಟು ಅಡಕವಾಗಿ ಹೊಂದಿಕೊಂಡಿತು! ಆಗ ಹಣದ ಉಬ್ಬರ



ಮತ್ತು ಮುಗ್ಗಟ್ಟು ಕವಿದು ಪ್ರತಿಯೊಬ್ಬನೂ ಭೀತ ಮತ್ತು ಉದ್ರಿಕ್ತ ವಾತಾವರಣದಲ್ಲಿ ಸವೆಯುವಂತೆ ಮಾಡಿದವು.

ಹಿಟ್ಲರ್ ರಂಗ ಪ್ರವೇಶಿಸಿದ. ಸನ್ನಿವೇಶ ಮತ್ತು ಪ್ರಕೃತಿ ಇವುಗಳ ಕೂಡಿಕೆಯ ಪರಿಣಾಮವಾಗಿ ತನಗಿಂತ ಮೇಲು ಮಜಲಿನಲ್ಲಿದ್ದ ಎಲ್ಲರ ಎದುರೂ ಇವನು ಅಸೂಯೆ ಮತ್ತು ಹಾಲಾಹಲ ಕಾರುತ್ತಿದ್ದ. ಬೌದ್ಧಿಕವಾಗಿ ಇವನದು ಮಿತ ಸಾಮರ್ಥ್ಯ. ಯಾವುದೇ ಕೆಲಸಕ್ಕೂ ನಾಲಾಯಕ್. ನಿಮ್ನ ಮಧ್ಯಮವರ್ಗದಿಂದ ಮೇಲಕ್ಕೆ ಜಿಗಿದ ಹಿಟ್ಲರ್, ಜೀವನ ಮಟ್ಟಗಳಲ್ಲಿ ಅಧಿಕ ಸಮತೆ ಗಳಿಸಲು ಹೋರಾಡುತ್ತಿದ್ದ ಕಾರ್ಮಿಕ ವರ್ಗವನ್ನು ಕೂಡ ದ್ವೇಷಿಸುವಷ್ಟು ವರ್ಗ ಪ್ರತಿಷ್ಠೆ ಯನ್ನು ತನ್ನಲ್ಲಿ ತುಂಬಿಕೊಂಡಿದ್ದ. ಅಧಿಕಾರ ಕಬಳಿಸಬೇಕೆಂಬ ತನ್ನ ಉಗ್ರ ಹಂಬಲವನ್ನು ಈಡೇರಿಸಿಕೊಳ್ಳುವ ಹಾದಿಯಲ್ಲಿ ಇವನು ಗುಡುಗುತ್ತಿದ್ದ ಭಾಷಣಗಳು – ಇವು ಹಗೆತನದ ಕಟ್ಟೆ ಬಿರಿವ ಕಾವಿನಿಂದ ಅರ್ಥರಹಿತವಾಗಿದ್ದುವಾದರೂ – ಇವನ ಜೀವನ ಮತ್ತು ದೃಷ್ಟಿಗಳೊಡನೆ ಸಹಮತರಾಗಿದ್ದವರಿಗೆ ಆಪ್ಯಾಯಮಾನ ವಾಗಿದ್ದುವೆಂದು ಇವನಿಗೆ ತಿಳಿಯಿತು. ಓಣಿ ಮತ್ತು ಗಡಂಗುಗಳಿಂದ ಈ ತಿರುಕುಳಿ ಮಂದೆಯನ್ನು ಹೆಕ್ಕಿ ತನ್ನ ಸುತ್ತ ವ್ಯವಸ್ಥಿತವಾಗಿ ನೇಯ್ದುಕೊಂಡ. ಹಿಟ್ಲರ್ ತನ್ನ ರಾಜಕೀಯ ಜೀವನ ಆರಂಭಿಸಿದ್ದು ಹೀಗೆ.

ಆದರೆ ವಾಸ್ತವವಾಗಿ ಹಿಟ್ಲರನಿಗೆ ಧುರೀಣತ್ವದ ಅರ್ಹತೆ ಗಳಿಸಿಕೊಟ್ಟದ್ದೆಂದರೆ ವಿದೇಶೀಯವಾದ ಪ್ರತಿಯೊಂದರ ವಿರುದ್ಧವೂ ಅವನಲ್ಲಿ ತಹತಹಿಸುತ್ತಿದ್ದ ಕಟುದ್ವೇಷ – ಅದರಲ್ಲೂ ರಕ್ಷಣರಹಿತ ಅಲ್ಪಸಂಖ್ಯಾತ ಯೆಹೂದ್ಯರ ಬಗೆಗಿನ ತಿರಸ್ಕಾರ. ಇವರ ಬೌದ್ಧಿಕ ಸಂವೇದನಶೀಲತೆ ಅವನಲ್ಲಿ ಒಂದು ವಿಧದ ಅಸಹನೆಯನ್ನು ಪ್ರೇರಿಸಿತ್ತು. ಈ ಸಂವೇದನ ಶೀಲತೆಯನ್ನು ಅವನು – ಸ್ವಲ್ಪಮಟ್ಟಿಗೆ ಸಕಾರಣೀಯ ವಾಗಿಯೇ – ಅ-ಜರ್ಮನ್ ಎಂಬುದಾಗಿ ಪರಿಗಣಿಸಿದ್ದ.

ಈ ಎರಡು ''ಶತ್ರುಗಳ'' ವಿರುದ್ಧ ಹಿಟ್ಲರ್ ಹೂಡಿದ ಉದ್ರೇಕಕಾರಿ ವಾಕ್ಸಮರಗಳು ಅವನಿಗೆ ಜನಜಂಗುಳಿಯ ಬೆಂಬಲ ಒದಗಿಸಿಕೊಟ್ಟವು. ಆ ಮಂದಿಗೆ ಆತ ಅದ್ಭುತ ವೈಭವಗಳನ್ನೂ ಸುವರ್ಣ ಯುಗವನ್ನೂ ಆಶ್ವಾಸಿಸಿದ. ಕವಾಯತಿ, ಆಜ್ಞೆ, ಅಂಧ ವಿನೀತತೆ ಮತ್ತು ಕ್ರೌರ್ಯ ಇವುಗಳ ಬಗೆಗೆ ಜರ್ಮನಿಯಲ್ಲಿ ಶತಮಾನಗಳ ಕಾಲದಿಂದ ಬೆಳೆದುಬಂದಿದ್ದ ಆಸಕ್ತಿ ಅಭಿರುಚಿಗಳನ್ನು ಆತ ಸ್ವಂತೋದ್ದೇಶಗಳ ಈಡೇರಿಕೆಗೆ ತುಂಬ ಮುತ್ಸದ್ದಿತನದಿಂದ ಬಳಸಿಕೊಂಡ. ಹೀಗೆ ಹಿಟ್ಲರ್ ಫ್ಯೂಹ್ರರ್ ಆದ.

ಅವನ ಬೊಕ್ಕಸಗಳಿಗೆ ಹಣದ ಹೊಳೆಯೇ ಹರಿದು ಬಂದಿತು. ಆಸ್ತಿವಂತ ವರ್ಗಗಳು ಇದಕ್ಕೆ ಸಲ್ಲಿಸಿದ ದೇಣಿಗೆ ಕಡಿಮೆ ಏನೂ ಆಗಿರಲಿಲ್ಲ. ಜನರ ಸಾಮಾಜಿಕ ಹಾಗೂ ಆರ್ಥಿಕ ವಿಮೋಚನೆಗಾಗಿ ವೈಮರ್ ಗಣರಾಜ್ಯ ಪ್ರವರ್ತಿಸಿದ್ದ ಕ್ರಮಗಳನ್ನು ರದ್ದುಗೊಳಿಸಲು ಉಪಯುಕ್ತವಾಗಬಲ್ಲ ಒಂದು ಹತ್ಯಾರನ್ನು ಈ ವರ್ಗಗಳು ಅವನಲ್ಲಿ ಕಂಡವು. ಪ್ರಪಂಚ ಯುದ್ಧಕ್ಕೆ ಮೊದಲು ಜನರಿಗೆ ಅಭ್ಯಾಸವಾಗಿಹೋಗಿದ್ದ ಒಂದು ಬಗೆಯ ರಮ್ಯ ಮತ್ತು ಕಪಟ ಸ್ವದೇಶಾಭಿಮಾನಪೂರ್ವಕ ಶಬ್ದಜಾಲ ಮತ್ತು ಯೆಹೂದ್ಯ ವೈರಿಗಳು ತಮ್ಮ ಕುಟಿಲೋದ್ದೇಶಗಳ ಪೂರೈಕೆಗೆಂದೇ ಉಪಜ್ಞಿಸಿದ (invent) ''ಆರ್ಯ'' ಅಥವಾ ''ನಾರ್ಡಿಕ'' ಜನಾಂಗದ ಆರೋಪಿತ ಶ್ರೇಷ್ಠತ್ವದ ಬಗೆಗಿನ ಕಟ್ಟು ಕತೆ – ಇವನ್ನು ಹಿಟ್ಲರ್ ಜನರ ಮುಂದೆ ಯಶಸ್ವಿಯಾಗಿ ಬಿತ್ತರಿಸಿದ. ಅವನು ಎಡೆಬಿಡದೆ ಗಳಹುತ್ತಿದ್ದ ಈ ಬೊಂತೆಯನ್ನು ಖುದ್ದು ಅವನೇ ಎಷ್ಟರಮಟ್ಟಿಗೆ ನಂಬಿರಬಹುದೆಂಬುದನ್ನು ಅರಿಯುವುದು ಅವನ ಎಡ್ಡತಿಡ್ಡ ವ್ಯಕ್ತಿತ್ವದ ಕಾರಣ ಅಸಾಧ್ಯವೇ ಸೈ. ಆದರೆ ಒಂದಂತೂ ಖರೆ. ಅವನ ಸುತ್ತಮುತ್ತ ಜಮಾಯಿಸಿಕೊಂಡಿದ್ದವರ ಪೈಕಿ ಅಥವಾ ನಾಟ್ಸೀ ಅಲೆಯ ಪರಿಣಾಮವಾಗಿ ಮೇಲಕ್ಕೇರಿದವರ ಪೈಕಿ, ಹೆಚ್ಚಿನವರು ತಮ್ಮ ಅನೈತಿಕ ವಿಧಾನಗಳ ಅಸತ್ಯವನ್ನು ಪೂರ್ಣವಾಗಿ ಅರಿತಿದ್ದ ಕಠಿಣ ಮನಸ್ಕ ಶೂನ್ಯ ವಾದಿಗಳಾಗಿದ್ದರು.

* * *

ವರ್ತಮಾನ ಭಾರತದ ಪರಿಸ್ಥಿತಿಗೆ ಐನ್‌ಸ್ಟೈನ್ - ವಿಶ್ಲೇಷಣೆ ಎಷ್ಟು ಮರುಕಹೀನವಾಗಿ ಹೊಂದುತ್ತವೆ ಎನ್ನುವುದಕ್ಕೆ ಅಧಿಕ ವ್ಯಾಖ್ಯಾನ ಅನಗತ್ಯ ಅಲ್ಲವೇ ?

ಜಿ. ಟಿ. ನಾರಾಯಣರಾವ್
[illegible]



ಆಗ್ರಾ ಶೃಂಗಸಭೆಗೆ ಇದೂ ಕಾರಣವಿರಬಹುದೇ ಎಂದು ಕೆನಡಾದ ಒಂದು ಪತ್ರಿಕೆ ಅಚ್ಚರಿ ವ್ಯಕ್ತಪಡಿಸಿದೆಯಂತೆ !

# ಲಿಪಿ ಪ್ರವೀಣ ಹಾರೋಗೇರಿಯ ಸಿದ್ದಪ್ಪ



ಶಾಲೆಯ ಕಟ್ಟೆಯನ್ನೂ ಸಹ ಹತ್ತದ ಅರಹುಚ್ಚನಂತಿರುವ ೩೫ ವರ್ಷದ ಸಿದ್ದಪ್ಪ ಸಣ್ಣಪ್ಪ ಮುಡಿಯಮ್ಮನವರ ಎಂಬಾತ ಹದಿನಾಲ್ಕು ಭಾಷೆಗಳ ಪ್ರವೀಣನೆಂಬುದು ಅಚ್ಚರಿ ಎನಿಸಿದರೂ ಸತ್ಯ. ಆದರೆ ಇಷ್ಟು ಭಾಷೆಗಳಲ್ಲಿ ಬರೆಯಬಲ್ಲನೆ ಹೊರತು ಓದಲಾರ. ಏಕೆಂದರೆ ಈತ ಮೂಗ. ಮನೋವಿಜ್ಞಾನಿಗಳಿಗೆ ಈತನೊಬ್ಬ ಒಂದು ಸವಾಲು.

ಮಗನಾದರೂ ಓದಲೆಂಬ ಮಹತ್ವಾಕಾಂಕ್ಷೆಯಿಂದ ನಿರಕ್ಷರಿ ತಂದೆತಾಯಿ ಸಿದ್ದಪ್ಪನನ್ನು ಶಾಲೆಗೆ ಸೇರಿಸಲು ಹೆಣಗಾಡಿದರೂ ಸಾಧ್ಯವಾಗಲಿಲ್ಲವಂತೆ. ಅಂದಿನಿಂದಲೆ ಈತನು ತಿಪ್ಪೆ ಅಲೆಯುವುದು ಆರಂಭವಾದದ್ದು. ಬೆಳಗಾಯಿತೆಂದರೆ ಸಿದ್ದಪ್ಪ ತಿಪ್ಪೆಯಲ್ಲಿ ಅಲೆಯುತ್ತಿರುತ್ತಾನೆ, ಸಿಕ್ಕ ಪೇಪರ್ ತುಂಡುಗಳನ್ನು ಎತ್ತಿಕೊಂಡು ಓದುತ್ತಾನೆ. ಗುನುಗುನು ಮಾಡುತ್ತಾನೆ. ಒಮ್ಮೊಮ್ಮೆ ನಗುತ್ತಾನೆ. ಒಂದರ್ಥದಲ್ಲಿ ಸಿದ್ದಪ್ಪ ತಿಪ್ಪೆಯನ್ನೇ ತನ್ನ ಬಹುದೊಡ್ಡ ಗ್ರಂಥಾಲಯವಾಗಿಸಿಕೊಂಡಿದ್ದಾನೆ. ಎಂದಾದರೂ ಯಾವುದೇ ಪತ್ರಿಕೆ ಓದಲು ಸಿಗದಿದ್ದರೆ ಸಿದ್ದಪ್ಪ ತುಂಬಾ ಜಗಳಗಂಟನಾಗಿಬಿಡುತ್ತಾನೆ. ಕೋಪ ನೆತ್ತಿಗೇರಿಸಿಕೊಂಡು ರೋದಿಸುತ್ತಾನೆ. ಒಂದು ತರಹದ ಧ್ವನಿ ತೆಗೆದು ಕೂಗಾಡುತ್ತಾನೆ. ಇಂತಹ ಸಂದರ್ಭದಲ್ಲಿ ಈತನ ಮನೋಬಲ ಅರಿತವರು ಎಂಥದೋ ಪತ್ರಿಕೆ ಕೊಟ್ಟು ಸಿಟ್ಟು ಶಮನಮಾಡಿ ಸಮಾಧಾನದ ಉಸಿರು ಬಿಡುತ್ತಾರೆ.




ಇಂತಹ ಸ್ಥಿತಿಯಲ್ಲಿರುವ ಸಿದ್ದಪ್ಪನಿಗೆ ಯಾವುದೇ ಭಾಷೆಯಲ್ಲಿ ಒಂದು ಶಬ್ದ ಅಥವಾ ವಾಕ್ಯ ಬರೆದುಕೊಟ್ಟರೆ ೧೪ ಭಾಷೆಗಳಲ್ಲಿ ಭಟ್ಟಿ ಇಳಿಸಿದ ಮೇಲೆಯೇ ಕತ್ತು ಮೇಲೆತ್ತುತ್ತಾನೆ. ಅಲ್ಲಿಯವರೆಗೆ ಅವಧಾನದಿಂದ ವಿಚಲಿತನಾಗಲಾರ. ವಿಶೇಷವೆಂದರೆ ಎಡಗೈಯಿಂದ ಎಲ್ಲಾ ಭಾಷೆಗಳನ್ನೂ ಎಡಗಡೆಯಿಂದ ಉರ್ದು ಸ್ಟೈಲಿನಂತೆ ಬರೆಯುತ್ತಾನೆ. ಬರವಣಿಗೆ ವೇಗ ಮಾತ್ರ ತುಂಬಾ ತೀವ್ರವಾಗಿರುತ್ತದೆ. ಆದರೆ ಯಾವುದೇ ಸಂದರ್ಭದಲ್ಲೂ ಆತ ಪ್ರತಿಕ್ರಿಯಿಸಲಾರ. ''ಇಷ್ಟು ಭಾಷೆಗಳನ್ನು ಹೇಗೆ ಕಲಿತೆ'' ಎಂದು ಬರೆದರೆ ಓದುವ ಆತ ಪ್ರತಿಕ್ರಿಯೆಯ ಶಕ್ತಿಯಿಲ್ಲದೆ ಅದನ್ನೇ ೧೪ ಭಾಷೆಗಳಲ್ಲಿ ಬರೆದು ಮುಗಿಸಿಬಿಡುತ್ತಾನೆ. ಅವನು ಬರೆಯುವುದರಲ್ಲಿ ಮೂರು ಯಾವ ಭಾಷೆ ಎಂದು ಗುರುತಿಸಲಾಗಿಲ್ಲ.

ಗದಗ ಜಿಲ್ಲೆಯ ಕಪ್ಪತ್ತಗುಡ್ಡದ ತಪ್ಪಲಲ್ಲಿರುವ ಮುಂಡರಗಿ ತಾಲೂಕಿನ ಹಾರೋಗೇರಿ ಈತನ ಊರು. ಗ್ರಾಮದಲ್ಲಿ ಸಂಚರಿಸುವಾಗ ಚಿಕ್ಕಮಕ್ಕಳು ಹಾಸ್ಯಕ್ಕಾಗಿ ಕೈ ಮುಂದೆ ಮಾಡಿದರೆ ಮಂತ್ರವಾದಿಯಂತೆ ಊದಿ ಮುಂದೆ ಸಾಗುತ್ತಾನೆ.

ತಮ್ಮನ ಇಂತಹ ಸ್ಥಿತಿ ಅರಿತ ಅಕ್ಕ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿ ಸಂಸಾರಕ್ಕೆ ಹಚ್ಚಿದಳು. ಸಿದ್ದಪ್ಪನಿಗೆ ಹೆಂಡತಿ ಎಂದರೆ ತುಂಬಾ ಪ್ರೀತಿಯಂತೆ. ಆರು ವರ್ಷದ ಆತನ ಮಗಳು ಸಿದ್ದವ್ವ ಈಗ ಶಾಲೆ ಕಟ್ಟೆ ಹತ್ತಿ ಅವರ ಕುಟುಂಬದಲ್ಲಿಯೇ ದಾಖಲೆ ಸ್ಥಾಪಿಸಿದ್ದಾಳೆ. ಯಾರೂ ಶಾಲೆ ಕಲಿಯಲಿಲ್ಲವೆಂಬ ಆ ಕುಟುಂಬದ ನೋವಿಗೆ ಇದು ಶಾಂತಿ ಹಾಗೂ ಆನಂದ ತಂದಿದೆ.

**ಶಾಂತಕುಮಾರ ಪೂಜಾರ**
ಪತ್ರಕರ್ತರು, ಮುಂಡರಗಿ

ಅಮೆರಿಕಾದಿಂದ ಪತ್ರ

# ಭಯೋತ್ಪಾದಕರ ದಾಳಿಯಿಂದ ತತ್ತರಿಸಿದ ಅಮೆರಿಕ



ಅಮೆರಿಕದ ನಾಗರಿಕರಿಗೆ ಸೆಪ್ಟೆಂಬರ್ ೧೧ ಮಂಗಳವಾರ ಕರಾಳ ದಿನ. ಅಂದು ಬೆಳಗ್ಗೆ ಭಯೋತ್ಪಾದಕರ ಹಠಾತ್ ದಾಳಿಯಿಂದ ಇಡೀ ದೇಶ ತಲ್ಲಣಿಸಿತು. ಪರ್ಲ್ ಹಾರ್ಬರ್ ಮೇಲೆ ಜಪಾನೀಯರು ನಡೆಸಿದ್ದ ದಾಳಿಯನ್ನು ಬಿಟ್ಟರೆ ಬೇರಾವುದೇ ದಾಳಿಯನ್ನು ಅನುಭವಿಸದಿದ್ದ ಅಮೆರಿಕ ಅಂದು ಬಹು ದೊಡ್ಡ ಅನಾಹುತವನ್ನು ಕಂಡಿತು. ದೇಶದ ಹಣಕಾಸಿನ ವ್ಯವಹಾರಗಳ ಕೇಂದ್ರ, ನ್ಯೂಯಾರ್ಕ್‌ನಲ್ಲಿರುವ ಅತಿ ಎತ್ತರದ (೧೩೬೦ ಅಡಿ ಎತ್ತರ, ೧೧೦ ಮಹಡಿಗಳು) ಕಟ್ಟಡವೆನಿಸಿದ್ದ ಜಾಗತಿಕ ವಾಣಿಜ್ಯ ಕೇಂದ್ರ ಹಾಗೂ ಅತ್ಯಂತ ಸುರಕ್ಷಿತ ಭದ್ರಕೋಟೆಯಾದ ಅಮೆರಿಕಾದ ರಕ್ಷಣಾ ವಿಭಾಗದ ಕಚೇರಿ ಪೆಂಟಗಾನ್ ಮೇಲೆ ಭಯೋತ್ಪಾದಕರು ಅಮೆರಿಕಾದ ಪ್ರಯಾಣಿಕ ವಿಮಾನವನ್ನು ಬಳಸಿ ನಡೆಸಿದ ದಾಳಿ ಬರಸಿಡಿಲಿನಂತೆ ಎರಗಿಬಂತು. ಕಟ್ಟಡಗಳಿಗೆ ಅಪ್ಪಳಿಸಿದ ವಿಮಾನಗಳಿಂದ ಭುಗಿಲೆದ್ದ ಜ್ವಾಲೆ ಇಡೀ ದೇಶವನ್ನೇ ಭಯದಿಂದ ನಡುಗಿಸಿತು. ವಿಮಾನಾಪಹರಣಕಾರರು ನಾಲ್ಕು ವಿಮಾನಗಳನ್ನು ಏಕಕಾಲಕ್ಕೆ ಅಪಹರಿಸಿ ಕೆಲವೇ ನಿಮಿಷಗಳ ಅಂತರದಲ್ಲಿ ನಡೆಸಿದ ಕೃತ್ಯ ಅಮೆರಿಕಾದ ಸರಕಾರವನ್ನು, ನಾಗರಿಕರನ್ನು ದಿಗ್ಭ್ರಮೆಗೊಳಿಸಿತಷ್ಟೇ ಅಲ್ಲದೆ ಭಯಭೀತರನ್ನಾಗಿಸಿತು. ಮಹಾಶಕ್ತ ರಾಷ್ಟ್ರವೆನಿಸಿರುವ ಅಮೆರಿಕ ಅತ್ಯಂತ ಸುರಕ್ಷಿತ, ಅದರ ಮೇಲೆ ದಾಳಿ ನಡೆಸುವ ಎದೆಗಾರಿಕೆ ಯಾರಿಗೂ ಇಲ್ಲ ಎಂದುಕೊಂಡಿದ್ದ ಅಮೆರಿಕನ್ನರ ನಂಬಿಕೆ ಈಗ ಹುಸಿಯಾಗಿದೆ. ನಾಲ್ಕನೇ ವಿಮಾನ ಅಮೆರಿಕದ ಶ್ವೇತಭವನಕ್ಕೆ ಅಪ್ಪಳಿಸಲು ನಿಗದಿಯಾಗಿದ್ದುದು ತಪ್ಪಿತು. ವ್ಯವಸ್ಥಿತ ರೀತಿಯಲ್ಲಿ ಯೋಜಿಸಿ ಭಯೋತ್ಪಾದಕರು ನಡೆಸಿದ ದಾಳಿ ಅಮೆರಿಕದ ಕುಖ್ಯಾತ ಸಿ.ಐ.ಎ. ಹಾಗೂ ಎಫ್.ಬಿ.ಐ.ಗಳ ದಕ್ಷತೆಯನ್ನು ಪೊಳ್ಳಾಗಿಸಿತು. ಈ ಘಟನೆಯಿಂದ ಚೇತರಿಸಿಕೊಳ್ಳಲು ಅಮೆರಿಕದ ಜನಕ್ಕೆ ಸಾಕಷ್ಟು ಕಾಲ ಬೇಕಾದೀತು.

ದಾಳಿ ನಡೆದು ಕಟ್ಟಡಗಳು ಬೆಂಕಿ ಹತ್ತಿ ಜ್ವಲಿಸುತ್ತಿರುವ ದೃಶ್ಯಗಳು ಪ್ರಸಾರ ಮಾಧ್ಯಮಗಳಲ್ಲಿ ಅಮೆರಿಕದ ಮೇಲೆ ದಾಳಿ ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಗೊಳ್ಳುತ್ತಿದ್ದಂತೆಯೇ ಇಡೀ ದೇಶದಲ್ಲಿ ಭಯದ ವಾತಾವರಣ ಉಂಟಾಯಿತು. ಘಟನೆ ನಡೆದ ನಂತರ ಇಡೀ ದೇಶವೇ ಒಂದು ರೀತಿಯಲ್ಲಿ ಸ್ತಬ್ಧಗೊಂಡಿತು. ಶಾಲಾ ಕಾಲೇಜುಗಳು ಮುಚ್ಚಿದುವಲ್ಲದೆ ಸರಕಾರಿ ಕಚೇರಿಗಳು, ವಾಣಿಜ್ಯ ಸಂಸ್ಥೆಗಳು, ಕಾರ್ಖಾನೆಗಳು ಮುಚ್ಚಿದುವು. ಮನೆಗಳಿಗೆ ಧಾವಿಸಿ ಬಂದ ಅಮೆರಿಕನ್ನರು ತಮ್ಮ ಟಿವಿಗಳಿಗೆ ಅಂಟಿ ಕುಳಿತಿದ್ದರು. ದಾಳಿಗೀಡಾದ ನಗರಗಳಿಂದ ನೂರಾರು ಮೈಲಿಗಳ ದೂರದಲ್ಲಿರುವ ಡೆಟ್ರಾಯಿಟ್‌ನ ಪ್ರಮುಖ ವಾಹನ ತಯಾರಿಕಾ ಕಾರ್ಖಾನೆಗಳಾದ ಫೋರ್ಡ್, ಕ್ರೈಸ್ಲರ್ ಮತ್ತು ಜನರಲ್ ಮೋಟಾರ್ಸ್ ಸಂಸ್ಥೆಗಳು ತಮ್ಮ ಕಾರ್ಖಾನೆಗಳನ್ನು ಮುಚ್ಚಿದುವು. ಅಮೆರಿಕಾದ ಇತಿಹಾಸದಲ್ಲಿ ಎಂದೂ ವಿಮಾನಗಳ ಹಾರಾಟ ನಿಲ್ಲದಿದ್ದುದು ಮೂರು ದಿನ ಸ್ತಬ್ಧ. ಪ್ರತಿದಿನ ಸುಮಾರು ೪೦೦೦ ವಿಮಾನಗಳು ಹಾರಾಡುವ ಈ ದೇಶದಲ್ಲಿ ಲಕ್ಷಗಟ್ಟಳೆ ಪ್ರಯಾಣಿಕರು ವಿಮಾನ ನಿಲ್ದಾಣಗಳಲ್ಲೇ ಕೊಳೆಯಬೇಕಾಯಿತು. ಒಂದು ವಾರ ಕಳೆದರೂ ವಿಮಾನಯಾನ ಸಹಜ ಸ್ಥಿತಿಗೆ ಮರಳಲಿಲ್ಲ. ಹಾಗೆಯೇ ಅಮೆರಿಕಾದ ಎಲ್ಲ ಹಣಕಾಸಿನ ವ್ಯವಹಾರಗಳೂ ಸ್ಥಗಿತಗೊಂಡವು. ಘಟನೆ ಸಂಭವಿಸಿದ ದಿನ ಮುಚ್ಚಿದ ನ್ಯೂಯಾರ್ಕ್ ಸ್ಟಾಕ್ ಎಕ್ಸ್‌ಚೇಂಜ್ ಮತ್ತೆ ತೆರೆದದ್ದು ಒಂದು ವಾರದ ಮೇಲೆ. ಷೇರುಗಳ ಬೆಲೆ ತೀವ್ರವಾಗಿ ಕುಸಿದಿದೆ. ಅಮೆರಿಕದ ಫುಟ್‌ಬಾಲ್, ಬೇಸ್‌ಬಾಲ್ ಮೊದಲಾದ ಕ್ರೀಡಾ ಪಂದ್ಯಗಳು ರದ್ದಾಗಿದ್ದು ಪುನರಾರಂಭವಾದದ್ದು ಒಂದು ವಾರದ ನಂತರವೇ.

ಘಟನೆ ಜರುಗಿದ ದಿನ ಬಹುತೇಕ ಜನ ಭಯ ಆತಂಕಗಳಿಂದ ಮನೆಗಳಲ್ಲೇ ಇದ್ದರು. ರಸ್ತೆಗಳಲ್ಲಿ ಸಂಚಾರವೇ ಇಲ್ಲದೆ ಬರಿದಾಗಿತ್ತು. ಘಟನೆ ನಡೆದ ಕೆಲವೇ ಘಂಟೆಗಳಲ್ಲಿ ಪೆಟ್ರೋಲಿನ ಬೆಲೆ ಏಕಾಏಕಿಯಾಗಿ ಮೇಲಕ್ಕೇರಿತು. ಅದು ಮತ್ತೆ ಯಥಾಸ್ಥಿತಿಗೆ ಬಂದದ್ದು ಎರಡು ದಿನಗಳ ಮೇಲೆ. ಒಂದು ವಾರದ ನಂತರ ಸಹ ಇನ್ನೂ ಪರಿಸ್ಥಿತಿ ಸಹಜತೆಗೆ ಬಂದಿರಲಿಲ್ಲ.



ಜನರಲ್ಲಿ ಭಯ ಆವರಿಸಿದೆ. ವಿಪತ್ತಿನ ಪರಿಸ್ಥಿತಿಯಲ್ಲಿ ಎಲ್ಲೆಡೆಗಳಲ್ಲಿನಂತೆಯೇ ಇಲ್ಲಿನ ಜನರೂ ಸಂತ್ರಸ್ತರ ನೆರವಿಗೆ ಮುಂದಾಗಿದ್ದಾರೆ. ರಕ್ತದಾನ, ಬಟ್ಟೆ ಬರೆ, ಆಹಾರ ಪದಾರ್ಥಗಳು ಮತ್ತು ಹಣ ಸಂಗ್ರಹಣೆ ವ್ಯಾಪಕವಾಗಿ ನಡೆದಿದೆ. ಈ ಪ್ರಕರಣದ ನಂತರ ಅಮೆರಿಕನ್ನರಲ್ಲಿ ನಾವು ಸುರಕ್ಷಿತರು ಎಂಬ ಭಾವನೆ ಹೋಗಿ ತಮ್ಮ ಮೇಲೆ ಎರಗಬಲ್ಲವರೂ ಇದ್ದಾರೆ ಎಂಬುದು ಮನವರಿಕೆಯಾಗಿದೆ.

ಈ ಘಟನೆ ಅಮೆರಿಕನ್ನರಿಗೆ ಎರಡನೆ ಮಹಾಯುದ್ಧದ ಕಾಲದಲ್ಲಿ ಪರ್ಲ್ ಹಾರ್ಬರ್‌ನ ಮೇಲೆ ಜಪಾನೀಯರು ನಡೆಸಿದ ದಾಳಿಯನ್ನು ನೆನಪಿಗೆ ತಂದಿದೆ. ಅದಕ್ಕೆ ಹೋಲಿಸಿದರೆ ಈಗ ಸಾವಿಗೀಡಾದವರ ಸಂಖ್ಯೆ ಎರಡುಪಟ್ಟಿಗೂ ಅಧಿಕ. ಅಧಿಕೃತ ವಲಯಗಳ ಪ್ರಕಾರ ಸತ್ತವರ ಸಂಖ್ಯೆ ೫೦೦೦ಕ್ಕೂ ಹೆಚ್ಚು, ಗಾಯಗೊಂಡವರು ೪೦೦೦ಕ್ಕೂ ಅಧಿಕ. ಇದಲ್ಲದೆ ನಾಪತ್ತೆಯಾಗಿರುವವರ ಸಂಖ್ಯೆ ೫೦೦೦. ೧೯೯೩ರಲ್ಲಿ ಈ ಮೊದಲು ಇದೇ ಜಾಗತಿಕ ವಾಣಿಜ್ಯ ಕೇಂದ್ರದಲ್ಲಿ ಬಾಂಬ್ ಸ್ಫೋಟನೆ ಆಗಿತ್ತು. ೧೯೯೫ರಲ್ಲಿ ಒಕ್ಲಾಹಾಮಾದಲ್ಲಿ ಜರುಗಿದ ಬಾಂಬ್ ಸ್ಫೋಟದಲ್ಲಿ ೧೬೮ ಜನ ಸಾವಿಗೀಡಾಗಿದ್ದರು. ಕೆಲವೇ ವಾರಗಳ ಹಿಂದೆ ಈ ಬಾಂಬ್ ದಾಳಿಯ ಅಪಾದಿತನಿಗೆ ಮರಣ ದಂಡನೆಯಾಗಿತ್ತು. ಹಾಗಿದ್ದರೂ ಸರಕಾರ ಭದ್ರತೆಗೆ ಏಕೆ ಸಮರ್ಪಕವಾದ ಕ್ರಮ ತೆಗೆದುಕೊಳ್ಳಲಿಲ್ಲ ಎಂದು ಜನ ಕೇಳತೊಡಗಿದ್ದಾರೆ.

ಮಂಗಳವಾರದ ಘಟನೆಯ ನಂತರ ಸರಕಾರ ಹಲವು ಬಿಗಿ ಕ್ರಮಗಳನ್ನು ತೆಗೆದುಕೊಂಡಿದೆ. ಇವು ಜನರಲ್ಲಿ ಕಿರಿಕಿರಿ ಉಂಟುಮಾಡಿದ್ದರೂ ಭದ್ರತೆಯ ದೃಷ್ಟಿಯಿಂದ ಜನ ಸಹಿಸಿಕೊಳ್ಳಬೇಕಾಗಿ ಬಂದಿದೆ. ಎಲ್ಲ ಕಡೆ ಗಂಟೆಗಟ್ಟಲೆ ಸಾಲಿನಲ್ಲಿ ನಿಲ್ಲುವುದು ಅನಿವಾರ್ಯವಾಗಿದೆ. ಸಾಧಾರಣ ಅಮೆರಿಕನ್ನರಿಗೆ ಹೀಗೇಕಾಯಿತು ಎಂಬ ಬಗ್ಗೆ ಜಿಜ್ಞಾಸೆ. ದೇಶದ ವಿದೇಶಾಂಗ ನೀತಿಯ ಬಗ್ಗೆ ಹೆಚ್ಚಿನ ಜನರಿಗೆ ಆಸಕ್ತಿಯಿಲ್ಲ. ತಮ್ಮ ದೇಶ

ಸೀಯಾರ್ಕೆ

ಅನುಸರಿಸುತ್ತಿರುವ ನೀತಿಗಳಿಂದಾಗಿ ಅಮೆರಿಕದ ಬಗ್ಗೆ ಅನೇಕ ದೇಶಗಳಲ್ಲಿನ ಜನರಲ್ಲಿ ದ್ವೇಷಭಾವನೆ ಬೆಳೆದಿದೆ ಎಂಬ ಅರಿವು ಅಮೆರಿಕದ ನಾಗರಿಕರಿಗೆ ಮನವರಿಕೆಯಾಗಿಲ್ಲ. ಆದರಿಂದಲೇ ಪ್ರತೀಕಾರಕ್ಕಾಗಿ ಸರಕಾರದ ಯಾವುದೇ ಕ್ರಮಗಳಿಗೆ ಬೆಂಬಲ ಇದೆ. ಅಲ್ಲಲ್ಲಿ ಜನ ಆಕ್ರೋಶದಿಂದ ಅರಬ್ ಮತ್ತು ಪಾಕಿಸ್ತಾನೀಯರ ಮೇಲೆ ಹಲ್ಲೆ ನಡೆಸಿದ್ದಾರೆ. ಕೆಲವು ಭಾರತೀಯರ ಮೇಲೂ ಹಲ್ಲೆ ನಡೆದಿರುವುದು ವರದಿಯಾಗಿದೆ. ಈ ಘಟನೆಯಾದ ಮೇಲೆ ಅಮೆರಿಕನ್ನರು ದೀರ್ಘಕಾಲ ಭಯದ ವಾತಾವರಣದಲ್ಲೆ ಜೀವಿಸಬೇಕಾದ ಪರಿಸ್ಥಿತಿ ಉಂಟಾಗಿದೆ.

ಬುಷ್ ಸರಕಾರ ವಿಮಾನಾಪಹರಣದಲ್ಲಿ ತೊಡಗಿದ್ದವರು ಆಫ್ಘಾನಿಸ್ತಾನದಲ್ಲಿರುವ ಒಸಾಮಾ ಬಿನ್ ಲಾಡೆನ್ ಅನುಯಾಯಿಗಳೆಂದು ಗುರುತಿಸಿದೆ. ಅವರೆಲ್ಲಾ ಅಮೆರಿಕದಲ್ಲಿ ವಿಮಾನ ಚಾಲಕರಾಗಿ ತರಬೇತಿ ಪಡೆದರೆಂದು ಹೇಳಲಾಗಿದೆ. ಅಮೆರಿಕದ ವಕ್ತಾರರುಗಳು ಅಧ್ಯಕ್ಷ ಬುಷ್ ಭಯೋತ್ಪಾದಕರಿಗೆ ಆಶ್ರಯ ನೀಡಿರುವ ದೇಶಗಳ ಮೇಲೆ ಉಗ್ರ ಕ್ರಮ ತೆಗೆದುಕೊಳ್ಳುವ ಬಗ್ಗೆ ಅಬ್ಬರಿಸಿದರೂ ಆತುರಪಟ್ಟಿಲ್ಲ, ಹಿಂದೆಲ್ಲಾ ಮಾಡಿದ್ದಂತೆ. ಒಕ್ಲಾಹಾಮ ಬಾಂಬ್ ಘಟನೆ ನಂತರ ಒಡನೆಯೇ ಆಪ್ಘಾನಿಸ್ತಾನದ ಮೇಲೆ ಕ್ಷಿಪಣಿ ದಾಳಿ ನಡೆಸಿದ್ದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಆದರೆ ಈ ಸಲ ಅಮೆರಿಕ ದಿಢೀರ್ ಕ್ರಮ ತೆಗೆದುಕೊಳ್ಳಲು ಹಿಂಜರಿಯುತ್ತಿರುವುದು ಎದ್ದುಕಾಣುತ್ತಿದೆ. ಹಾಗೇನಾದರೂ ಕ್ರಮ ತೆಗೆದುಕೊಂಡಲ್ಲಿ ಇಡೀ ಮುಸ್ಲಿಂ ರಾಷ್ಟ್ರಗಳ ಆಕ್ರೋಶ ಎದುರಿಸಬೇಕಾದೀತೆಂಬ ಭಯವಿದೆ. ಆದರಿಂದಲೇ ಸರಕಾರ ಯಾವುದೇ ಕ್ರಮ ತೆಗೆದುಕೊಳ್ಳುವ ಮುನ್ನ ಎಚ್ಚರ ವಹಿಸಬೇಕಾಗಿ ಬಂದಿದೆ.

ವಿದೇಶಗಳಲ್ಲಿ ಅಮೆರಿಕನ್ ರಾಯಭಾರಿ ಕಚೇರಿಗಳು ಮತ್ತು ಸೈನಿಕ ನೆಲೆಗಳ ಮೇಲೆ ಆಗಾಗ ನಡೆದಿರುವ ದಾಳಿ ಬಿಟ್ಟರೆ, ದೊಡ್ಡ ಪ್ರಮಾಣದಲ್ಲಿ ಅಮೆರಿಕದ ನೆಲದ ಮೇಲೆ ದಾಳಿ ನಡೆದಿರುವುದು ಇದೇ ಮೊದಲ ಸಲ. ಟೀವಿ ಮತ್ತು ಪತ್ರಿಕೆಗಳಲ್ಲಿ ನಡೆದಿರುವ ಚರ್ಚೆಯಲ್ಲಿ ಬಹುತೇಕ ಸರಕಾರಕ್ಕೆ ಬೆಂಬಲವಿದ್ದರೂ ಈ ಪರಿಸ್ಥಿತಿಗೆ ಸರಕಾರದ ನೀತಿಗಳೇ ಕಾರಣ ಎಂಬ ಟೀಕೆಗಳೂ ಇವೆ. ಬಿನ್ ಲಾಡೆನ್‌ನಂತಹ ಭಯೋತ್ಪಾದಕರನ್ನು ಸೃಷ್ಟಿಸಿದ್ದು ಅಮೆರಿಕ ಸರಕಾರವೇ ಎನ್ನುವುದನ್ನು ಹಲವು ಜನ ಒತ್ತಿ ಹೇಳಿದ್ದಾರೆ. ಆಫ್ಘಾನಿಸ್ತಾನದಲ್ಲಿ ಸೋವಿಯೆತ್ ಸೇನೆಯನ್ನು ಎದುರಿಸಲು ಅಮೆರಿಕ ಬಿನ್ ಲಾಡೆನ್ ನೆರವನ್ನು ಪಡೆದುಕೊಂಡಿದ್ದುದನ್ನು ಹಲವು ವಿಶ್ಲೇಷಕರು ಗಮನಕ್ಕೆ ತಂದಿದ್ದಾರೆ. ಪೂರ್ವ ಆಫ್ರಿಕಾದ ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಹಾಗೂ ಇತರ ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಭ್ರಷ್ಟ ಸರಕಾರಗಳಿಗೆ ಅಮೆರಿಕ ನೀಡುತ್ತಿರುವ ಬೆಂಬಲವೇ ಅಲ್ಲಿನ ಜನರನ್ನು ಎದುರು ಹಾಕಿಕೊಳ್ಳಲು ಕಾರಣ. ಇಸ್ಲಾಂ ತೀವ್ರವಾದಿಗಳು ಇದನ್ನು ಉಪಯೋಗಿಸಿಕೊಂಡು ದುಷ್ಕೃತ್ಯಗಳಲ್ಲಿ ತೊಡಗುತ್ತಿದ್ದಾರೆ. ಇನ್ನು ಮುಂದೆ ಅಮೆರಿಕ ಭಯೋತ್ಪಾದಕರ ಹಾವಳಿಯ ನೆರಳಿನಲ್ಲೆ ಇರುವುದು ಅನಿವಾರ್ಯ ಎಂದು ಅಮೆರಿಕನ್ನರನ್ನು ಪತ್ರಿಕೆಗಳು ಎಚ್ಚರಿಸಿವೆ. ಈ ಘಟನೆಯ ನಂತರ ಅಮೆರಿಕನ್ನರು ಹೆಚ್ಚು ನಿರ್ಬಂಧಗಳನ್ನು ಸಹಿಸಬೇಕಾಗಿದೆ. ಬಿಗಿ ಕ್ರಮಗಳು ಐವತ್ತರ ದಶಕದ ಮೆಕಾರ್ಥಿ ದಿನಗಳಂತಾಗುವ ಸೂಚನೆಗಳನ್ನು ತಳ್ಳಿಹಾಕುವ ಹಾಗಿಲ್ಲ. ಇದುವರೆಗೆ ಅಮೆರಿಕ ಸರಕಾರ ಇತರ ದೇಶಗಳ ಮೇಲೆ ಸಿಐಎ ಮೂಲಕ ನಡೆಸುತ್ತಿದ್ದ ಭಯೋತ್ಪಾದಕ ಕೃತ್ಯಗಳು ಈಗ ಅದಕ್ಕೆ ತಿರುಗೇಟಾಗಿವೆ. ಇದು ಅಮೆರಿಕನ್ನರಿಗೆ ಮನದಟ್ಟಾಗಲು ಇನ್ನೂ ಹೆಚ್ಚು ಕಾಲ ಬೇಕು.

ಈ ಮೊದಲೇ ಆರ್ಥಿಕ ಮುಗ್ಗಟ್ಟಿನಲ್ಲಿ ಮುಳುಗಿರುವ ಅಮೆರಿಕ ಈ ಘಟನೆಯಿಂದ ಮತ್ತಷ್ಟು ಮುಗ್ಗರಿಸಲಿದೆ. ಆರ್ಥಿಕ ತಜ್ಞರ ಪ್ರಕಾರ ಆರ್ಥಿಕ ಹಿಂಜರಿತ ಇನ್ನಷ್ಟು ತೀವ್ರಗೊಂಡು ಮುಂದಿನ ವರುಷಕ್ಕೂ ಮುಂದುವರಿಯುವುದು. ಒಂದು ವಾರದಲ್ಲಿ ಅಮೆರಿಕದ ಆರ್ಥಿಕ ವ್ಯವಹಾರಗಳಲ್ಲಿ ಹಲವು ಬಿಲಿಯ ಡಾಲರುಗಳ ನಷ್ಟ ಸಂಭವಿಸಿದೆ. ವಿಮಾನ ಯಾನದಲ್ಲಿ ಉಂಟಾಗಿರುವ ಏರುಪೇರಿನಿಂದಾಗಿಯೂ ವಿಮಾನ ಸಂಸ್ಥೆಗಳು ಒಂದು ಬಿಲಿಯಕ್ಕೂ ಹೆಚ್ಚು ನಷ್ಟ ಅನುಭವಿಸಿವೆ. ಹೆದ್ದಾರಿಗಳಲ್ಲಿ, ಗಡಿಗಳಲ್ಲಿ, ವಿಮಾನ ನಿಲ್ದಾಣಗಳಲ್ಲಿ ಬಂದೋಬಸ್ತು ವ್ಯವಸ್ಥೆ ಬಿಗಿಯಾಗಿರುವುದರಿಂದ ಸಂಚಾರ ಮಂದಗತಿಯಿಂದ ಸಾಗಿದೆ. ಸರಕು ಸಾಗಣೆ ವಿಳಂಬವಾಗುತ್ತಿರುವುದರಿಂದ ಹಲವು ಉದ್ಯಮಗಳು ಕಚ್ಚಾ ಸಾಮಗ್ರಿ ಕೊರತೆಯಿಂದ ಉತ್ಪಾದನೆಯನ್ನು ಸ್ಥಗಿತಗೊಳಿಸಿವೆ. ಒಟ್ಟಿನಲ್ಲಿ ಮಂಗಳವಾರ ಸಂಭವಿಸಿದ ದುರ್ಘಟನೆಯಿಂದ ಅಮೆರಿಕ ಅತಂತ್ರ ಸ್ಥಿತಿಯನ್ನು ತಲುಪಿದೆ. ಬುಷ್ ಸರಕಾರ ಪೇಚಿನಲ್ಲಿ ಸಿಲುಕಿದೆ. ಈ ಘಟನೆಯಿಂದ ಮುಂದೆಯಾದರೂ ಅಮೆರಿಕದ ಆಳುವ ವರ್ಗ ಸರಿಯಾದ ಪಾಠ ಕಲಿತೀತು ಎನ್ನುವುದು ಸಂದೇಹವೇ. ❑❑❑

# ಅಟ್ಟು ಉಣ್ಣದ ವಸ್ತುಗಳಿಲ್ಲ

ಡಾ॥ ಸ. ಜ. ನಾಗಲೋಟಿಮಠ ಅವರ 'ಕೀಟ ಖಾದ್ಯಗಳು – ಶಕ್ತಿಯ ಸಾಗರ' ಎಂಬ ಲೇಖನ ಓದಿದೆ. ಚೀನಾ ದೇಶದ ಆಹಾರ ಪದ್ಧತಿಯನ್ನು ಕುರಿತ ಈ ಬರಹದಲ್ಲಿ ಬಗೆಬಗೆಯ ಕೀಟ ಖಾದ್ಯಗಳನ್ನು ವಿವರಿಸುತ್ತಾ ''ಭಾರತದಲ್ಲಿ ಇಂಥ ಆಹಾರಕ್ಕೆ ಆಸ್ಪದವಿಲ್ಲ.... ನಮ್ಮಲ್ಲಿಯ ಮಾಂಸಾಹಾರಿಗಳಿಗೂ ಕೀಟಾಹಾರ ಆಗುವುದಿಲ್ಲ'' – ಎಂಬ ತೀರ್ಮಾನಕ್ಕೆ ಬರುತ್ತಾರೆ. ''ಬೆಲ್ಲ ತಿನ್ನುವ ಮಕ್ಕಳು ಇರುವೆಗಳನ್ನು ಗೊತ್ತಾಗದಂತೆ ತಿಂದು ಮುಗಿಸಿರುತ್ತಾರೆ. ಇವೆಲ್ಲ ನಮಗೆ ಆಕಸ್ಮಿಕ ಹಾಗೂ ವಿರಳ ಸಂಗತಿಗಳು'' – ಎಂದು ನುಡಿದಿರುವ ಲೇಖಕರು ಕೀಟಾಹಾರವು ಭಾರತೀಯರಿಗೆ ಅಪರಿಚಿತವೆಂಬಂತೆ ಪ್ರತಿಪಾದಿಸಿದ್ದಾರೆ. ಇದು ತಪ್ಪು ತಿಳುವಳಿಕೆ. ಗುಡ್ಡಗಾಡು ಮತ್ತು ಹಳ್ಳಿಗಾಡು ಜನರ ಆಹಾರ ಪದ್ಧತಿಯಲ್ಲಿ ಕೀಟಾಹಾರ ಒಂದು ಅವಿಭಾಜ್ಯ ಅಂಗವಾಗಿದೆ. ಈ ಕುರಿತು ನನ್ನ ಗಮನಕ್ಕೆ ಬಂದ ಕೆಲವು ಸಂಗತಿಗಳನ್ನು ಇಲ್ಲಿ ದಾಖಲಿಸಲಿಚ್ಛಿಸುತ್ತೇನೆ :

೧. ಕುವೆಂಪು ಅವರ 'ಕಾನೂರು ಹೆಗ್ಗಡಿತಿ'ಯಲ್ಲಿ ಬಾಡುಗಳ್ಳ ಸೋಮನು ಒಂದು ಮರವನ್ನೇರಿ ಲಕ್ಷಾಂತರ ಕೆಂಬಣ್ಣದ ಚಗಳಿಯಿರುವೆಗಳೂ ಅದಕ್ಕಿಂತಲೂ ಹೆಚ್ಚಾಗಿ ಬಿಳಿಯ ಕಿರುಮೊಟ್ಟೆಗಳನ್ನು ತಿನ್ನುವುದಕ್ಕೋಸ್ಕರ ಉಪ್ಪು ಹರಡಿದ ಮೊರದಲ್ಲಿ ತುಂಬಿಸಿಕೊಳ್ಳುವ ವಿವರಗಳಿವೆ.
೨. ಜೇನು ಸಂಗ್ರಹಿಸುವಾಗ ಬೆಳ್ಳನೆಯ ಮರಿಹುಳು ಸಹಿತವಾದ ಜೇನಿನ ಹಲ್ಲೆಗಳನ್ನು ರೊಟ್ಟಿಯಂತೆ ಮುರಿದು ತಿಂದು ಮೇಣವನ್ನುಗುಳುವುದು ಅಪ್ಪಟ ಕೀಟ ಖಾದ್ಯವಾಗಿದೆ.
೩. ಅತ್ತಿಯ ಹಣ್ಣನ್ನು ತಿನ್ನಲು ಸಿಗಿದಾಗ ಚೆನ್ನಾಗಿ ರೆಕ್ಕೆ ಬಂದ ಹುಳುಗಳು ಹಾರಿ ಹೋಗುತ್ತವೆಯಾದರೂ ಉಳಿದವು ಹಣ್ಣಿನ ಒಳ ತಿರುಳ ಕೇಸರಗಳ ಮಧ್ಯೆ ಹುದುಗಿಕೊಂಡಿರುತ್ತವೆ. ಇವುಗಳನ್ನು ಹಣ್ಣಿನ ಜೊತೆಯಲ್ಲಿ ತಿನ್ನುವುದು ಕಣ್ಣುಗಳಿಗೆ ಪುಷ್ಟಿದಾಯಕವೆಂಬ ನಂಬಿಕೆ ವ್ಯಾಪಕವಾಗಿದೆ.
೪. ಕೋಳಿ ಪಿಳ್ಳೆಗಳಿಗೆ ಗೆದ್ದಲುಗಳನ್ನು ತಿನ್ನಿಸಲು ಹುತ್ತವನ್ನು ಅಗೆದಾಗ ಸಿಗುವ ರಾಣಿ ಗೆದ್ದಲು ಹುಳುವಿನ ತಲೆ ಚಿವುಟಿ ಬೆರಳುದ್ದದ ಇಡೀ ದೇಹವನ್ನು ಚಪ್ಪರಿಸಿ ತುಪ್ಪವನ್ನು ನುಂಗುವುದು ಕೂಡ ಕೀಟ ಖಾದ್ಯವಾಗಿದೆ. ಇದು ಕೃಶದಾಯಕ ಮಕ್ಕಳಿಗೆ ಬಹು ಅಮೂಲ್ಯವಾದ ನಿಸರ್ಗದ ಟಾನಿಕ್ಕಿನಂತೆ ಈಗಲೂ ಬಳಕೆಯಾಗುತ್ತಿದೆ.
೫. ಇರುಳುಗಣ್ಣಿಗೆ ಅಥವಾ ರಾತ್ರಿಯ ಕುರುಡುತನದ ಪರಿಹಾರಕ್ಕೆ ಮಿಂಚುಹುಳವನ್ನೇ (fire fly) ಇಡಿಯಾಗಿ ಅನ್ನದಲ್ಲಿಟ್ಟು ನುಂಗಿಸುವ ಚಿಕಿತ್ಸಾ ಪದ್ಧತಿಯನ್ನು ನಾನು ಗಿರಿಜನರಲ್ಲಿ ಗಮನಿಸಿದ್ದೇನೆ.
೬. ಮಳೆಗಾಲದಲ್ಲಿ ದೀಪಗಳೆಡೆ ಆಕರ್ಷಿತಗೊಂಡು ನೆಲದಿಂದ ಎದ್ದು ಬರುವ 'ರೆಕ್ಕೆ ಹುಳುಗಳು' ನಂತರ ರೆಕ್ಕೆ ಉದುರಿಸಿಕೊಂಡು ಹರಿದಾಡುತ್ತಿರುತ್ತವೆ. ಇವುಗಳನ್ನು ಸಂಗ್ರಹಿಸಿ ಉಪ್ಪಿನೊಂದಿಗೆ ಹುರಿದು ತಿನ್ನುವ ಅಭ್ಯಾಸ ಹಳ್ಳಿಗಾಡುಗಳಲ್ಲಿದೆ.

ಇದುವರೆಗೆ ಕೀಟ ಖಾದ್ಯಗಳನ್ನು ಮಾತ್ರ ವಿವರಿಸಿದ್ದೇನೆ. ಇದಲ್ಲದೆ 'ಆಹಾರವೈದ್ಯ'ವೆಂಬ ನೆಲೆಯಿಂದ ಬಗೆಬಗೆಯ ಜೀವಿಗಳನ್ನು ಅಟ್ಟು ಉಣ್ಣುವುದು ಸರ್ವ ಸಾಮಾನ್ಯವಾಗಿದೆ. ಇದೆಲ್ಲ ಕಾಂಕ್ರೀಟು ಜಗತ್ತಿನ ನಾಗರಿಕರಿಗೆ ತಿಳಿದಿರಲಾರದು !

ಕೇರೆ ಹಾವು : ಕಾಮಾಲೆ ರೋಗಕ್ಕೆ ರಾಮಬಾಣವೆಂದು ಪ್ರಸಿದ್ಧವಾಗಿದೆ. ಕೇರೆ ಹಾವಿನ ತಲೆ ಮತ್ತು ಬಾಲವನ್ನು ಕಡಿದು ಹಾಕಿ, ಚರ್ಮ ಸುಲಿದು, ನಡುವಣ ದೇಹವನ್ನು ತುಂಡು ಮಾಡಿ ಆಹಾರ ಪದಾರ್ಥದಂತೆ ಬಳಸುತ್ತಾರೆ. ಉಡದ ಮಾಂಸ ಮತ್ತು ಎಣ್ಣೆಯು ಕೀಲು ಮತ್ತು ವಾಯು ನೋವುಗಳಿಗೆ ತುಂಬಾ ಪ್ರಸಿದ್ಧವಾಗಿದೆ.

ಆಮೆಯ ಮಾಂಸಾಹಾರದಿಂದ ಮೊಳೆರೋಗ ಬರುವುದಿಲ್ಲವೆಂಬ ನಂಬಿಕೆಯಿದೆ. ಶಂಖದ ಹುಳುಗಳು (snails) ಮೊಳೆರೋಗವನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುವುದರಿಂದ, ಇವನ್ನು ಕತ್ತರಿಸಿ ಹುರಿದು ತಿನ್ನುವುದುಂಟು. ಏಡಿಕಾಯಿಗಳು ಅಥವಾ ಕಲ್ಲೇಡಿಗಳನ್ನು ಶೀತ ಬಾಧೆಯಿಂದ ಪಾರಾಗಲು ಬಳಸುತ್ತಾರೆ. ಗದ್ದೆಗಳು ಕುಯ್ಲಿಗೆ ಬಂದಾಗ, ಬಿಲಗಳಲ್ಲಿರುವ ಇಲಿಗಳನ್ನು ಗುಂಪಾಗಿ ಹಿಡಿದು ಸುಟ್ಟು ತಿನ್ನುವುದುಂಟು.

'ಕಾಡುಮಾಂಸ'ಕ್ಕೆ ಒಗ್ಗಿ ಹೋಗಿರುವ ಸ್ಥಳೀಯರಾದ ಮೂಲನಿವಾಸಿ ಜನಗಳು ಮೊಲ, ಬರ್ಕ, ಜಿಂಕೆ, ಕಡವೆ, ಕರಡಿ, ಲಾಂಗೂರ್ ಮಂಗ, ಪೆಂಗೊಲಿನ್, ಮುಳ್ಳುಹಂದಿ, ಮುಂಗುಸಿ ಮುಂತಾದ ಜೀವಿಗಳನ್ನು ಆಗಾಗ್ಗೆ ಬೇಟೆಯಾಡಿ ತಿನ್ನುವುದು 'ಮೀಸಲು ಅರಣ್ಯ'ಗಳ ಅಪರಿಹಾರ್ಯ ಸಂಗತಿಯಾಗಿದೆ. ಇದೆಲ್ಲವನ್ನು ಗಮನಿಸಿದರೆ ತೇಜಸ್ವಿ ಅವರು ಹೇಳುವ 'ಶ್ರೀರಾಮ್ ಫಿಲಾಸಫಿ'ಯ ನೆನಪಾಗುತ್ತದೆ. ಎರಡು ಕಾಲುಗಳ ಪೈಕಿ ನರಮನುಷ್ಯ, ನಾಲ್ಕು ಕಾಲುಗಳ ಪೈಕಿ ಮೇಜು-ಕುರ್ಚಿ ಬಿಟ್ಟು ಉಳಿದುದೆಲ್ಲವೂ ತಿನ್ನಲರ್ಹವೆಂಬ ತತ್ವವೇ 'ಶ್ರೀರಾಮ್ ಫಿಲಾಸಫಿ' ಎನಿಸಿಕೊಳ್ಳುತ್ತದೆ. ಇದು ಹಿಂದೆಯೇ ಕನಕದಾಸರು ಹಾಡಿದ ''....ಅಟ್ಟು ಉಣ್ಣದ ವಸ್ತುಗಳಿಲ್ಲ'' – ಎಂಬ ನುಡಿಯ ಅತ್ಯಾಧುನಿಕ ವ್ಯಾಖ್ಯಾನವಾಗಿದೆ.

**ಎ. ಚಂದ್ರಶೇಖರ ನಂಗಲಿ**
೩೨೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

# ಕೋಡು ಮೂಡಿಸಿಕೊಂಡ ಗಾನಕೋಗಿಲೆ ಎಚ್. ಆರ್. ಲೀಲಾವತಿ



ಕವಿಯ ಕಾವ್ಯಭಾವ ರಾಗ ಯಾನದಲಿ ಸಾಗಿ ಶ್ರೀಸಾಮಾನ್ಯನ ಹೃದಯ ಸಾಮ್ರಾಜ್ಯದಲಿ ರಾರಾಜಿಸ ಬೇಕಾದರೆ ಮೋಡಿ ಮಾಡುವ ಸಿರಿ ಕಂಠ ಗಾಯನವೇ ಪ್ರಧಾನವಾಗುತ್ತದೆ. ಕನ್ನಡ ಗೀತೆಗಳನ್ನ ಕೇಳುವವರೇ ಇಲ್ಲದಿದ್ದ ೧೯೪೯ರ ಸುಮಾರಿನಲ್ಲೇ ಗಾಯಕ ಪಿ. ಕಾಳಿಂಗ ರಾಯರಿತ್ತ ರಂಜನೀಯ ಸೊಗಸಿಗೆ ಅಲ್ಲಲ್ಲಿ ಭಾವಗೀತೆಗಳನ್ನು ಹಾಡುತ್ತ ಗಾನಕೋಗಿಲೆಯಾಗಿದ್ದ ಎಚ್. ಆರ್. ಲೀಲಾವತಿ ೧೯೫೦ರಲ್ಲಿ ಸುಗಮ ಸಂಗೀತ ಗಾಯಕಿಯಾಗಿ ಆಕಾಶವಾಣಿಯ ಶ್ರೋತೃಗಳಿಗೆ ಭಾವಗೀತಾ ಜಾಗೃತಿಯನ್ನು ಮೂಡಿಸುವ ಗಾಯಕಿಯಾದರು.

ಆಕಾಶವಾಣಿಯಲ್ಲಿ 'ಪದ್ಮ ಚರಣ್' ಎಂದೇ ಖ್ಯಾತರಾದ ಶ್ರೀ ಎ. ವಿ. ಕೃಷ್ಣಮಾಚಾರ್ಯರಲ್ಲಿ ಹಾಗೂ ಕಲ್ಕತ್ತೆಯ ಜ್ಞಾನ ಪ್ರಕಾಶ ಘೋಷ್ ಮತ್ತು ಗೌಹಾತಿಯ ದೇಬೇನ್ ಶರ್ಮಾ ಅವರಿಂದ ಲಘು ಸಂಗೀತದಲ್ಲಿ ಪರಿಣತಿ ಪಡೆದರು.

ಅರಾಣ ರಾಮಣ್ಣ ಎಂದೇ ಹಾಸನದಲ್ಲಿ ಕೀರ್ತಿವೆತ್ತ ಶ್ರೀ ಹಾಸನ ರಾಮಣ್ಣ ಹಾಗೂ ಕೊಟ್ಟೂರು ಬಸಪ್ಪನವರ ಶಿಷ್ಯೆಯಾದ ಶ್ರೀಮತಿ ಜಯಮ್ಮನವರ ಮಗಳಾದ ಲೀಲಾವತಿ ಆಕಾಶವಾಣಿಯ ಕಲಾವಿದೆಯಾಗಿ ದೇವರನಾಮ, ವಚನಗಾಯನ, ಜಾನಪದ - ಭಾವಗೀತೆ ಹಾಡಿ ಸುಗಮ ಸಂಗೀತಕ್ಕೆ ಹೊಸ ಮಜಲನ್ನೇ ತಂದುಕೊಟ್ಟರು. ದ. ರಾ. ಬೇಂದ್ರೆ, ಗೋಪಾಲಕೃಷ್ಣ ಅಡಿಗ, ಜಿ. ಎಸ್. ಶಿವರುದ್ರಪ್ಪ, ಕೆ. ಎಸ್. ನರಸಿಂಹಸ್ವಾಮಿ, ಕೆ. ಎಸ್. ನಿಸ್ಸಾರ್ ಅಹಮದ್, ಕುವೆಂಪು, ಗೋಕಾಕ್, ಅವರ ಗೀತ ಗಾಯನದಲ್ಲಿ ಹೊಸತನವನ್ನು ಮೂಡಿಸಿಕೊಂಡರು. ಇವರ *ಉಡುಗಣವೇಷ್ಟಿತ* ಗಾಯನ ಇಂದಿಗೂ ಜಿ. ಎಸ್. ಶಿವರುದ್ರಪ್ಪನವರಿಗೆ ಅಚ್ಚುಮೆಚ್ಚು. ಭಾರತಾದ್ಯಂತ ತಮ್ಮ ತಂಡದೊಡನೆ ಪ್ರವಾಸ ಕೈಗೊಂಡು ಸ್ವಂತ ರಾಗ ಸಂಯೋಜನೆಯ ಮರಾಠಿ ಕಾವ್ಯ ರೂಪಾಂತರದ ''ಗೀತ ರಾಮಾಯಣ'' ನಡೆಸಿಕೊಟ್ಟು ಪ್ರಸಿದ್ಧರಾದರು. ಟ್ರೆಂಟಾನ, ಅಮೆರಿಕಾಗಳಲ್ಲಿ ಜರುಗಿದ ವಿಶ್ವಕನ್ನಡ ಸಮ್ಮೇಳನ (೧೯೮೩) ಮತ್ತು ಅಮೆರಿಕಾದ ಫೀನಿಕ್ಸ್‌ನಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ (೧೯೯೮) ಆಹ್ವಾನಿತ ಗಾಯಕಿಯಾಗಿ ಕನ್ನಡ ನಾಡಿಗೆ ಕೀರ್ತಿ ತಂದಿದ್ದಾರೆ. ಚೆನ್ನೈನಲ್ಲಿ ಜರುಗಿದ ಸಂಗೀತ ಸಮ್ಮೇಳನದಲ್ಲಿ ಇವರು ಹಾಡಿದ ಕೆಲವು ಹಾಡುಗಳು ಧ್ವನಿಮುದ್ರಿಕೆಯಾಗಿ ರಷ್ಯಾದ ಇವರು ಮಾಸ್ಕೊ ಬಾನುಲಿಯಿಂದಲೂ ಪ್ರಸಾರವಾಗಲು ಕಳುಹಿಸಲಾಗಿತ್ತು.

ಅನೇಕ ಸಾಕ್ಷ್ಯ ಚಿತ್ರಗಳಲ್ಲೂ ಇವರು ಹಾಡಿ ರಂಜಿಸಿದ್ದಾರೆ. ಸಂಗೀತದಷ್ಟೇ ಸಾಹಿತ್ಯ ಕ್ಷೇತ್ರದಲ್ಲೂ ಲೀಲಾವತಿ ಖ್ಯಾತರಾಗಿರುವುದು ವಿಶೇಷ ಗುಣ. ತರಂಗ, ಸುಧಾ, ವಿನೋದ, ಬಾಲಮಂಗಳ, ಪ್ರಜಾಮತ, ಮಲ್ಲಿಗೆ ಮೊದಲಾದವುಗಳಲ್ಲಿ ಅವರ ಲೇಖನಗಳು ಪ್ರಕಟವಾಗಿವೆ. ಇವರ 'ಮಧುಚಂದ್ರ' ಎಂಬ ಕುಟುಂಬ ಯೋಜನೆಯ ಕುರಿತ ನಾಟಕಕ್ಕೆ ಭಾರತ ಕುಟುಂಬ ಯೋಜನಾ ಸಂಸ್ಥೆಯವರು ೧೯೮೨ರಲ್ಲಿ ಏರ್ಪಡಿಸಿದ್ದ ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನವಿತ್ತು ಕರ್ನಾಟಕದ ಆಕಾಶವಾಣಿ ಕೇಂದ್ರಗಳಿಂದ ಪ್ರಸಾರ ಮಾಡಿದ್ದು ವಿಶೇಷ.

ಬೆಂಗಳೂರಿನ ಭಾರತೀಯ ಕರ್ನಾಟಕ ಸಂಘದ ಶ್ರೀಮತಿ ವಿಶಾಲಾಕ್ಷಿ ದತ್ತಿನಿಧಿ ವೈಚಾರಿಕ ಲೇಖನ ಸ್ಪರ್ಧೆಯಲ್ಲಿ ಇವರ ವೈಚಾರಿಕ ಲೇಖನಕ್ಕೆ ಪ್ರಥಮ ಬಹುಮಾನ ಬಂದಿದೆ (೧೯೯೨) ಮತ್ತು 'ಸುಗಮ ಸಂಗೀತ - ಒಂದು ಸಿಂಹಾವಲೋಕನ'ಕ್ಕೆ ಅತ್ತಿಮಬ್ಬೆ ಪ್ರತಿಷ್ಠಾನದ ದ್ವಿತೀಯ ಬಹುಮಾನ (೧೯೯೮) ಬಂದಿದೆ.

ಸುಗಮ ಸಂಗೀತದ ಯಶಸ್ಸಿಗಾಗಿ ಮೈಸೂರಿನಲ್ಲೇ ಪ್ರಪ್ರಥಮವಾಗಿ ''ಸುಗಮ ಸಂಗೀತ ಅಕಾಡೆಮಿ'' ಸ್ಥಾಪಿಸಿ ನೂರಾರು ಕಲಾವಿದರಿಗೆ ತರಬೇತು ನೀಡಿ ನಾಡಿನಾದ್ಯಂತ ಕೀರ್ತಿ ಪಡೆದಿದ್ದಾರೆ. ತನ್ನ ೫೦ ವರ್ಷಗಳ ನಿರಂತರ ಸಾಧನೆಯ ಸ್ಮರಣೆಯಾಗಿ ಕಳೆದ ವರ್ಷ ಸುವರ್ಣ ಮಹೋತ್ಸವ ಆಚರಿಸಿದ ಗಾಯಕಿ ಶ್ರೀಮತಿ ಎಚ್. ಆರ್. ಲೀಲಾವತಿಯವರನ್ನು ಕರ್ನಾಟಕ ಸರ್ಕಾರ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿರುವುದು, ಸುಗಮ ಸಂಗೀತ ಗಾನಕೋಗಿಲೆಗೆ ಕೋಡು ಮೂಡಿದಂತೆ.

ಪಿ. ಎಂ. ರಾಜನ್
ಮೈಸೂರು

## ಬರುವುದಾದರೆ ಮುಂಡಿಗೆಯ ಬಿಡಿಸು

*–''ಕೂಡಿ ಕೂಡಲಮ್ಮದ ಜಾತಿಯೇ, ನೀಂ ಕೇಳು...''*
*ಹರಿಹರ*

ಬರುವುದಾದರೆ
ಮುಂಡಿಗೆಯ ಬಿಡಿಸು !
ಬರಬೇಕು, ಬಂದರೆ
ಇಲ್ಲೇ ಇರಬೇಕು.
'ಅಣ್ಣಾ....' ಎನಿಸಿಕೊಂಡದ್ದಕ್ಕೆ
ತಮ್ಮಂದಿರ ಎಲ್ಲಾ ಮಂಗಾಟಗಳ
ಸಹಿಸಬೇಕು.

ಒಂದಾವು ಕೂಡದೆ
ಒಂಬತ್ತರ ಹಿಂದಲೆವ
ಗೂಳಿಗಳ ಹಿಡಿದು ಕಟ್ಟಬೇಕು,
ಕರೆವ ಹಸುವಿಗೆ
ಹಸಿರು ದಕ್ಕಬೇಕು,
ಊಡುವ ಕೆಚ್ಚಲಿಗೆ
ಉಣ್ಣುವ ಕರುವ ಬಿಡಬೇಕು !

ಭಂಡಾರ ಬರಿದು ಮಾಡುವ
ಮಂತ್ರಿ ಪ್ರಧಾನರನ್ನ,
ಭಟ್ಟಂಗಿ ನಗೆಯಲೇ
ಬಿಟ್ಟಿ ಕಬಳಿಸುವ ಭಕ್ತರನ್ನ,
ತೊರೆಯಬೇಕು.
ಕೇಡಿಗೆ ಕೊರಳಾಡಿಸುವ
ಕೋಲೆ ಬಸವಗಳ
ಚರ್ಮ ಸುಲಿಯಬೇಕು !

ಮಠಗಳನು 'ಮಹಾಮನೆ' ಮಾಡಿ
ಒಳಗಿರುವ ನಾರಣಕ್ರಮಿತ,
ಕೊಂಡಿಮಂಚಣ್ಣರನ್ನ ಹೊರದೂಡಬೇಕು.
ಸ್ಥಾವರದ ಒಳಗಿದ್ದು
ದೇವರಿಗೆ ಅಡ್ಡಕೂತವರನ್ನ



ಊರಾಚೆ ಮಸಣದಲಿ ಬಿಟ್ಟು ಬರಬೇಕು.
ಹೆಸರ ಹಸನುಗೆಡಿಸಿದವರ
ಮತ್ತೆ ನೀನೇ ಸಲಹಬೇಕು !

ಬೇಡ ಬೇಡ –
ಅಂದು ಮಾಡಿದ್ದು, ನೀಡಿದ್ದು, ಪಡೆದದ್ದೇ
ಸಾಕು ಸಾಕಪ್ಪಾ... ಎಂದು
ಕಪ್ಪಡಿಯ ಕಡೆಗೆ ನಡೆವುದಾದರೆ
ನೀನು ಬರುವುದೇ ಬೇಡ.
ಬರಬೇಕು, ಬಂದರೆ
ಇಲ್ಲೇ ಇರಬೇಕು.
ಕೂಡದ ಗಣತತಿಯೊಳಗೆ
ಎಂತು ಉಸಿರಾಡುವೆ ಬಸವಾ ?!

* * *

ಮುಂಡಿಗೆ = ಒಗಟು, ಆವು = ಆಕಳು, ನಾರಾಣಕ್ರಮಿತ = ಬಿಜ್ಜಳನಲ್ಲಿದ್ದ ಒಬ್ಬ ಪುರೋಹಿತ.

ಡಾ॥ ಕುಮಾರ ಚಲ್ಯ
ಕುವೆಂಪು ವಿಶ್ವವಿದ್ಯಾಲಯ, ಬಿ. ಆರ್. ಪ್ರಾಜೆಕ್ಟ್, ಶಿವಮೊಗ್ಗ ಜಿಲ್ಲೆ

ತಿಳಿವು

# ಮೌಢ್ಯದ ಎರಡು ಬಗೆ

"**ಭ**ರತಖಂಡ ಜಾನಪದದ ಉಗ್ರಾಣ" ಎಂಬುದು ಪಾಶ್ಚಾತ್ಯ ಜಾನಪದ ವಿದ್ವಾಂಸನೊಬ್ಬನ ಹೇಳಿಕೆ. ಮೂಢನಂಬಿಕೆಗಳ ಉಗ್ರಾಣವೂ ಹೌದು ಭಾರತ! ಶತಶತಮಾನಗಳಿಂದಲೂ ಅಸಂಖ್ಯ ಅಂಧಶ್ರದ್ಧೆಗಳು ನಮ್ಮ ಸಮಾಜದ ಪ್ರಗತಿಗೆ, ಪುರೋಭಿವೃದ್ಧಿಗೆ ಕಾಲ್ತೊಡಕಾಗಿ ಪರಿಣಮಿಸಿವೆ. ಅವಿದ್ಯಾವಂತರ ಸಂಖ್ಯೆ ಹೆಚ್ಚಾಗಿದ್ದ ಹಿಂದಿನ ಕಾಲಕ್ಕಷ್ಟೆ ಸೀಮಿತವಾಗಿದ್ದ ವಿದ್ಯಮಾನವಲ್ಲ, ಈ ಮೌಢ್ಯ; ಸುಶಿಕ್ಷಿತರ ಸಂಖ್ಯೆ ಅಧಿಕವಾಗಿರುವ ಆಧುನಿಕ ಕಾಲಕ್ಕೂ ಅದು ತನ್ನ ದುಷ್ಟ ಬಾಹುಗಳನ್ನು ಚಾಚಿದೆ ಎಂಬುದು ಶೋಚನೀಯವಾದ, ಆಶ್ಚರ್ಯಕರವಾದ ಸಂಗತಿ. ಅಶಿಕ್ಷಿತರಲ್ಲಿ ಮಾತ್ರವಲ್ಲ, ಸುಶಿಕ್ಷಿತರಲ್ಲೂ ಮನೆಮಾಡಿಕೊಂಡಿದೆ, ಮೂಢನಂಬಿಕೆಗಳ ಮೊತ್ತ; ಪ್ರೌಢರೆನಿಸಿಕೊಂಡವರೂ ಅದಕ್ಕೆ ಹೊರತಲ್ಲ. ಹಳ್ಳಿಗಾಡಿನ ಅನಕ್ಷರಸ್ಥರ ಅಜ್ಞಾನ ಕ್ಷಮ್ಯ; ಆದರೆ ಪಟ್ಟಣ ಪ್ರದೇಶಗಳ ವಿದ್ಯಾವಂತರ ಮೌಢ್ಯಕ್ಕೆ ಕ್ಷಮೆಯಿಲ್ಲ. ವಾಸ್ತವವಾಗಿ, ಇವರು ಸಾಕ್ಷರರಷ್ಟೆ; ನಿಜವಾದ ವಿದ್ಯೆಯ ವಾರಸುದಾರರಲ್ಲ.

ರಾಷ್ಟ್ರಕವಿ ಕುವೆಂಪು ಅವರು ಮೌಢ್ಯವನ್ನು 'ಜ್ಞಾನಪೂರ್ವ' ಮತ್ತು 'ಜ್ಞಾನೋತ್ತರ' ಎಂದು ವಿಂಗಡಿಸಿದ್ದಾರೆ. ಜ್ಞಾನಪೂರ್ವ ಮೌಢ್ಯ ಅಶಿಕ್ಷಿತ ಜನತೆಯದು; ಜ್ಞಾನೋತ್ತರ ಮೌಢ್ಯ ಸುಶಿಕ್ಷಿತರೆನಿಸಿಕೊಂಡವರದು. ಪದವೀಧರರನ್ನು ಕೂಡ ಅದು ಬಿಟ್ಟದ್ದಲ್ಲ; ಅವರದನ್ನು ಬೇಕಾದರೆ ಸ್ನಾತಕೋತ್ತರ ಮೌಢ್ಯ ಎಂದು ಕರೆಯಬಹುದು! (ಮನಸ್ಸಿಗೆ ಜ್ಞಾನಸ್ನಾನವಾಗಿರುವುದಿಲ್ಲ!) ಬಹಳ ಮಂದಿ ವಿಜ್ಞಾನದ ಪ್ರಾಧ್ಯಾಪಕರಲ್ಲೂ ವೈಜ್ಞಾನಿಕ ಮನೋಭಾವವಿರುವುದಿಲ್ಲ. ಅವರು ವಿಜ್ಞಾನವನ್ನು ಹೊತ್ತ ಕತ್ತೆಗಳು ಮಾತ್ರ ಎಂದು ಟೀಕಿಸುತ್ತಾರೆ, ಕುವೆಂಪು. ಅಂತಹ ಪ್ರಾಧ್ಯಾಪಕರು ತರಗತಿಗಳಲ್ಲಿ ವಿಜ್ಞಾನವನ್ನು ಬೋಧಿಸಿದರೂ, ಮನೆಗೆ ಹೋಗಿ, ರಾಹು ಕಾಲ ಗುಳಿಕ ಕಾಲಗಳನ್ನು ನೋಡುತ್ತಾರೆ!

ಜ್ಯೋತಿಷ್ಯ ನಮ್ಮ ಸಮಾಜದ ಮೇಲೆ ಬೀರಿರುವ ದುಷ್ಪರಿಣಾಮ, ಎಸಗಿರುವ ಅನರ್ಥ ಅಷ್ಟಿಷ್ಟಲ್ಲ. ಅದರ ಅನಿಷ್ಟ ಮುಷ್ಟಿಯಿಂದ ಜನತೆಯನ್ನು ಪಾರುಮಾಡಲು ಬಸವಣ್ಣನವರು ಅಷ್ಟೊಂದು ಹಿಂದೆಯೇ ಪ್ರಯತ್ನಿಸಿದರು; ಒಳ್ಳೆಯ ಕೆಲಸಕ್ಕೆ ಎಲ್ಲವೂ ಶುಭಲಗ್ನವೇ ಎಂದು ಸಾರಿದರು. ಆದರೆ ಇಂದಿಗೂ ನಮ್ಮ ಸಮಾಜ ಪುರೋಹಿತಶಾಹಿಯ ಕುತಂತ್ರ, ಕುಮಂತ್ರಗಳಿಂದ ತಪ್ಪಿಸಿಕೊಂಡೇ ಇಲ್ಲ ಎನ್ನುವುದು ದೊಡ್ಡ ದುರದೃಷ್ಟ. ಪ್ರಧಾನವಾದುದು ಪಂಚಾಂಗವಲ್ಲ, ರಾಜ್ಯಾಂಗ; ನಿರ್ಮಲವಾದ, ಮಾನವೀಯವಾದ ಅಂತರಂಗ (ಹಾಗೂ ಉತ್ತಮಾಂಗ, ಅರ್ಥಾತ್ ತಲೆ!) ಬಸವಣ್ಣನವರು ಒತ್ತಿಹೇಳಿದ ಅಂತರಂಗ-ಬಹಿರಂಗ ಶುದ್ಧಿಯಿಂದ ಸರ್ವೋದಯ ಸಿದ್ಧಿ.

ಜ್ಞಾನಪೂರ್ವವಾಗಲಿ, ಜ್ಞಾನೋತ್ತರವಾಗಲಿ, ಮೌಢ್ಯ ಮೌಢ್ಯವೇ; ಅದರಲ್ಲೂ ಜ್ಞಾನೋತ್ತರ ಮೌಢ್ಯ ಹೆಚ್ಚು ಅಪಾಯಕಾರಿ. ಅಪೇಕ್ಷಣೀಯವಾದುದು ವೈಜ್ಞಾನಿಕ ದೃಷ್ಟಿ; ವೈಚಾರಿಕ ಮನೋಧರ್ಮ. ಎಲ್ಲರೂ ಅದನ್ನು ಬೆಳೆಯಿಸಿಕೊಳ್ಳಬೇಕು. ಅದು ಹೊಸ ಸಹಸ್ರಮಾನಕ್ಕೆ ಬೇಕಾದ ಅರ್ಹತೆ, ಅಧಿಕಾರ. "ನಿಶ್ಶೇಷ ಜಾಡ್ಯಾಪಹಾ" - ಜಡತೆಯನ್ನು ಸಂಪೂರ್ಣ ತೊಡೆದುಹಾಕುವವಳು - ಎಂದು ಹಿಂದಿನವರು ಸರಸ್ವತಿಯನ್ನು ಸ್ತೋತ್ರಿಸಿದರು. ಮೌಢ್ಯವನ್ನು ಮೀರಿದ ಜಾಡ್ಯ ಮತ್ತೊಂದಿಲ್ಲ; ಅದು ಅಂಟು ಜಾಡ್ಯ ಕೂಡ! ❑❑❑

---

# ವಿಚಾರ ಕ್ರಿಯೆ

"**ಕ್ರಿ**ಯಾಶೀಲರಾಗುವುದು ಎಷ್ಟು ಸುಲಭ, ಆಲೋಚಿಸುವುದು ಎಷ್ಟು ಕಷ್ಟ!" ಎಂಬುದು ಮ್ಯಾಥ್ಯೂ ಆರ್ನಾಲ್ಡ್‌ನ ಒಂದು ಅರ್ಥವತ್ತಾದ ಉದ್ಗಾರ. ಆಲೋಚಿಸುವುದು ಸುಲಭ ಎಂದು ಸಾಮಾನ್ಯವಾಗಿ ತಿಳಿಯುತ್ತೇವೆ. ಆದರೆ ಇದು ತಪ್ಪು ತಿಳಿವಳಿಕೆ (ಆರ್ನಾಲ್ಡನ ಹೇಳಿಕೆಯ ಪೂರ್ವಾರ್ಧಕ್ಕೆ ಸ್ವಲ್ಪ ತಿದ್ದುಪಡಿ ಬೇಕು : ಬಹಳ ಜನರಿಗೆ ಕ್ರಿಯಾಶೀಲತೆಯೂ ಕಷ್ಟ. ಸೋಮಾರಿಗಳಿಗೆ ಬರವೆ, ಅದೂ ನಮ್ಮ ಸಮಾಜದಲ್ಲಿ?)

ಸ್ವೋಪಜ್ಞವಾಗಿ, ಸ್ವತಂತ್ರವಾಗಿ ಆಲೋಚಿಸುವುದು, ವಿಚಾರಿಸುವುದು ಸುಲಭವಲ್ಲ. ವಾಸ್ತವವಾಗಿ, ವಿಚಾರವೂ ಒಂದು ಬಗೆಯ ಕ್ರಿಯೆಯೇ. ಹಲವರಿಗೆ ಅದು ಇಷ್ಟವೂ ಅಲ್ಲ. ಶಕ್ಯವೂ ಅಲ್ಲ. ಭಾವ ಬೇರೆ, ವಿಚಾರ ಬೇರೆ ಎಂಬುದನ್ನು ನಾವು ಗಮನಿಸಬೇಕು. ಎಲ್ಲರೂ 'ಭಾವಿಸು'ತ್ತಾರಷ್ಟೆ!

ಈ ವೈಚಾರಿಕ ಆಲಸ್ಯದಿಂದಾಗಿಯೇ ಜನ ಗತಾನುಗತಿಕವಾಗಿ, ಸವೆದು ಕೊರಕಲು ಬಿದ್ದ ಜಾಡಿನಲ್ಲಿ ಸಾಗುವುದು; ಅಂಧಶ್ರದ್ಧೆಗಳನ್ನು ಬೆಳೆಯಿಸಿಕೊಳ್ಳುವುದು. ಸ್ವತಂತ್ರವಾಗಿ ಆಲೋಚಿಸದೆ ಹೊಸ ಹಾದಿಯನ್ನು ಹಿಡಿಯುವುದು ಸಾಧ್ಯವಿಲ್ಲ. ಆದರೆ ಆ ಕ್ರಮಕ್ಕೆ ತಮ್ಮ ಮನಸ್ಸನ್ನು ಒಡ್ಡಿಕೊಳ್ಳಲು ಬಹಳ ಮಂದಿ ತಯಾರಿಲ್ಲ. ಭಾರತೀಯ ಸಮಾಜ ಇನ್ನೂ ಸಾಕಷ್ಟು ಹಿಂದುಳಿದಿರುವುದಕ್ಕೆ ಈ ವೈಚಾರಿಕ ಕ್ರಿಯಾಶೂನ್ಯತೆ ಒಂದು ಮುಖ್ಯ ಕಾರಣ ಎನ್ನಬಹುದು.

ಆಲೋಚನೆಯು ಒಂದು ಕ್ರಿಯೆ ಎಂದೆವಲ್ಲವೆ? ಕನ್ನಡದಲ್ಲಿರುವ 'ಆಲೋಚನೆ ಮಾಡು', 'ವಿಚಾರ ಮಾಡು' ಎಂಬ ಮಾತುಗಳನ್ನು ಗಮನಿಸಬಹುದು. ಇಲ್ಲಿ 'ಮಾಡು' ಶಬ್ದ ಕ್ರಿಯಾಸೂಚಕವಲ್ಲವೆ? (ಇಂಗ್ಲಿಷಿನ think ಶಬ್ದದಲ್ಲಿ ಈ ಸೂಚನೆಯಿಲ್ಲ). ಆದರೆ ಭಾಷೆ, ಬದುಕುಗಳ ನಡುವೆ ಈಗ ಕಂದರವಿದೆ.

ಸಾಹಿತ್ಯ ಎನ್ನುವುದು ಭಾವಗಳ, ಅಂತೆಯೇ ವಿಚಾರಗಳ ಸಂಕೀರ್ಣ. ಅದು ಅಮೂರ್ತವಲ್ಲ; ಕೇವಲ ಮನೋವಿಲಾಸವಾಗಲಿ ಮನೋರಂಜನ ಸಾಧನವಾಗಲಿ ಅಲ್ಲ. ಕಲೆಯೊಂದು ಕ್ರಿಯೆ ಕೂಡ ಎನ್ನುತ್ತಾನೆ, ಜೀನ್ ಪಾಲ್ ಸಾರ್ತ್ರ್. ಸಾಮಾಜಿಕ ಅನಿಷ್ಟಗಳ ವಿರುದ್ಧ ಬಳಸಬಹುದಾದ ಅಸ್ತ್ರ ಅಥವಾ ಶಸ್ತ್ರವೂ ಹೌದು, ಸಾಹಿತ್ಯ. ಅದೊಂದು ಮೂರ್ತ ಶಕ್ತಿ. ಕಾವ್ಯ ಭಾವೋಪಯೋಗಿ ಮಾತ್ರವಲ್ಲ, ಲೋಕೋಪಯೋಗಿ ಕೂಡ ಎಂಬ ಕುವೆಂಪು ಅವರ ಉಕ್ತಿಯನ್ನು ಇಲ್ಲಿ ನೆನೆಯಬಹುದು.

ಏನೇ ಇರಲಿ, ಆಲೋಚನೆ ಮಾಡುವುದು, ವಿಚಾರ ಮಾಡುವುದು ಮಹತ್ತ್ವದ ಕಾರ್ಯ; ಅದನ್ನು ಎಲ್ಲರೂ ಕಲಿಯುವುದು ನಿಸ್ಸಂಶಯವಾಗಿ ಒಳ್ಳೆಯದು.

**ಡಾ|| ಸಿ. ಪಿ. ಕೃಷ್ಣಕುಮಾರ್**
೨೨೬೫, 'ಭಾರತಿ', ೬ನೆಯ ಅಡ್ಡರಸ್ತೆ
ವಿನಾಯಕ ನಗರ, ಮೈಸೂರು-೧೨

HOSATHU Kannada Monthly / October 2001 Rs. 10
RNI Regn. No. KARKAN/1999/614 REGD. CPMG / KA / BGE – 7 / 2001 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna